# ಕನ್ನಡ ಚಂಪೂ ಜೈನ ಪರಿಭಾಷೆ

ಡಾ। ಪಿ. ವಿ. ನಾರಾಯಣ



ಕನ್ನಡ ಚಂಪೂ

# ಜೈನ ಪರಿಭಾಷೆ

ಡಾ| ಪಿ. ವಿ. ನಾರಾಯಣ

*ಪ್ರಕಾಶಕರು:*

**ಹೇಮಂತ ಸಾಹಿತ್ಯ**

ನಂ. 53/1, ಕಾಟನ್‌ಪೇಟೆ ಮುಖ್ಯರಸ್ತೆ, ಬೆಂಗಳೂರು – 560 053

ದೂರವಾಣಿ : 080–26702010, ಮೊ : 94480 64619

**KANNADA CHAMPU- JAINA PARIBHASHE** – by **Dr. P. V. Narayana** *Published by:* **Hemantha Sahitya** , No. 53/1, Cottonpet Main Road, Bangalore- 560 053. Phone : 080-26702010

| | | |
|---|---|---|
| ಪ್ರಥಮ ಮುದ್ರಣ | : | 2021 |
| ಹಕ್ಕುಗಳು | : | ಲೇಖಕರು |
| ಪ್ರಕಾಶಕರು | : | ಹೇಮಂತ ಸಾಹಿತ್ಯ<br>ನಂ. 53/1, ಕಾಟನ್‌ಪೇಟೆ ಮುಖ್ಯರಸ್ತೆ,<br>ಬೆಂಗಳೂರು – 560 053<br>ದೂರವಾಣಿ : 080–26702010 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪ್‌ಲಿಥೊ<br>ಡೆಮಿ 1/8 ಪುಟ : **277** |
| ಬೆಲೆ | : | **ರೂ. 225/–** |
| ಪುಟ ವಿನ್ಯಾಸ | : | ಸ್ನೇಹ ಗ್ರಾಫಿಕ್ಸ್<br>ಬೆಂಗಳೂರು – 560 079.<br>ದೂರವಾಣಿ : 9341158906 |
| ಮುದ್ರಕರು | : | **ಪೂರ್ಣಿಮ ಪ್ರಿಂಟರ್ಸ್**<br>ನಂ.1/2, 7ನೇ ಅಡ್ಡರಸ್ತೆ, ಆಜಾದ್‌ನಗರ<br>ಚಾಮರಾಜಪೇಟೆ, ಬೆಂಗಳೂರು–560018<br>ಮೊ: 9341931668, 9880090089 |

## ಲೇಖಕನ ಅರಿಕೆ

ಈವರೆಗೆ ನಾನು **'ಹಳಗನ್ನಡ ಪದಸಂಪದ'**, **'ಚಂಪೂ ನುಡಿಗನ್ನಡಿ'** ಮತ್ತು **'ಪಂಪನ ನುಡಿಗನ್ನಡಿ'** ಎಂಬ ಕೋಶಗಳನ್ನು ಸಿದ್ಧಪಡಿಸಿದ್ದೇನೆ. ಹಳಗನ್ನಡವೆಂದರೆ ಜೈನಕವಿಗಳ ವಿಜೃಂಭಣೆ; ಜೈನ ಪುರಾಣಗಳೆಲ್ಲ ಬಹುಪಾಲು ಹಗನ್ನಡದಲ್ಲೇ ಇರುವುದು. ಜೊತೆಗೆ ಕನ್ನಡ ಪುಸ್ತಕ ಪ್ರಾಧಿಕಾರದ ಆಶಯದಂತೆ ಪಂಪನ 'ಆದಿಪುರಾಣ'ದ ಪ್ರತಿಯೊಂದು ಪದ್ಯದ ಹಾಗೂ ಗದ್ಯಭಾಗದ ಪದವಿಭಜನೆ, ಅನ್ವಯಾನುಸಾರ ಅರ್ಥ, ಗದ್ಯಾನುವಾದ ಹಾಗೂ ವಿಶೇಷ ವಿಚಾರಗಳ ಚರ್ಚೆಯನ್ನು ಸಮಗ್ರವಾಗಿ ಸಿದ್ಧಪಡಿಸುವ ಅವಕಾಶ ಒದಗಿ ಬಂತು. ಪಂಪನ 'ಆದಿಪುರಾಣ'ದಲ್ಲಿ ಬಳಕೆಗೊಂಡ ಜೈನ ಪರಿಭಾಷೆಯನ್ನು ಬೇರೆಯಾಗಿಯೇ ಜೋಡಿಸಿದೆ. ಅದೇ ಸುಮಾರು ಅರುವತ್ತು ಪುಟಗಳಷ್ಟಾದುವು. ಆ ಹಿನ್ನೆಲೆಯಲ್ಲಿ, ಇನ್ನಷ್ಟು ಪ್ರಯತ್ನಪಟ್ಟು, ಕನ್ನಡದ ಎಲ್ಲ ಚಂಪೂ ಕಾವ್ಯಗಳಲ್ಲಿ ಬಳಕೆಗೊಂಡ ಜೈನ ಪರಿಭಾಷೆಯ ಕೋಶವೊಂದನ್ನೇಕೆ ಸಿದ್ಧಪಡಿಸಬಾರದು ಎಂಬ ಆಲೋಚನೆ ಬಂತು. ಆ ಪ್ರಯತ್ನದ ಫಲವೇ ಪ್ರಸ್ತುತ **'ಕನ್ನಡ ಚಂಪೂ – ಜೈನ ಪರಿಭಾಷೆ'** ಎಂಬ ಈ ಕೃತಿ. ಬಹುತೇಕ ಕನ್ನಡ ಚಂಪೂ ಜೈನ ಪುರಾಣಗಳ ಜೊತೆಗೆ, ಜೈನ ಪರಿಭಾಷೆಯ ಶ್ರೀಮಂತ ಆಕರಗಳಾದ 'ವಡ್ಡಾರಾಧನೆ' ಮತ್ತು 'ಚಾವುಂಡರಾಯ ಪುರಾಣ'ಗಳನ್ನೂ ಈ ಉದ್ದೇಶಕ್ಕಾಗಿ ಬಳಸಿಕೊಂಡಿದ್ದೇನೆ. ಒಂದು ವಿಷಯವನ್ನು ಸ್ಪಷ್ಟಪಡಿಸಬಯಸುತ್ತೇನೆ. ಇದುವರೆಗೆ ಎಷ್ಟೋ ಜೈನ ಪರಿಭಾಷಾ ವಿವರಣೆಗಳು ಹೊರಬಂದಿವೆ. ಆದರೆ ನನ್ನ ಗಮನವಿದ್ದುದು ಪರಿಭಾಷೆಯ ಕಡೆಗಿಂತ ಹೆಚ್ಚಾಗಿ ಚಂಪೂ ಕಾವ್ಯಗಳ, ಅದರಲ್ಲಿಯೂ ಪುರಾಣಕಾವ್ಯಗಳ ಅಧ್ಯಯನದಲ್ಲಿ ಪರಿಭಾಷೆ ನಡುವೆ ಬಂದು ಕಾವ್ಯಾನುಸಂಧಾನಕ್ಕೆ ತೊಡಕನ್ನುಂಟುಮಾಡುವ ಅಂಶ. ಅದನ್ನು ಈ ನನ್ನ ಪ್ರಯತ್ನದಿಂದ ಸಾಕಷ್ಟು ಮಟ್ಟಿಗೆ ನಿವಾರಿಸಬಹುದಲ್ಲ ಎಂಬುದರ ಕಡೆಗೆ ನನ್ನ ಗಮನ. ಹಾಗೆ ನೋಡಿದರೆ, ಯಾವುದೇ ಧರ್ಮದ ಬಗ್ಗೆ ನನಗೆ ಅಂಥದ್ದೇನೂ ಒಲವಿಲ್ಲ; ಧರ್ಮದ ಬಗೆಗಿನ ನನ್ನ ಆಸಕ್ತಿಯಿರುವುದು ಶೈಕ್ಷಣಿಕ ಕಾರಣದಿಂದಲೇ

ಹೊರತು ಆಮುಷ್ಮಿಕ ಉದ್ದೇಶದಿಂದ ಅಲ್ಲ. ಹೀಗಾಗಿ ಹಳಗನ್ನಡ ವಿದ್ಯಾರ್ಥಿಯಾದ ನಾನು ಮಾಡಿರುವ ಈ ಪ್ರಯತ್ನವನ್ನು ನೋಡಬೇಕು. ನೀಡುವ ಅರ್ಥಕ್ಕಾಗಿ ನಾನು ಅನೇಕ ಕೃತಿಗಳ ಸಹಾಯವನ್ನು ಪಡೆದಿದ್ದೇನೆ. ಆದರೂ ಇದೂ ಸಮಗ್ರವಾಗಿಲ್ಲ ಎಂಬುದರ ಅರಿವು ನನಗಿದೆ; ಜೊತೆಗೆ ನಾನು ಜೈನ ಧರ್ಮದ ಒಳಗಿನವನಲ್ಲವಾದ ಕಾರಣ ಅನೇಕ ವಿವರಣೆಗಳಿಗೆ ನಾನು ಕೊಡುವ ಅರ್ಥವೋ ವಿವರಣೆಯೋ ಸಮರ್ಪಕವಾಗಿಲ್ಲದಿರಬಹುದು. ಅದಕ್ಕಾಗಿ ಕ್ಷಮೆಯಿರಲಿ.

ಈ ಕೋಶವನ್ನು ಪ್ರಕಟಿಸುತ್ತಿರುವ ಹೇಮಂತ ಪ್ರಕಾಶನದ ಒಡೆಯರಾದ ಶ್ರೀ ವೆಂಕಟೇಶ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಪಿ. ವಿ. ನಾರಾಯಣ

ಬೆಂಗಳೂರು
೨೧-೦೧-೨೦೧೯

## ಈ ಕೋಶದ ಆಕರ ಕೃತಿಗಳು

ಈ ಕೃತಿಯಲ್ಲಿ ಬಂದಿರುವ ಶಬ್ದಗಳನ್ನು ಈ ಕೆಳಕಂಡ ಗ್ರಂಥಗಳಿಂದ ಸಂಗ್ರಹಿಸಲಾಗಿದೆ

ಕನ್ನಡ ವಿಶ್ವವಿದ್ಯಾಲಯ, ಹಂಪಿಯು ೨೦೦೮ ರಲ್ಲಿ ಹೊರತಂದ ಸಮಗ್ರ ಜೈನ ಸಾಹಿತ್ಯ ಮಾಲೆಯ ಸಂಪುಟಗಳು:

| ಕೃತಿಯ ಹೆಸರು | ಕೃತಿಕಾರ | ಕಾಲ | ಸಂಪಾದಕರು | ಸಂಕೇತ |
|---|---|---|---|---|
| ಚಾವುಂಡರಾಯ ಪುರಾಣ | ಚಾವುಂಡರಾ | ಕ್ರಿಶ ೯೭೮ | ಕಮಲಾ ಹಂಪನಾ | ಚಾವುಂಡಪು |
| ಶಾಂತಿಪುರಾಣ | ಪೊನ್ನ | ಕ್ರಿಶ ೯೫೦ | ಹಂಪ ನಾಗರಾಜಯ್ಯ | ಶಾಂತಿಪು |
| ಶಾಂತೀಶ್ವರಪುರಾಣ | ಕಮಲಭವ | ಕ್ರಿಶ ೧೨೬೫ | ಹಂಪ ನಾಗರಾಜಯ್ಯ | ಶಾಂತೀಶ್ವಪು |
| ಸುಕುಮಾರ ಚರಿತೆ | ಶಾಂತಿನಾಥ | ಕ್ರಿಶ ೧೦೬೮ | ಪಿ.ವಿ. ನಾರಾಯಣ | ಸುಕುಮಾಚ |
| ಕಬ್ಬಿಗರ ಕಾವ | ಆಂಡಯ್ಯ | ಕ್ರಿಶ ೧೨೩೫ | ಪಿ.ವಿ. ನಾರಾಯಣ | ಕಬ್ಬಿಗಕಾ |
| ಮಲ್ಲಿನಾಥಪುರಾಣ | ನಾಗಚಂದ್ರ | ಕ್ರಿಶ ೧೧೦೦ | ಶಾಂತಿನಾಥ ದಿಬ್ಬದ | ಮಲ್ಲಿನಾಪು |
| ಧರ್ಮಾಮೃತ | ನಯಸೇನ | ಕ್ರಿಶ ೧೧೧೨ | ಎಸ್.ಪಿ. ಪಾಟೀಲ | ಧರ್ಮಾಮೃತ |
| ಸಮಯ ಪರೀಕ್ಷೆ | ಬ್ರಹ್ಮಶಿವ | ಕ್ರಿಶ ೧೧೫೦ | ಟಿ.ವಿ. ವೆಂಕಟಾಚಲಶಾಸ್ತ್ರೀ | ಸಮಯಪ |
| ಧರ್ಮಪರೀಕ್ಷೆ | ವೃತ್ತವಿಲಾಸ | ಕ್ರಿಶ ೧೩೬೦ | ಕೆ. ರಾಘವೇಂದ್ರರಾವ್ | ಧರ್ಮಪ |
| ಅರ್ಧನೇಮಿ ಪುರಾಣ | ನೇಮಿಚಂದ್ರ | ಕ್ರಿಶ ೧೧೭೦ | ದೇ. ಜವರೇಗೌಡ | ನೇಮಿನಾಪು |
| ಜೀವಸಂಬೋಧನಂ | ಬಂಧುವರ್ಮ | ಕ್ರಿಶ ೧೨೦೦ | ಬಿ.ಎಸ್. ಸಣ್ಣಯ್ಯ | ಜೀವಸಂ |
| ಹರಿವಂಶಾಭ್ಯುದಯ | ಬಂಧುವರ್ಮ | ಕ್ರಿಶ ೧೨೦೦ | ಬಿ.ಎಸ್. ಸಣ್ಣಯ್ಯ | ಹರಿವಂಶ |

| | | | | |
|---|---|---|---|---|
| ಚಂದ್ರಪ್ರಭ ಪುರಾಣ | ಅಗ್ಗಳ | ಕ್ರಿಶ ೧೧೮೯ | ಜಿ.ಜಿ. ಮಂಜುನಾಥನ್ | ಚಂದ್ರಪ್ರಪು |
| ವರ್ಧಮಾನಪುರಾಣ | ಆಚಣ್ಣ | ಕ್ರಿಶ ೧೧೯೫ | ಜಿ.ಜಿ. ಮಂಜುನಾಥನ್ | ಆಚವರ್ಧ |
| ಯಶೋಧರ ಚರಿತೆ | ಜನ್ನ | ಕ್ರಿಶ ೧೨೦೯ | ಸಿ.ಪಿ. ಕೃಷ್ಣಕುಮಾರ್ | ಯಶೋಧಚ |
| ಅನಂತನಾಥ ಪುರಾಣ | ಜನ್ನ | ಕ್ರಿಶ ೧೨೦೯ | ಸಿ.ಪಿ. ಕೃಷ್ಣಕುಮಾರ್ | ಅನಂತಪು |
| ಪುಷ್ಪದಂತ ಪುರಾಣ | ಗುಣವರ್ಮ ೨ | ಕ್ರಿಶ ೧೨೧೫ | ವೈ.ಸಿ. ಭಾನುಮತಿ | ಪುಷ್ಪದಂಪು |
| ಪಾರ್ಶ್ವನಾಥ ಪುರಾಣ | ಗುಣವರ್ಮ ೨ | ಕ್ರಿಶ ೧೨೧೫ | ವೈ.ಸಿ. ಭಾನುಮತಿ | ಪಾರ್ಶ್ವನಾಪು |
| ಧರ್ಮನಾಥ ಪುರಾಣ | ಬಾಹುಬಲಿ | ಕ್ರಿಶ ೧೩೫೨ | ಎನ್. ಬಸವಾರಾಧ್ಯ | ಧರ್ಮಬಾಹು |
| ಧರ್ಮನಾಥ ಪುರಾಣ | ಮಧುರ | ಕ್ರಿಶ ೧೩೮೫ | ಎನ್. ಬಸವಾರಾಧ್ಯ | ಧರ್ಮಮಧು |

**ಚಂಪೂ ಕೃತಿಗಳ ಬಿಡಿ ಪ್ರಕಟಣೆಗಳು:**

| | | | | |
|---|---|---|---|---|
| ಆದಿಪುರಾಣ | ಪಂಪ | ಕ್ರಿಶ ೯೪೨ | ಪಿ. ವಿ. ನಾರಾಯಣ (ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೮) | **ಆದಿಪು** |
| ಪಂಪ ಮಹಾಕವಿ ವಿರಚಿತ | ಆದಿಪುರಾಣ | | ಕೆ ಎಲ್ ನರಸಿಂಹಶಾಸ್ತ್ರಿ (ಕನ್ನಡ ಸಾಹಿತ್ಯ ಪರಿಷತ್ತು, ೨೦೦೪) | ಉಲ್ಲೇಖ |
| ವರ್ಧಮಾನಪುರಾಣ | ನಾಗವರ್ಮ-೨ | ಕ್ರಿಶ ೧೦೪೨ | ಬಿ.ಸ್. ಸಣ್ಣಯ್ಯ (ಕಅಸಂಸ್ಥೆ, ಮೈಸೂರು ವಿವಿ, ೧೯೭೪) | **ವರ್ಧಮಾಪು** |
| ರಾಮಚಂದ್ರಚರಿತಪುರಾಣ | ನಾಗಚಂದ್ರ | ಕ್ರಿಶ ೧೧೧೦ | (ಕನ್ನಡ ಸಾಹಿತ್ಯ ಪರಿಷತ್ತು, ೧೯೭೬) | **ಪಂಪರಾ** |
| ಪುಣ್ಯಾಸ್ರವ | ನಾಗರಾಜ | ಕ್ರಿಶ ೧೩೩೧ | ದೇ. ಜವರೇಗೌಡ (ಕಅಸಂಸ್ಥೆ, ಮೈಸೂರು ವಿವಿ, ೧೯೭೭) | **ಪುಣ್ಯಾಸ್ರ** |
| **ಹಳಗನ್ನಡಯುಗದ ಗದ್ಯಕೃತಿಗಳು:** | | | | |
| ವಡ್ಡಾರಾಧನೆ | ಶಿವಕೋಟಿ | ಕ್ರಿಶ ೧೧೦೦ | ಡಿ.ಎಲ್. ನರಸಿಂಹಾಚಾರ್ (ಶಾರದಾ ಮಂದಿರ, ಮೈಸೂರು, ೧೯೭೦) | **ವಡ್ಡಾರಾ** |
| ಚಾವುಂಡರಾಯ ಪುರಾಣಂ | ಚಾವುಂಡರಾಯ | ಕ್ರಿಶ ೯೭೮ | ಎಂ. ಎ. ಜಯಚಂದ್ರ (ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೨) | **ಚಾವುಂಡಜಯ** |

ಈ ಕೃತಿಯಲ್ಲಿನ ಶಬ್ದಗಳಿಗೆ ಮೇಲ್ಕಂಡ ಗ್ರಂಥಗಳಲ್ಲದೆ, ಮಿಕ್ಕ ಅನೇಕ ಕೃತಿಗಳ ಶಬ್ದಕೋಶಗಳನ್ನೂ, ಅನೇಕ ನಿಘಂಟು ಮತ್ತು ಕೋಶಗಳನ್ನೂ ಬಳಸಿಕೊಳ್ಳಲಾಗಿದೆ. ಈ ಗ್ರಂಥಗಳ ಸಂಪಾದಕರಿಗೂ, ನಾನಾ ಬಗೆಯ ನಿಘಂಟುಕಾರರಿಗೂ ಕೋಶಕಾರರಿಗೂ **'ಕನ್ನಡ ಚಂಪೂ ಜೈನಪರಿಭಾಷೆ'** ಕೃತಿಕಾರನ ಕೃತಜ್ಞತಾಪೂರ್ವಕ ನಮಸ್ಕಾರಗಳು

# ಕನ್ನಡ ಚಂಪೂ – ಜೈನ ಪರಿಭಾಷೆ

## ಅ

**ಅಂಗ** – ಜೈನಾಗಮದ ಒಂದು ವಿಭಾಗ, ತೀರ್ಥಂಕರರ ಉಪದೇಶಗಳನ್ನೊಳಗೊಂಡ ಆಗಮ; ಇವು ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಜ್ಞಾತೃಧರ್ಮಕಥಾಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಅನುತ್ತರೋಪ ಪಾದಿಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗ ಎಂಬ ಹನ್ನೆರಡು ವಿಭಾಗಗಳಲ್ಲಿವೆ (ಅಂತು ಜೈನದೀಕ್ಷೆಯುಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗ ಚತುರ್ದಶಪೂರ್ವಂಗಳಂ ಕಲ್ತು: **ಆದಿಪು,** ೧೪. ೧೫೯ ವ); ಅಷ್ಟಾಂಗ ಮಹಾನಿಮಿತ್ತದ ಒಂದು ಅಂಗ (ಅಂಗಮೆಂಬುದು ಅಂಗ ಪ್ರತ್ಯಂಗ ದರ್ಶನ ಸ್ಪರ್ಶನಾದಿಗಳಿಂದಂ ವ್ಯಾಧಿ ಲಾಭಾಲಾಭ ಸುಖದುಃಖಾದ್ಯಾವೇದನಂ: **ಚಾವುಂಡಜಯ,** ಪು. ೧೫೪)

**ಅಂಜನೆ** – ಒಂದು ನರಕದ ಹೆಸರು (ಅಂಜನೆಯೆಂಬ ಪೆಸರ ಪಂಕಪ್ರಭೆಯೆಂಬ ನಾಲ್ಕನೆಯ ನರಕಮಿರ್ದುದು: **ಅಜಿತಪು,** ೧೧. ೬ ವ)

**ಅಂತರಂಗತಪ** – ಪ್ರಾಯಶ್ಚಿತ್ತ, ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಮತ್ತು ಧ್ಯಾನ ಎಂಬ ಆರು ಪ್ರಕಾರಗಳಿರುವ ತಪಸ್ಸು (ಅಂತರಂಗತಪಮುಂ ತಮಗೆಯ್ದೆ ಮಹಾತ್ಮರೆಯ್ದಿದರ್ ಚಾರಣಋದ್ಧಿಯಂ: **ಕರ್ಣನೇಮಿ,** ೨. ೧೦)

**ಅಂತರಾಯ** – ಮೋಕ್ಷಸಂಪಾದನೆಗೆ ಬರುವ ಅಡ್ಡಿ (ಅಧ್ಯಯನಾಂತರಾಯಮಂ ಮಾಡಲೆಂದವರೋದುವ ಆವಾಸದೊಳ್ ಸಂಕ್ಲೇಷವಾಗೆ: **ಆದಿಪು,** ೩. ೩೮ ವ)

**ಅಂತರಾಯಪಂಚಕ** – ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ, ವೀರ್ಯಾಂತರಾಯ – ಎಂಬ ಮೋಕ್ಷ ಸಂಪಾದನೆಯ ಐದು ವಿಘ್ನಗಳು (ಅಂತರಾಯುಮುಂ ದಾನಲಾಭ ಭೋಗೋಪಭೋಗ ವೀರ್ಯಾಂತರಾಯ ಪ್ರಕಾರದಿಂ ಪಂಚವಿಧಮಕ್ಕುಂ: **ಶಾಂತಿಪು,** ೧೨. ೧೧ ವ)

**ಅಂತರಿಕ್ಷ** – ಅಷ್ಟಾಂಗಮಹಾನಿಮಿತ್ತದ ಒಂದು ಭಾಗ (ಅಂತರಿಕ್ಷಮೆಂಬುದು ರವಿ ಶಶಿ ಗ್ರಹ ನಕ್ಷತ್ರ ಭಗಣೋದಯಾದಿ ಅಸ್ತಮಯಾದಿಗಳಿಂದಮತೀತಾನಾಗತ ವರ್ತಮಾನ ಫಲ ಪ್ರವಿಭಾಗನಿರೂಪಣಂಗೆಯ್ವುದು: **ಚಾವುಂಡಜಯ,** ಪು. ೧೫೪)

**ಅಂತರ್ಮುಹೂರ್ತ** – ಒಂದು ಮುಹೂರ್ತಕ್ಕಿಂತ ಕಡಿಮೆಯಾದ ಕಾಲ, ತುಂಬ ಕಡಿಮೆ ಪ್ರಮಾಣದ ಕಾಲ (ಬಟಿಯುಮಂತರ್ಮುಹೂರ್ತದೊಳಾಹಾರ ಶರೀರೇಂದ್ರಿಯೋಚ್ಛ್ವಾಸಭಾಷಾಮನಃಪರ್ಯಾಪ್ತಿಗಳೊಳ್: **ಆದಿಪು,** ೫. ೮೩ ವ)

**ಅಂಬರಚಾರಣ** – ಆಕಾಶಗಾಮಿಯಾದ ಮುನಿ (ನಾಲ್ವರ ಭವಾವಳಿಯಂ ಬೆಸೆಸಿಂ ಎಂಬುದುಂ ಅಂಬರಚಾರಣರ್ ಇಂತೆಂದರ್: **ಚಾವುಂಪು,** ಪು. ೧೮೦, ಸಾ. ೫)

**ಅಂಬಾಚರಿ**– ಹಿಂದಿನ ಜನ್ಮದಲ್ಲಿ ಒಬ್ಬ ವ್ಯಕ್ತಿಯ ತಾಯಿಯಾಗಿದ್ದು, ಈಗ ಬೇರೊಂದು ಪ್ರಾಣಿಯಾಗಿ ಹುಟ್ಟಿರುವ ಹೆಣ್ಣುಜೀವಿ (ಅರಸನುಮಾಗಳೆ ನೆತ್ತದ ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಳೆಂದರೆಗೆತ್ತು ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀಬ್ಬ ನಂದನಚರನಂ: **ಯಶೋಧಚ,** ೩. ೪೨)

**ಅಕಾಮನಿರ್ಜರೆ** – ಎರಡು ಬಗೆಯ ನಿರ್ಜರೆಗಳಲ್ಲಿ ಒಂದು; ವ್ಯಕ್ತಿಯ ಉದ್ದೇಶವಿಲ್ಲದೆ ಕರ್ಮಗಳು ತಮ್ಮಷ್ಟಕ್ಕೆ ತಾವೇ ಬಿಟ್ಟುಹೋಗುವುದು; (ಮತ್ತೆ ಸಕಾಮ ನಿರ್ಜರೆಯೆಂದಕಾಮನಿರ್ಜರೆಯುಮೆಂದುಮೆರಳ್ತೆಜಿನಕ್ಕುಂ: **ಧರ್ಮಬಾಹು,** ೧೬, ೨೯೫ ವ)

**ಅಕ್ಷಯತೃತೀಯೆ** – ಶ್ರೇಯಾಂಸನು ಆದಿ ತೀರ್ಥಂಕರನಿಗೆ ಅಹಾರದಾನ (ಕಬ್ಬಿನ ಹಾಲನ್ನು ಆದಿದೇವನ ಬೊಗಸೆಗೆ ಎರೆಯುವ ಮೂಲಕ) ಮಾಡಿದ ಪುಣ್ಯದಿನ; ವೈಶಾಖ ಶುದ್ಧ ತದಿಗೆ (ಅಕ್ಷಯದಾನಂ ನಿಮಗಕ್ಕಕ್ಷುಣ್ಣಮಿದೆಂದು ಪರಮ ಮುನಿ ಪರಸೆ ಬಟಿಕ್ಕಕ್ಷಯತೃತೀಯೆಯಿಂದಖಿಲಕ್ಷಿತಿಗಂ ನೆಗಬ್ದುದಲ್ತೆ ತತ್ಪುಣ್ಯದಿನಂ: **ಆದಿಪು,** ೧೦. ೬)

**ಅಕ್ಷಯದಾನ** – ಆಹಾರವಿತ್ತವರಿಗೆ ಜೈನ ಮುನಿಗಳು ಮಾಡುವ ಆಶೀರ್ವಾದ (ಅವರ್ ಸಂಯಮಸಂರಕ್ಷಣಾರ್ಥಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ ಕೈಗೆತ್ತಿಕೊಂಡು ಅಕ್ಷಯದಾನಮೆಂಬುದುಂ: **ಪಂಪರಾ,** ೧ ವ)

**ಅಕ್ಷೀಣಋದ್ಧಿ** – ಮುನಿಗಳಿಗೆ ಒದಗಿ ಬರುವ ಅಷ್ಟ ಋದ್ಧಿಗಳಲ್ಲಿ ಒಂದು, ಇದರಲ್ಲಿ ಅಕ್ಷೀಣಮಹಾಶನ ಅಕ್ಷೀಣಬಾಹಾಬಳ ಎಂಬ ಎರಡು ಬಗೆ (ಅಕ್ಷೀಣ ಮಹಾಶನಂ ಅಕ್ಷೀಣಬಾಹಾಬಳಮೆಂದಿರ್ತೆಜಿನಾದಕ್ಷೀಣ ಋದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

**ಅಕ್ಷೀಣಬಾಹಾಬಳ** – ಮುನಿಗಳಿಗೆ ಒದಗಿ ಬರುವ ಅಷ್ಟ ಋದ್ಧಿಗಳಲ್ಲಿ ಒಂದು ಅಕ್ಷೀಣಋದ್ಧಿ, ಅದರಲ್ಲಿ ಒಂದು ಅಕ್ಷೀಣಬಾಹಾಬಳ; ಕಡಿಮೆಯಾಗದಿರುವ ಬಾಹುಬಲ (ಅಕ್ಷೀಣಮಹಾಶನಂ ಅಕ್ಷೀಣಬಾಹಾಬಳಮೆಂದಿರ್ತೆಜಿನಾದಕ್ಷೀಣ ಋದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

**ಅಕ್ಷೀಣಮಹಾಶನ** – ಮುನಿಗಳಿಗೆ ಒದಗಿ ಬರುವ ಅಷ್ಟ ಋದ್ಧಿಗಳಲ್ಲಿ ಒಂದು ಅಕ್ಷೀಣಋದ್ಧಿ, ಅದರಲ್ಲಿ ಒಂದು ಅಕ್ಷೀಣಮಹಾಶನ, ಮುನಿಗಳ ಊಟವಾದ ಬಳಿಕ ಅಡಿಗೆಮನೆಯಲ್ಲಿ ಯಾವುದೇ ಆಹಾರಪದಾರ್ಥ ಕಡಿಮೆಯಾಗದಿರುವುದು (ಅಕ್ಷೀಣಮಹಾಶನಂ ಅಕ್ಷೀಣ ಬಾಹಾಬಳಮೆಂದಿರ್ತೆಜಿನಾದಕ್ಷೀಣ ಋದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

**ಅಖಿಳಾಗಮವಿತ್ತ್ವ** – ಎಲ್ಲ ಶಾಸ್ತ್ರಗಳ ಪರಿಣತೆ (ಮಿತನಖಕೇಶಶೋಭಿತ ತನುತ್ವಂ ಅಭುಕ್ತ್ಯುಪಸರ್ಗಭಾವಂ ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ: **ಆದಿಪು,** ೧೦. ೪೩)

**ಅಗುರುಲಘುತ್ವ** – ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು, [ಮನಸ್ಸು] ಹಗುರ ಅಥವಾ ಭಾರವಾಗದ ಸಮಸ್ಥಿತಿ (ಸಮ್ಯಕ್ ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ನೆನೆಯುತ್ತುಂ: **ಆದಿಪು,** ೧೦. ೧೪ ವ)

**ಅಗ್ನಿಹೋತ್ರಮಂತ್ರ** – ಕ್ರಿಯಾಮಂತ್ರ ಅಗ್ನಿಹೋತ್ರಮಂತ್ರ ಯಜ್ಞಮಂತ್ರ ಸಂಯಮಮಂತ್ರ ಮತ್ತು ಕರ್ಣಜಾಪ್ಯಮಂತ್ರ ಎಂಬ ಮಂತ್ರದ ಐದು ಬಗೆಗಳಲ್ಲಿ ಒಂದು, ಅಗ್ನಿಹೋತ್ರಮಂತ್ರವೆಂಬುದು ಸಿದ್ಧಸೇವೆಗೆ ಕಾರಣವಾಗುವುದು (ಕ್ರಿಯಾಮಂತ್ರಂ ಸಪ್ತಪರಮ ಸ್ಥಾನಾರ್ಹಂತ್ಯಮುಂ ಮಾಳ್ಕುಂ; ಅಗ್ನಿಹೋತ್ರಮಂತ್ರಂ ಸಿದ್ಧಸೇವೆಗೆ ಹೇತು; ಯಜ್ಞಮಂತ್ರ ಪರಮೇಷ್ಠಿಸೇವಗೆ ಹೇತು; ಸಂಯಮ ಮಂತ್ರಂ ಸಕಲ ವೃತ್ತಿಗೆ ಹೇತು, ಕರ್ಣಜಾಪ್ಯಮಂತ್ರಂ ಶಿವಗತಿಗೆ ಕಾರಣಂ, ಇವಯ್ದು ನಿರವದ್ಯಮಂತ್ರಂಗಳ್ **ಚಾವುಂಡಜಯ,** ಪು. ೧೮೮)

**ಅಗ್ರನಿರ್ವೃತಿ** – ಒಂದು ಗರ್ಭಾನ್ವಯಕ್ರಿಯೆ, ವೈರಾಗ್ಯಪ್ರಾಪ್ತಿ (ಆರ್ಹಂತ್ಯ ವಿಹಾರ ಯೋಗತ್ಯಾಗ ಅಗ್ರನಿರ್ವೃತಿಯೆಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಅಗ್ರನಿರ್ವೃತಿಕ್ರಿಯೆ** – ಅಘಾತಿಕರ್ಮಗಳನ್ನು ಕೆಡಿಸಿ ಲೋಕಾಗ್ರದಲ್ಲಿ ನಿಲ್ಲುವುದು (ಅಘಾತಿಗಳನ್ನು ಕಿಡಿಸಿ ಲೋಕಾಗ್ರದೊಳ್ ನಿಲ್ವುದಗ್ರನಿರ್ವೃತಿಕ್ರಿಯೆ: **ಚಾವುಂಡಜಯ,** ಪು ೧೮೭)

**ಅಘಾತಿಕರ್ಮ** – ಜೀವದ ಅನಂತಜ್ಞಾನಾದಿ ಗುಣಗಳನ್ನು ನಾಶ ಮಾಡದ ವೇದನೀಯ, ಆಯು, ನಾಮ, ಗೋತ್ರ ಎಂಬ ನಾಲ್ಕು ಕರ್ಮಗಳು (ಅರ್ಹದ್ದಾಸಕೇವಳಿಗಳುಂ ವಿಹಾರಿಸಿ ಬಂದು ಗಂಧಮಾದನನಗದೊಳ್ ಅಘಾತಿಕರ್ಮ ನಿರ್ಮೂಳ ನಂಗೆಯ್ದು: **ಕರ್ಣನೇಮಿ,** ೨. ೧೬ ವ)

**ಅಘಾತಿಕಲುಷ** – ಜೀವನದ ಅನಂತಜ್ಞಾನಾದಿ ಗುಣಗಳನ್ನು ನಾಶಮಾಡುವ ಕರ್ಮಗಳು (ದಾರುಣಘಾತ್ಯಘಾತಿಕಲುಷಂ ಕಿಡೆ ನೈಜಗುಣಂಗಳೆಂಟುಮಾಕಾರಮನೆಯ್ದೆ: **ಧರ್ಮಬಾಹು,** ೧. ೨)

**ಅಘಾತಿಚತುಷ್ಕ** – ನಾಲ್ಕು ಅಘಾತಿಕರ್ಮಗಳು (ಖಂಡಿತಾಘಾತಿಚತುಷ್ಕಸ್ಥಿತ್ಯನುಭಾಗಂ ಅಪಗತ ಮೂಲಶರೀರಪ್ರಮಾಣಾತ್ಮಪ್ರದೇಶಂ: **ಆದಿಪು,** ೧೬. ೪೯ ವ)

**ಅಚಕ್ಷುದರ್ಶನಾವರಣೀಯ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಕಣ್ಣ ಹೊರತು ಉಳಿದ ಇಂದ್ರಿಯಗಳ ಹಾಗೂ ಮನದ ಕಾಣ್ಕೆಯನ್ನು ಮರೆಮಾಚುವುದು (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲ ದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ಅಚ್ಯುತ** – ಆ ಹೆಸರಿನ ಹದಿನಾರನೆಯ ಸ್ವರ್ಗ (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಅಚ್ಯುತಪ್ರಾಂತರ** – ಅಚ್ಯುತಕಲ್ಪ (ಸಮಾಧಿವಡೆದು ಶುಭೋದಯದಿಂ ಪೊಕ್ಕರ್ ಅಚ್ಯುತಪ್ರಾಂತರಮಂ: **ಕರ್ಣನೇಮಿ,** ೧೪. ೧೨೪)

**ಅಚ್ಯುತೇಂದ್ರ** – ಅಚ್ಯುತಕಲ್ಪದ ಇಂದ್ರ (ಅಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು ಪೋಗಿ: **ಆದಿಪು,** ೨. ೭೭ ವ)

**ಅಜಾತ** – ಜಿನ (ಪಾಪೇಭಕಂಠೀರವನುಂ ಶ್ರೀವಿಜಯನುಮಜಾತನ ಪಾದಪಯೋಜ ಯುಗಳಕ್ಕೆರಗಿ: **ಶಾಂತಿಪು,** ೬. ४೧)

**ಅಜಿತ** – ಎರಡನೆಯ ತೀರ್ಥಂಕರನಾದ ಅಜಿತನಾಥ (ಆ ದಿವಿಜೇಂದ್ರಂಗಾದುದು ಗೀತವಾದ್ಯ ನೃತ್ಯಪ್ರಸಂಗಂ ಅಜಿತನ ಕೆಲದೊಳ್: **ಅಜಿನಾಪು,** ೫. ೮೩)

**ಅಜೀವ** – ಏಳು ತತ್ವಗಳಲ್ಲಿ ಎರಡನೆಯದು; ಚೈತನ್ಯರಹಿತವಾದುದು; (ತೋರ್ಪಿನಂ ಜೀವಮಜೀವಮೆಂಬ ಅಖಿಲವಸ್ತುಗಳುಂ: **ಪಂಪರಾ,** ೧೬. ೬೮)

**ಅಜೀವತತ್ವ** – ಅಜೀವ; ಅದು ಗತಿ ಸ್ಥಿತಿ ಅವಗಾಹ ಶರೀರ ಮುಂತಾದ ವರ್ತನೆಯ ಕಾರಣಗಳಾದ ಧರ್ಮ ಅಧರ್ಮ ಆಕಾಶ ಪುದ್ಗಲ ಮತ್ತು ಕಾಲಗಳ ವ್ಯತ್ಯಾಸದಿಂದಾಗಿ ಐದು ಬಗೆ (ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹ ಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲಕಾಲಭೇದದಿಂ ಪಂಚವಿಧಂ: **ಆದಿಪು,** ೧೦. ೬೧ ವ)

**ಅಜೀವರತ್ನ** – ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ಹದಿನಾಲ್ಕು ರತ್ನಗಳಲ್ಲಿನ ಏಳು ಅಜೀವರತ್ನಗಳಲ್ಲಿ ಒಂದು (ಆ ಚಕ್ರರತ್ನದ ಬಟಿಯೊಳ್ ಸಂಗಳಿಸಿದ

ವಿಳಸತ್ಛತ್ರ ಚರ್ಮ ಮಣಿ ಕಾಕಿಣೀ ಖಡ್ಗ ದಂಡಂಗಳೆಂಬ .. ಆಱುಂ ಅಜೀವರತ್ನಂಗಳುಮಂ ... ಏೞುಂ ಜೀವರತ್ನಂಗಳುಮಂ ... ಪೂಜೆಗೆಯ್ದು: **ಶಾಂತೀಶ್ವಪು,** ೧೨. ೩ ವ)

**ಅಜ್ಜಿ** – ಜೈನ ಸನ್ಯಾಸಿನಿ (ನಾರಿಯರ್ ಅಜ್ಜಿಯ ರೂಪಂ ವೈರಾಗ್ಯದೆ ಕೊಂಡುಂ ಎಲ್ಲಿಯುಂ ತಮ್ಮವರಂ ಕೂರೆ ತಿರಿತಂದು ರಕ್ಷಿಪರ್: **ಸಮಯಪ,** ೫. ೧೧೨)

**ಅಜ್ಜಿಕೆ** – ಜೈನ ಸನ್ಯಾಸಿನಿ (ಮೂಱುಲಕ್ಕೆಯುಮಿರ್ಪತ್ತು ಸಾಸಿರ್ವರಜ್ಜಿಕೆಯರುಮಂ: **ಅಜಿತಪು,** ೮. ೨೫ ವ)

**ಅಜ್ಞಾನತ್ರಯ** – ಕುಮತಿ, ಕುಶ್ರುತ, ವಿಭಂಗ ಎಂಬ ಮೂರು ಬಗೆಯ ಅಜ್ಞಾನಗಳು (ಅಜ್ಞಾನತ್ರಯರಹಿತರ್ ತ್ರಿಜ್ಞಾನಧರರ್ ವಿದೇಹದಿಂ ಬಂದಧಿಕಪ್ರಜ್ಞರ್ ಪುಟ್ಟುವರ್: **ಪಂಪರಾ,** ೧. ೬೯)

**ಅಣಿಮಾ** – ದೇವತೆಗಳು ಹೊಂದುವ ಎಂಟು ಬಗೆಯ ಋದ್ಧಿಗಳಲ್ಲಿ ಒಂದಾದ ವಿಕ್ರಿಯಾಋದ್ಧಿಯ ಅಣಿಮಾ, ಲಘಿಮಾ, ಗರಿಮಾ, ಅಂತರ್ಧಾನ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವಗಳೆಂಬ ಎಂಟು ಸಾಮರ್ಥ್ಯಗಳಲ್ಲಿ ಒಂದು; ಅತ್ಯಂತ ಸೂಕ್ಷ್ಮರೂಪವನ್ನು ಹೊಂದಬಲ್ಲ ಶಕ್ತಿ (ಅಣಿಮಾದ್ಯಷ್ಟ ಗುಣೈಶ್ವರ್ಯೋಪೇತನುಂ ಸಪ್ತಸಾಗರಪ್ರಮಿತಜೀವಿತನುಂ; **ಆದಿಪು,** ೨. ೧೯ ವ)

**ಅಣುಬ್ರತ** – ಜೈನ ಗೃಹಸ್ಥರು ಪಾಲಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳಲ್ಲಿ ಒಂದು (ಕೊಲ್ಲದುದು ಪುಸಿಯದುದು ಕಳವಿಲ್ಲದುದಂ ತ್ರಿಕರಣತ್ವದಿಂ ವಾದರದೊಳ್ ಸಲ್ಲದುದು ಕಾಂಕ್ಷೆಯೊಳ್ ತಜಿಸಲ್ಲದುದಯ್ದಣುಬ್ರತಂ ಜಿನಮತದೊಳ್: **ಸುಕುಮಾಚ,** ೫. ೪೦)

**ಅಣುವ್ರತ** – ಅಣುಬ್ರತ (ತನ್ನಂ ತಾನೆ ಪಜೆದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕಬ್ರತಂಗಳಂಕೈಕೊಂಡಾಗಳ್: **ವಡ್ಡಾರಾ,** ಪು೧೧. ಸಾ೩೦)

**ಅಣೂತ್ತರೆ** – ಲೋಕಾಕಾಶದ ತುದಿಯ ನೆಲೆಯಲ್ಲಿರುವ ಐದು ವಿಮಾನಗಳಲ್ಲಿ ಒಂದು (ಅಯ್ದಣೂತ್ತರೆಗಳೊಳ್ ಮಧ್ಯಮುವರ್ತಿಯಪ್ಪ ಸರ್ವಾರ್ಥ ಸಿದ್ಧಿಯಹಮಿಂದ್ರರುಂ: **ಶಾಂತಿಪು,** ೧೨. ೪೩ ವ) ನೋಡಿ, **ಪಂಚಾಣೂತ್ತರೆ**

**ಅತಿಚಾರ** – ಯೋಗ್ಯವಲ್ಲದ್ದನ್ನು ಮಾಡುವುದು, ಇಂದ್ರಿಯಸಂಯಮ ಅಥವಾ ವ್ರತಗಳ ಶಿಥಿಲತೆಯೇ ಅತಿಚಾರ; ಐದು ಅಣುವ್ರತಗಳು, ಮೂರು ಗುಣವ್ರತಗಳು ಮತ್ತು ನಾಲ್ಕು ಶಿಕ್ಷಾವ್ರತಗಳಲ್ಲಿ ಒಂದೊಂದರಲ್ಲಿಯೂ ಐದೈದು ಅತಿಚಾರಗಳಂತೆ ಒಟ್ಟು ಅರುವತ್ತು ಅತಿಚಾರಗಳು (ವಿತತಮಣುಗುಣಶಿಕ್ಷಾವ್ರತಂಗಳೊಳ್ ಕ್ರಮದೆ ನೋಡಲೊಂದೊಂದಱೊಳಯ್ದತಿಚಾರವಾಗೆ ಪೋಗುತ್ತೆ ತುದಿಯೊಲಾರಯ್ಯಲವೆಲ್ಲಮಱುವತ್ತಕ್ಕುಂ: **ಸುಕುಮಾಚ,** ೬. ೧೨); (ಬಂಧ ವಧಚ್ಛೇದಾದಿ ಭರಾರೋಪಣಾನ್ನಪಾನನಿರೋಧಮೆಂಬೀ ಕೊಲ್ಲದ ವ್ರತದೈದತಿಚಾರದೊಳಂ; ಮಿಥ್ಯೋಪದೇಶ ರಹೋಭ್ಯಾಖ್ಯಾನ ಕೂಟಲೇಖನ

ಕ್ರಿಯಾನ್ಯಾಸಾಪಹಾರಸಾಕಾರ ಮಂತ್ರಭೇದಮೆಂಬ ವ್ರತದೈತಿಚಾರದೊಳಂ; ಸ್ತೇನಪ್ರಯೋಗ ಸದಾಹೃತಾದಾನವಿರುದ್ಧ ರಾಜ್ಯಾತಿಕ್ರಮ ಹೀನಾಧಿಕಮಾನೋನ್ಮನ ಪ್ರತಿರೂಪಕ ವ್ಯವಹಾರಮೆಬ ಕಳದ ವ್ರತದೈದತಿಚಾರದೊಳಂ; ಪರ ವಿವಾಹಕರಣೇತ್ವರಿಕಾಪರಿಗ್ರಹಾಪರಿಗೃಹೀತಾ ಗಮನಾನಂಗ ಕ್ರೀಡಾ ಕಾಮತೀವ್ರಾಭಿನಿವೇಶಮೆಂಬ ಪರಸ್ತ್ರೀಗೆಱಗದ ವ್ರತದ ಐದತಿಚಾರದೊಳಂ: ಕ್ಷೇತ್ರ ವಾಸ್ತು ಹಿರಣ್ಯ ಸುವರ್ಣ ಧನ ಧಾನ್ಯ ದಾಸೀ ದಾಸ ಕುಪ್ಯಭಾಂಡಾತಿ ಕ್ರಮಮೆಂಬ ಪರಿಮಿತ ಪರಿಗ್ರಹದೈದತಿಚಾರದೊಳಂ; ಊರ್ಧ್ವಾ ಧಸ್ತಿರ್ಯಗ್ವ್ಯತಿಕ್ರಮಕ್ಷೇತ್ರವೃದ್ಧಿ ಸ್ಮೃತ್ಯಂತರದಾನಮೆಂಬ ದಿಗ್ವಿವ್ರತದೈದತಿಚಾರದೊಳಂ; ಅನಯನ ಪ್ರೇಷ್ಯಪ್ರಯೋಗ ಶಬ್ದರೂಪಾನುಪಾತ ಪುದ್ಗಲಕ್ಷೇಪಮೆಂಬ ದೇಶವಿರತಿವ್ರತದೈದತಿಚಾರದೊಳಂ; ಕಂದರ್ಪಕೌತ್ಕುಚ್ಯ ಮೌಖ ರ್ಯಾಸಮೀಕ್ಷ್ಯಾಧಿಕರಣೋಪಭೋಗ ಪರಿಭೋಗಾನರ್ಥತ್ವಮೆಂಬರ್ಥ ದಂಡವಿರತಿವ್ರತದೈದತಿಚಾರದೊಳಂ: ಕಾಯದುಷ್ಪ್ರಣಿದಾನ ವಾಗ್ದುಷ್ಪ್ರಣಿದಾನ ಮನೋದುಷ್ಪ್ರಣಿದಾನಾನಾದರಸ್ಮೃತ್ಯನುಸ್ಥಾನಮೆಂಬ ಸಾಮಯಿಕ ಶಿಕ್ಷಾವ್ರತದಯ್ದುತಿಚಾರದೊಳಂ; ಅಪ್ರವೇಕ್ಷಿತಾತ್ಯ ಪ್ರಮಾರ್ಜಿತೋತ್ಸರ್ಗಾ ಪ್ರಮಾಜಿತಾದಾನಾ ಪ್ರತ್ಯವೇಕ್ಷಿತಾ ಪ್ರಮಾರ್ಜಿತ ಸುಸ್ತರಣೋಪಕ್ರಮಣಾನಾದರ ಸ್ಮೃತ್ಯನುಪಸ್ಥಾಪನಮೆಂಬ ಪ್ರೋಷಧೋಪವಾಸಮೆಂಬ ಶಿಕ್ಷಾವ್ರತದಯ್ದು ತಿಚಾರದೊಳಂ; ಸಚಿತ್ತಾಹಾರಾಭಿಷವಾಹಾರ ಸಚ್ಚಿತ್ತಸಂಬಂಧಾಹಾರ ಸಚಿತ್ತಸಮ್ಮಿಶ್ರಾಹಾರಾಭಿಷವಾಹಾರ ದುಷ್ಪಕ್ವಾಹಾರಮೆಂಬುಪಭೋಗ ಪರಿಭೋಗ ಪ್ರಮಾಣಮೆಂಬ ಶಿಕ್ಷಾವ್ರತದಯ್ದುತಿಚಾರಗಳಂ; ಸಚ್ಚಿತ್ತನಿಕ್ಷೇಪ ಸಚ್ಚಿತ್ತಾಭಿಧಾನ ಪರವ್ಯಪದೇಶ ಮಾತ್ಸರ್ಯ ಕಾಲಾತಿಕ್ರಮಮೆಂಬತಿಥಿಸಂವಿಭಾಗ ಶಿಕ್ಷಾವ್ರತದೈದತಿಚಾರದೊಳಂ: **ಧರ್ಮಾಮೃತ,** ೫. ೮೮ ವ)

**ಅತಿದುಷ್ಷಮ** – ಜ್ಞಾನ, ಆಯುಷ್ಯ ಮುಂತಾದವು ಕಡಿಮೆಯಾಗುತ್ತ ಹೋಗುವ ಅವಸರ್ಪಿಣಿ ಎಂಬ ಕಾಲದ ಕಡೆಯ ಭಾಗ; "ದುಷ್ಷಮದುಷ್ಷಮ ಕಾಲ" (ಅಯ್ದನೆಯದು ದುಷ್ಷಮಮೆನಿಪ್ಪ ಕಾಲಂ ಬೞಿಕಾಱನೆಯದತಿದುಷ್ಷಮಂ: **ಪಂಪರಾ,** ೧. ೫೭)

**ಅತಿಶಯ** – ತೀರ್ಥಂಕರನ ಮೂವತ್ತನಾಲ್ಕು ವಿಶೇಷ ಗುಣಗಳು (ಅರ್ಹಂತನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳು ಅಥವಾ ವಿಶೇಷಗಳು: ನಿಸ್ವೇದತೆ, ನಿರ್ಮಲಶರೀರ, ಹಾಲಿನಂತೆ ಬಿಳಿರಕ್ತ, ವಜ್ರವೃಷಭನಾರಾಚನಸಂಹನನ, ಸಮಚತುರಸ್ರ ಶರೀರಸಂಸ್ಥಾನ, ಅನುಪಮರೂಪ, ಸುಗಂಧದ ಉಸಿರು, ಸಾವಿರದೆಂಟು ಉತ್ತಮ ಲಕ್ಷಣಗಳು, ಅನಂತಬಲ ಹಾಗೂ ಹಿತಮಿತಭಾಷಣ ಎಂಬ ಹುಟ್ಟಿನ ಹತ್ತು ವಿಶೇಷಗಳು; ಸುತ್ತ ನೂರು ಯೋಜನ ಸುಭಿಕ್ಷೆ, ಹಿಂಸೆಯ ಅಭಾವ, ಆಕಾಶಗಮನ, ಭೋಜನರಾಹಿತ್ಯ, ಉಪಸರ್ಗರಾಹಿತ್ಯ, ಚತುರ್ದಿಕ್ಕುಗಳಲ್ಲಿ ಅಭಿಮುಖತೆ, ನೆರಳಿಲ್ಲದ ದೇಹ, ರೆಪ್ಪೆ ಮಿಟುಕಿಸದ ಕಣ್ಣು, ಸರ್ವವಿದ್ಯಾಪ್ರಭುತ್ವ, ನಖರೋಮಗಳ ಸಮಾನತೆ ಮತ್ತು ಸರ್ವಭಾಷಾ

ಮಯವಾದ ದಿವ್ಯಧ್ವನಿ ಎಂಬ ಕೇವಲಜ್ಞಾನದಿಂದ ಬರುವ ಹನ್ನೊಂದು ವಿಶೇಷಗಳು; ಸುತ್ತಲೂ ಹೂಹಣ್ಣುಸಮೃದ್ಧಿ, ಸುಖದಾಯಕ ಗಾಳಿ, ಪ್ರಾಣಿಗಳ ಮೈತ್ರಿ, ಸ್ವಚ್ಛವಾದ ಕನ್ನಡಿಯಂತಹ ಭೂಮಿ, ಸುಗಂಧಜಲವೃಷ್ಟಿ, ಸಮೃದ್ಧ ಸಸ್ಯಗಳ ಸೃಷ್ಟಿ, ಸಕಲಜೀವರ ನಿತ್ಯ ಆನಂದ, ತಂಗಾಳಿ, ಜಲಸಮೃದ್ಧಿ, ನಿರ್ಮಲ ಆಕಾಶ, ಸಮಸ್ತಜೀವರ ರೋಗಮುಕ್ತಿ, ಸಮಸ್ತಜೀವ ರೋಗರಾಹಿತ್ಯ ಮತ್ತು ಯಕ್ಷೇಂದ್ರನ ಧರ್ಮಚಕ್ರ ಎಲ್ಲರಿಗೂ ಕಾಣುವುದು ಎಂಬ ಹದಿಮೂರು ದೇವಕೃತ ವಿಶೇಷಗಳು (ನಿಸ್ವೇದತ್ವ ಆದಿ ಅತಿಶಯಸಮೇತನುಂ ... ಅಷ್ಟೋತ್ತರಶತ ಸಹಸ್ರಲಕ್ಷಣನುಂ: **ಕರ್ಣನೇಮಿ,** ೯. ೬ ವ)

**ಅತಿಶಯಂಗಳ್** – ಜಿನನ ಹತ್ತು ವಿಶೇಷತೆಗಳು (ಮಿತನಖಕೇಶಶೋಭಿತತನುತ್ವಂ ಆಭುಕ್ತಿ ಉಪಸರ್ಗಭಾವಂ ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ ಅಪಕ್ಷ್ಮತಾಸಂ ಆಯತಗಗನಪ್ರಚಾರಂ ಅಪಜೀವವಧಂ ಪರಿವೀತದೇಹ ಬಿಂಬತೆವೆರಸು ಇಂತು ಪತ್ತಿತಿಶಯಂಗಳ್ ಇವೇಂ ಜಿನನೊಳ್ ಪೊದಳ್ದುವೋ: **ಆದಿಪು,** ೧೦. ೪೩) [ಇವುಗಳೊಡನೆ 'ಸುಭಕ್ಷೆ' ಸೇರಿ ಒಟ್ಟು ಹತ್ತು ಅತಿಶಯಗಳು]; ಜಿನನ ಎಂಟು ವಿಶೇಷತೆಗಳು (ಕರ್ಮಾರಿವಿಜಯ, ಅನಂತಚತುಷ್ಟಯಪ್ರಾಪ್ತಿ, ವಾಕ್, ಪೂಜಾ, ಆಸ್ಥಾಯಿಕಾ, ವಿಹಾರ, ಶರೀರ, ಪ್ರಕೃತಿಗಳೆಂಬ ಎಂಟುಂ ಅತಿಶಯಂಗಳಂ ಅತಿಶಯಭಕ್ತಿಯಿಂ ಸ್ತುತಿಯಿಸಿ: **ಆದಿಪು,** ೧೦. ೪೭)

**ಅಧಃಪ್ರವೃತ್ತಿ** – ಅಧಃಪ್ರವತ್ತಿಕರಣ: ಮೂರು ಕರಣಲಬ್ಧಿಗಳಲ್ಲಿ – ಅಧಃಪ್ರವೃತ್ತಿಕರಣ, ಅಪೂರ್ವಕರಣ, ಅನಿವೃತ್ತಿಕರಣ – ಒಂದು (ತದನಂತರಂ ಅಪ್ರಮತ್ತ ಗುಣಸ್ಥಾನಂಗಳೊಳ್ ಅಧಃಪ್ರವೃತ್ತ್ಯಪೂರ್ವಾನಿವೃತ್ತಿಕರಣ ಪರಿಣಾಮಂಗಳಿಂದಂ ಅನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭಂಗಳಂ ವಿಸಂಯೋಜಿಸಿ: **ಆದಿಪು,** ೧೦. ೧೪ ವ)

**ಅಧರ್ಮ** – ಅಜೀವತತ್ವದ ಒಂದು ಭೇದ (ಚೇತನಾರಹಿತಮಜೀವತತ್ತ್ವಂ, ಅದು ಗತಿಸ್ಥಿತ್ಯವಗಾಹಶರೀರಾದಿ ವರ್ತನಾಹೇತುಧರ್ಮಾಧರ್ಮಾಕಾಶಪುದ್ಗಲಕಾಲಭೇದದಿಂ ಪಂಚವಿಧಂ: **ಆದಿಪು:** ೧೦. ೬೩ ವ)

**ಅಧರ್ಮದ್ರವ್ಯ** – ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಷಡ್ದ್ರವ್ಯಗಳಲ್ಲಿ ಒಂದು; ಜೀವ ಪುದ್ಗಲ ಧರ್ಮ ಅಧರ್ಮ ಕಾಲ ಮತ್ತು ಆಕಾಶವೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು, (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಂ: **ಸುಕುಮಾಚ,** ೩. ೩೯ ವ)

**ಅಧರ್ಮಾಸ್ತಿಕಾಯ** – ಪಂಚಾಸ್ತಿಕಾಯಗಳಲ್ಲಿ ಒಂದು (ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಆಕಾಶಾಸ್ತಿಕಾಯವೆಂಬ ಪಂಚಾಸ್ತಿಕಾಯ ನಿಕಾಯಮುಂ: **ಸುಕುಮಾಚ,** ೩. ೩೯ ವ)

**ಅಧೋಗ್ರೈವೇಯಕ** – ಒಂಬತ್ತು ಗ್ರೈವೇಯಕಗಳೆಂಬ ಕಲ್ಪಾತೀತ ಸ್ವರ್ಗಗಳಲ್ಲಿ ಕೆಳಗಿನದು (ತಪೋಭರದೊಳ್ ನಾಲ್ವರುಂ ನಿಂದು ಜೀವಿತವ್ಯಪಾಯುದೊಳ್

ಅಧೋಗ್ರೈವೇಯಕದೊಳ್ ಅಹಮಿಂದ್ರಪದವಿಯಂ ತಾಳ್ದಿದರ್: **ಆದಿಪು,** ೫. ೨೭ ವ); ನೋಡಿ, **'ಗ್ರೈವೇಯಕ'**

**ಅಧೋಗ್ರೈವೇಯಕದಿವಿಜ** – ಅಹಮಿಂದ್ರ (ಅತಿಗೃದ್ಧ ಮಹೀಶನುಂ ನಾರಕನುಂ ವ್ಯಾಘ್ರನುಂ ಈಶಾನಕಲ್ಪಜನುಂ ಮತಿವರಮಂತ್ರಿಯುಂ ಅಧೋಗ್ರೈವೇಯಕ ದಿವಿಜನುಂ: **ಆದಿಪು,** ೧೬. ೫೮ ವ)

**ಅಧೋಭೂಮಿ** – ಕೆಳಗಿನ ಲೋಕ (ರಮಣೀಜಾತಿಯೊಳಲ್ತೆ ನಂಬಿದವರ್ಗಳ್ ಸಮ್ಯಕ್ತ್ವಮಂ ಪುಟ್ಟರಾಱುಮಧೋಭೂಮಿಯೊಳ್: **ಆದಿಪು,** ೫. ೬೩)

**ಅಧೋಲೋಕ** – ಕೆಳಗಿನ ಲೋಕ (ನೆಲಸಿರ್ದಪ್ಪುದಧಸ್ಸ್ಥಳಂಬಿಡಿದಧೋಲೋಕಂ; **ಆದಿಪು.** ೧. ೫೦)

**ಅಧ್ಯಯನಾಂತರಾಯ** – ಶಾಸ್ತ್ರಾಭ್ಯಾಸಕ್ಕೆ ಒದಗುವ ತೊಂದರೆ; ಅಂತರಾಯ ಎಂದರೆ ಮೋಕ್ಷಸಂಪಾದನೆಗೆ ಉಂಟಾಗುವ ಅಡ್ಡಿಗಳು; ಇಂತಹವು ಐದು: ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತ ರಾಯ ಮತ್ತು ವೀರ್ಯಾಂತರಾಯ (ಸಮಾಧಿಗುಪ್ತರೆಂಬ ಯತಿಪತಿಗಳ ಧ್ಯಯನಮಂ ನಗನಿಷ್ಟಮಪ್ಪುದಜೆನಧ್ಯಯನಾಂತರಾಯಮಂ ಮಾಡಲೆಂದು: **ಆದಿಪು.** ೩.೩೮ ವ)

**ಅನಂತಜಿನೇಂದ್ರ** – ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥ (ಅನಂತ ಜಿನ್ನಾಮನೆನಿಪ್ಪನೀಗೆಮಗೆ ಅನಂತಜಿನೇಂದ್ರಂ ಅನಂತಸೌಖ್ಯಮಂ: **ಅನಂತಪು,** ೧. ೧)

**ಅನಂತಚತುಷ್ಟಯ** – ತೀರ್ಥಂಕರರಾಗುವವರಿಗೆ ಕರ್ಮಪರಿಣಾಮಗಳು ನಷ್ಟವಾದ ಬಳಿಕ ಪ್ರಾಪ್ತವಾಗುವ ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯಗಳೆಂಬ ನಾಲ್ಕು ಗುಣಗಳು (ಕಷ್ಟತರಮಂ ಕಷಾಯಚತುಷ್ಟಯ ದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ ಇನ್ನನಂತ ಚತುಷ್ಟಯಮಂ ಪೊರ್ದು ಪೊರ್ದದಿರು ಸಂಸ್ಕೃತಿಯಂ: **ಅಜಿತಪು,** ೬. ೭೩)

**ಅನಂತಜ್ಞಾನ** – ಅನಂತಚತುಷ್ಟಯದಲ್ಲಿ ಒಂದು; ಜ್ಞಾನಾವರಣೀಯ ಕರ್ಮವಿನಾಶದಿಂದ ಉಂಟಾಗುವ ಆತ್ಮಜ್ಞಾನ, ಎಲ್ಲದರ ಸಮಸ್ತ ಪರಿಜ್ಞಾನ (ಸೂಕ್ಷ್ಮರೂಪನುಂ ಅನಂತಜ್ಞಾನಾದಿ ಗುಣರೂಪನುಂ: **ಆದಿಪು,** ೨. ೧೦ ವ)

**ಅನಂತದರ್ಶನ** – ಅನಂತಚತುಷ್ಟಯದಲ್ಲಿ ಒಂದು, ಪರಿಮಿತಿಯಿಲ್ಲದ ನೋಟ (ಸಮ್ಯಕ್ತ್ವಮುಂ ಅನಂತಜ್ಞಾನಮುಂ ಅನಂತದರ್ಶನಮುಂ ... ಎಂಟುಂ ಗುಣಂಗಳ್ ಆತ್ಮಾಯತ್ತಮಾಗೆ: **ಶಾಂತಿಪು,** ೧೨. ೫೧ ವ)

**ಅನಂತಪ್ರಭೋದ** – ಅನಂತಜ್ಞಾನ (ಪರಮಾತ್ಮನೆನ್ನನೆಂದೊಡೆ ಚರಮಾಂಗ ಪ್ರಮಿತನಖಿಳಲೋಕಸಮಾನಂ ನಿರವಯವ ನಿರಂಜನ ನಿರ್ದುರಿತ ನನಂತಪ್ರಬೋಧದರ್ಶನಸೌಖ್ಯಂ: **ಯಶೋಧಚ,** ೪. ೨೭)

**ಅನಂತವಸ್ತುಪ್ರಕಾಶಿ** – ಎಲ್ಲ ವಸ್ತುಗಳನ್ನೂ ಕಾಣುವಂತೆ ಮಾಡುವ ಕೇವಲಜ್ಞಾನ (ಮಾನಕಷಾಯಂ ಮುನಿಪತಿಗೆ ಪೋಗೆ ಪುಟ್ಟಿದುದು ಅನಂತವಸ್ತುಪ್ರಕಾಶಿ ಕೇವಳಬೋಧಂ: **ಆದಿಪು,** ೧೪. ೧೪೫)

**ಅನಂತವೀರ್ಯ** – ಅನಂತಚತುಷ್ಟಯಗಳಲ್ಲಿ ಒಂದು, ಅಪರಿಮಿತ ಶಕ್ತಿ (ಏಜೆದ ವಿಮಾನಮೆ ಗಾಳಿಯ ತೂಳದಂತಿರೆ ಆಗುಸಿರ್ವುಸಿರಿಂದೆ ನಂಬಿದರ್ ಅಮರ್ತ್ಯರ್ ಅನಂತವೀರ್ಯಮಮಂ: **ಅನಂತಪು,** ೫. ೬೪); ಅಂತರಾಯ ಕರ್ಮನಾಶದಿಂದ ಕೇವಲಜ್ಞಾನಿಗೆ ಅನಂತವೀರ್ಯ ಗುಣವು ಉಂಟಾಗುತ್ತದೆ (ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ ಬೞಿಯಂ ಕ್ಷಾಯಿಕ ಸಮ್ಯಕ್ತ್ವಾನಂತಜ್ಞಾನ ದರ್ಶನ ವೀರ್ಯಸೂಕ್ಷ್ಮಾವಗಾಹಗುರುಲಘುತಾ ವ್ಯಾಬಾಧಂಗಳೆಂಬ: **ಆದಿಪು,** ೧೬. ೨೫ ವ)

**ಅನಂತಾನುಬಂಧಿ** – ಅನಂತಕಾಲದವರೆಗೆ ಜೀವನನ್ನು ಹುಟ್ಟುಸಾವುಗಳ ಸಂಸಾರದಲ್ಲಿ ತಿರುಗಿಸುವ ಕ್ರೋಧ, ಮಾಯ, ಮಾನ ಲೋಭಗಳೆಂಬ ನಾಲ್ಕು ಬಗೆಯ ಕಷಾಯಗಳು (ಅನಂತಾನುಬಂಧಿ ಕ್ರೋಧಮಾನಾದಿ ಚತುಃಕಷಾಯ ವ್ಯಪಾಯಮುಂ: **ಪುಷ್ಪದಂಪು,** ೧೪. ೧೬)

**ಅನಂತಾನುಬಂಧಿ ಕ್ರೋಧ** – ಅನಂತಾನುಬಂಧಿ ಚತುಷ್ಕದಲ್ಲಿ ಒಂದು; ಸಮ್ಯಕ್ತ್ವವನ್ನು ಕೆಡಿಸುವ ಕ್ರೋಧವೆಂಬ ಕಷಾಯ (ತದನಂತರಮಪ್ರಮತ್ತಗುಣ ಸ್ಥಾನಂಗಳೊಳಧಃಪ್ರವೃತ್ತ್ಯಪೂರ್ವಾನಿವೃತ್ತಿಕರಣ ಪರಿಣಾಮಂಗಳಿಂದಂ ಅನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭಂಗಳಂ ವಿಸರ್ಜಿಸಿ: **ಆದಿಪು,** ೧೦. ೧೪ ವ)

**ಅನಗಾರಕೇವಳಿ** – ಮನೆಯಲ್ಲಿ ವಾಸಿಸದ ಮುನಿ, ತೀರ್ಥಂಕರರೂ ಗಣಧರರೂ ಅಲ್ಲದ ಸಾಮಾನ್ಯ ಕೇವಲಿ (ತೀರ್ಥಕರ ಗಣಧರ ಅನಗಾರಕೇವಳಿಗಳ ಪರಿನಿರ್ವಾಣಕ್ಷೇತ್ರದೊಳ್ **ಆದಿಪು,** ೧೫. ೧೬ ವ)

**ಅನಗಾರವೇಳೆ** – ಜೈನಮುನಿಗಳ ಚರಿಗೆಯ ಸಮಯ (ಆ ಮುನೀಂದ್ರೋತ್ತಮಂ ... ಅನಗಾರವೇಳೆಯೊಳ್ ಮಾದಿರಾಭಿಧಾನಪುರಕ್ಕೆ ಚರಿಗೆಗೆವರೆ: **ಶಾಂತಿಪು,** ೧೧. ೧೦೬ ವ)

**ಅನಗಾರಸಮಯ** – ಅನಗಾರವೇಳೆ (ಅನಗಾರಸಮಯದೊಳ್ ದ್ವಾರಾಪೇಕ್ಷೆಯೊಳಿರೆ: **ಶಾಂತಿಪು,** ೬. ೬೯ ವ)

**ಅನತಿಚಾರ** – ತೀರ್ಥಂಕರನಾಗುವುದಕ್ಕೆ ಕಾರಣವಾದ ಷೋಡಶಭಾವನೆಗಳಲ್ಲಿ ಒಂದು, ನಿರವದ್ಯವೃತ್ತಿಯಾದ ಶೀಲವ್ರತದಲ್ಲಿ ಅನತಿಚಾರ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹದಾಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಅನತಿಶಯ** – ಅಸಾಮಾನ್ಯ, ಜಿನ (ಅನತಿಶಯ ಕೇವಲಜ್ಞಾನ ನಿರೀಕ್ಷಿತ ವಿಶ್ವನಾಥಾನಾದಿಜಿನಂ: **ಆದಿಪು,** ೧೦. ೧೬)

**ಅನಧ್ಯವಸಾಯ** – ಅಧ್ಯವಸಾಯ ಅಥವಾ ನಿಶ್ಚಿತಜ್ಞಾನ ಇಲ್ಲದಿರುವುದು (ಸಂಶಯ ವಿಪರ್ಯಯ ಅನಧ್ಯವಸಾಯ ವ್ಯತಿರಿಕ್ತಮಪ್ಪಂತಿರೆ: **ವರ್ಧಮಾಪು,** ೭. ೩ ವ)

**ಅನವಧಿಬೋಧ** – ಕೊನೆಯಿಲ್ಲದ ಜ್ಞಾನ ಪಡೆದವನು, ಕೇವಲಜ್ಞಾನಿ (ಸಮನಿಕುಂ ಅಜೆವಿಂದ ಅವ್ಯಾಮೋಹತೆ ಸಾಗುರ್ಗಂ ಅವ್ಯಾಹತಸುಖಂ ಈಗುಂ ಅನವಧಿಭೋಧಾ: **ಚಂದ್ರಪ್ರಪು,** ೭. ೧೪)

**ಅನಶನ** – ನಾಲ್ಕೂ ಬಗೆಯ ಆಹಾರವಿಸರ್ಜಿಸಿ ಮಾಡುವ ತಪಸ್ಸು (ಮೋಹಾಂಧತ ಮಸ್ತೋಮಮಂ ಕಳೆದು ಕೃತ ಅನುಶಯನಂ ಅನಶನವಿಧಾನದಿಂ ಅಸುವಂ ವಿಸರ್ಜಿಸಿ ಸೌಧರ್ಮಕಲ್ಪದೊಳ್ ದೇವನಾಗಿ: **ಆದಿಪು,** ೨. ೧೭ ವ)

**ಅನಾಗಾರ** – ಜೈನಗೃಹಸ್ಥಧರ್ಮದ ಸಾಗಾರ ಮತ್ತು ಅನಾಗಾರ ಎಂಬ ಎರಡು ಭೇದಗಳಲ್ಲಿ ಒಂದು (ಅನಾಗಾರಮೆಂಬುದುತ್ತಮಕ್ಷಮಾ ಮಾರ್ದವಾರ್ಜವಾದಿ ಭೇದದಿಂ ದಶವಿಧಮಕ್ಕುಂ: **ಚಾವುಂಡಜಯ,** ಪು. ೩೮೩)

**ಅನಾದಿಮಿಥ್ಯಾತ್ವ** – ಹಿಂದಿನಿಂದ ಬಂದ ತಪ್ಪು ತಿಳಿವಳಿಕೆ (ಒಲವಿಗೆ ನಲಿಯುವ ಅನಾದಿಮಿಥ್ಯಾತ್ವದೆ ಮಟ್ಟಿದ ಮತಿಯದು ನಿನ್ನಿಂದಲ್ಲದೆ ಪಜ್ಜಳಿಸುಗುಮೆ: **ಚಂದ್ರಪ್ರಪು,** ೭. ೮)

**ಅನಾದೇಯ** – ನಾಮಕರ್ಮಗಳಲ್ಲಿ ಒಂದು; ಇದರಿಂದ ಜೀವನಿಗೆ ಕಾಂತಿರಹಿತ ಶರೀರ ಪ್ರಾಪ್ತವಾಗುವುದು; ಎಷ್ಟೇ ಒಳ್ಳೆಯ ಕೆಲಸ ಮಾಡಿದರೂ ಹಿಂದೆ ಗಳಿಸಿದ ಕರ್ಮದ ಉದಯದಿಂದ ಜೀವನಿಗೆ ಮಾನ್ಯತೆ ಸಿಗದಿರುವುದೇ ಅನಾದೇಯ (ಸ್ಥಿರಾಸ್ಥಿರ ಸುಭಗದುರ್ಭಗ ಸುಸ್ವರ ದುಸ್ವರ ಆದೇಯ ಅನಾದೇಯ ಯಶಸ್ಕೀರ್ತಿ ಅಯಶಸ್ಕೀರ್ತಿ ... ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ)

**ಅನಾಯತನಸೇವೆ** – ಆರು ಬಗೆಯ ಮಿಥ್ಯೆಗಳ ಸೇವೆ (ಮೂಱು ಮೂಢಗಳುಂ ಆಱು ಅನಾಯತನಸೇವೆಗಳುಂ ಎಂದಿಂತು ಇಪ್ಪತ್ತೈದು ದೋಷಂಗಳಿದಗಲ್ದ ಸಮ್ಯಕ್ತ್ವಮಂ: **ವಡ್ಡಾರಾ,** ಪು. ೬. ಸಾ. ೨೨)

**ಅನಾಯತಸೇವೆ** – ಮಿಥ್ಯಾದೈವ, ಮಿಥ್ಯಾಲಯ, ಮಿಥ್ಯಾಜ್ಞಾನ, ಮಿಥ್ಯಾಜ್ಞಾನಿ, ಮಿಥ್ಯಾತಪ ಮತ್ತು ಮಿಥ್ಯಾತಪಸ್ವಿ ಎಂಬ ಆರು ಬಗೆಯ ಮಿಥ್ಯಾಸೇವೆ (ಮಿಥ್ಯಾದೇವರುಂ ಮಿಥ್ಯಾಲಯಮುಂ ಮಿಥ್ಯಾತಪಮುಂ ಮಿಥ್ಯಾತಪಸ್ವಿಯುಂ ಮಿಥ್ಯಾಜ್ಞಾನಮುಂ ಮಿಥ್ಯಾವಿನಯಂ ಎಂಬ ಷಟ್ ಅನಾಯತಸೇವಾ ವಿರಹಿತಮುಂ: **ಅಜಿತಪು,** ೧೨. ೧ ವ)

**ಅನಿಲ** – ಲೋಕವನ್ನು ಹೊರಭಾಗದಲ್ಲಿ ಆವರಿಸಿರುವ ಘನೋದಧಿ ಘನವಾತ ಮತ್ತು ತನುವಾತಗಳಲ್ಲಿ ಎರಡನೆಯದು: ಅದರ ಮೇಲೆ ಆದರೆ ಮೂರನೆಯ ವಾತದ ಕೆಳಗೆ ಸಿದ್ಧಪರಮೇಷ್ಠಿಗಳು ಇರುತ್ತಾರೆ (ಘನೋದಧಿಯುಮನಿಲಮುಂ ತನುವಾತಮುಮೆಂಬುದಕ್ಕುಮಲ್ಲಿ ದ್ವಿತೀಯ ಮಹಾವಾತದಿಂ ಮೇಲೆ ಪೋಗೆ ಮೂಱನೆಯ ಮಹಾವಾತದ ಕೆಳಗೆ ಸಿದ್ಧಪರಮೇಷ್ಠಿಗಳಿರ್ಪರ್: **ಶಾಂತಿಪು,** ೧೨. ೧೦ ವ)

**ಅನಿಲಾಮರ** – ತೀರ್ಥಂಕರನ ವಿಹಾರ ಮಾರ್ಗವನ್ನು ಶುದ್ಧೀಕರಿಸುವ ದೇವತೆಗಳ ಗುಂಪು (ಆ ದಿವಿಜಾಧಿನಾಥಮತದಿಂ ... ತಣ್ಣಗೆ ಕಮ್ಮನಾಗೆ ಮೇಲಾದ ಅನಿಲಾಮರರ್ ಸುಟಿದು ಬೀಸುವರ್: **ಶಾಂತಿಪು,** ೧೨. ೨೨)

**ಅನಿವೃತ್ತಿಕರಣ** – ಮೂರು ಬಗೆಯ ಕರಣಲಬ್ಧಿಗಳಲ್ಲಿ ಒಂದು; ಒಂಬತ್ತನೆಯ ಗುಣಸ್ಥಾನದಲ್ಲಿ ಜೀವನಿಗೆ ಧ್ಯಾನದಿಂದ ಉಂಟಾಗುವ ಪರಿಶುದ್ಧ ಭಾವಗಳು (ಪ್ರತಿಸಮಯಮನಂತಗುಣಶಕ್ತಿ ಖಚಿತೈಕಪರಿಣಾಮ ನಿವೃತ್ತಿಕರಣ ಕ್ಷಪಣಕನಾಗಿ: **ಆದಿಪು,** ೧೦. ೧೪ ವ)

**ಅನುಗಾಮಿ** – ಕ್ಷಾಯೋಪಶಮನನಿಮಿತ್ತಿಕವಾದ ಆರು ಅವಧಿಜ್ಞಾನಗಳಲ್ಲಿ ಒಂದು (ಹೀಯವಮಾನ ವರ್ಧಮಾನ ಅವಸ್ಥಿತಾ ಅನವಸ್ಥಿತಾ ಅನುಗ್ರಾಮ್ಯಂ ಅನುಗಾಮಿಸ್ವರೂಪದಿಂ ಷಟ್ಪ್ರಕಾರಮಪ್ಪ ದೇಶ ಪರಮಸರ್ವಾಧಿಜ್ಞಾನಮುಂ: **ಸುಕುಮಾಚ,** ೮. ೪ ವ)

**ಅನುದಿಶಾ[ಶೆ]** – ನವಗ್ರೈವೇಯಕಗಳ ಮತ್ತು ಐದು ಅಣೂತ್ತರೆಗಳ ಮಧ್ಯೆ ಇರುವ ಒಂಬತ್ತು ಅಹಮಿಂದ್ರ ಸ್ವರ್ಗಗಳಲ್ಲಿ ಒಂದು (ನಾಕತ್ರಿಷಷ್ಟಿ ಪಟಲಾನೀಕಂ ಗ್ರೈವೇಯಕಂಗಳೊಂಬತ್ತು ಕಡೆವರಂ ಅನುದಿಶೆಗಳ್ ಲೋಕೋಪರಿ ಮಂಗಳಯ್ದು ಅಣೂತ್ತರೆಯಕ್ಕುಂ: **ಶಾಂತಿಪು,** ೧೨. ೭)

**ಅನುದ್ದಿಸೆ** – ಒಂಬತ್ತು ಅನುದ್ದಿಸೆಗಳು, ಇವು ಗ್ರೈವೇಯಕಗಳ ಮೇಲಿರುವ ಸ್ವರ್ಗಗಳು (ಲಚ್ಛಿ ಮಹಾಲಚ್ಛಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಅಯಿಚ್ಚೆಯೆಂಬ ನವಾನುದ್ದಿಸೆಗಳೊಳಂ: **ವಡ್ಡಾರಾ,** ಪು ೯೭, ಸಾ ೩೦ ಮತ್ತು ಪು ೯೮ ಸಾ ೧), ನೋಡಿ, **ನವಾನುದ್ದಿಸೆಗಳ್**

**ಅನುಪಮಜಾತಿ** – ಪಾರಿವ್ರಾಜ್ಯ ಲಕ್ಷಣಗಳನ್ನು ತಿಳಿಸುವ ಜಾತಿ ಎಂಬ ಸೂತ್ರಪದದ ದಿವ್ಯಜಾತಿ ವಿಜಯಜಾತಿ ಪರಮಜಾತಿ ಅನುಪಮಜಾತಿ ಎಂಬ ನಾಲ್ಕು ವಿಭಾಗಗಳಲ್ಲಿ ಒಂದು, ಸಿದ್ಧತ್ವವನ್ನು ಸಿದ್ಧಿಸುವಂಥದು (ಅಲ್ಲಿ ದಿವ್ಯಜಾತಿಯಿಂದಮಿಂದ್ರತ್ವಮುಂ ಅಹಮಿಂದ್ರತ್ವಮುಂ ... ಅನುಪಮಜಾತಿ ಯಿಂದಂ ಸಿದ್ಧತ್ವಮುಂ ಪಡೆಯಲಕ್ಕುಂ: **ಚಾವುಂಡಜಯ,** ಪು. ೧೯೪)

**ಅನುಪಮಮಂಗಳ** – ಚಕ್ರವರ್ತಿಗೆ ಒದಗುವ ಚಾಮರದ ಹೆಸರು (ಯಕ್ಷಕರ ವಿಧೂಯಮಾನಮಪ್ಪ ಅನುಪಮ ಮಂಗಳಮೆಂಬ ಮೂವತ್ತೆರಡು ಚಾಮರಂಗಳುಂ: **ಆದಿಪು,** ೧೫. ೩ ವ)

**ಅನುಪ್ರೇಕ್ಷೆ** – ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರೆ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ವಗಳ ಚಿಂತನೆ (ಮುನಿವೃಂದೋಚ್ಚಾರಿತ ಪಂಚನಮಸ್ಕೃತಿಗಾಂತು ಕಿವಿಯನರ್ಹತ್ವದಮಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ: **ಆದಿಪು,** ೨. ೫೭)

**ಅನುಬಂಧ** – ಸಂಬಂಧ (ಕರಮೆಸೆವ ಅನುಬಂಧಂ ಪಿರಿಯರೊಳಾದುದು ... ತಾನುದ್ಧರಿಸದನೆ ಬಂಧು: **ಆಚವರ್ಧ,** ೪. ೬)

**ಅನುಬದ್ಧಕೇವಲ** – ವರ್ಧಮಾನ ಜಿನನ ಅನಂತರ ಬಂದ ಗೌತಮ, ಸುಧರ್ಮಸ್ವಾಮಿ, ಜಂಬೂಸ್ವಾಮಿ ಎಂಬ ಮೂವರು ಕೇವಲಜ್ಞಾನಿಗಳು (ಅನಿಬದ್ಧ ಕೇವಲರೆನಿಸಿದ ಗೌತಮ ಸುಧರ್ಮ ಜಂಬೂಗಣಭೃದ್ವಿಮತರ್ ಎಮಗೀಗೆ ಶಾಶ್ವತಧನಮೆನಿಸಿದ ವಿಶ್ರುತ ಶ್ರುತಾರಾಧನಮಂ: **ಪಂಪರಾ,** ೧. ೭)

**ಅನುಬದ್ಧಕೇವಳಿ** – ಅನುಬದ್ಧಕೇವಲ (ಮಳವಿಳಯನರರೆನಿಸಿದ ಕೇವಳಿಗಳ್ ಅಶುದ್ಧಾನುಬದ್ಧ ಕೇವಳಿಗಳ ನಿಶ್ಚಳಿತ ಶ್ರುತಕೇವಳಿಗಳ ಚಳನಂ ನಮಗಚಳ ಸುಖಮನೀಗೆ ಅನವರತಂ: **ಚಂದ್ರಪ್ರಪು,** ೧. ೧೬)

**ಅನುಭಾಗ** – ಕರ್ಮಪುದ್ಗಲಗಳಿಗಿರುವ ಸ್ವಗತ ಸಾಮರ್ಥ್ಯವಿಶೇಷ; ಆತ್ಮನಿಗೆ ಕರ್ಮಗಳ ಫಲಕೊಡುವ ಶಕ್ತಿ (ಬಾದರ ಸಾಂಪರಾಯ ಕೃಷ್ಣರೂಪ ಅನುಭಾಗಮಂ ಅನಂತಗುಣಹಾನಿರೂಪದಿಂ ಕುಂದಿಸಿ: **ಆದಿಪು,** ೧೦. ೧೪ ವ)

**ಅನುಮತಿ** – ಮನೆ ಸಂಸಾರಗಳು ಇದ್ದರೂ ಎಲ್ಲ ವಿಷಯಗಳಲ್ಲಿಯೂ ಕೇವಲ ಅತಿಥಿಯಂತೆ ನಡೆದುಕೊಳ್ಳುವವನು, ಹತ್ತನೆಯ ನೆಲೆಯ ಶ್ರಾವಕ (ಅನುಮತಿಯೆಂಬಂ ತಾಂ ಪತ್ತನೆಯಾತಂ ತನಗೆ ಪೇಟ್ಟಿ ಮಾರ್ಗಮನೆಂದುಂ ಮನಮೊಸೆದು ಸೇವಿಸದೆ ಮುನ್ನಿನ ಗುಣದೊಳ್ಕೂಡಿ ನೆಗಟ್ವಿನುನ್ನತಿಯಿಂದಂ: **ಧರ್ಮಾಮೃತ,** ೫. ೯೮)

**ಅನುಮೋದನವಿರತ** – ಶ್ರಾವಕರ ಹನ್ನೊಂದು ನೆಲೆಗಳಲ್ಲಿ ಹತ್ತನೆಯ ನೆಲೆಯವನು (ತನಗೆಂದು ಮಾಡಿಸುತ್ತಂ ತನಗೆಲ್ಲಂ ತನ್ನನಜೆಪಿ ಮಾಡಿದುದಂ ಕೊಳ್ಳೆನಿಪ್ಪಾತನಾತನನುಮೋದನವಿರತಂ ದೇಶವಿರತರೊಳ್ಪತ್ತನೆಯಂ: **ಸುಕುಮಾಚ,** ೬. ೩೫)

**ಅನುಯೋಗ** – ತೀರ್ಥಂಕರರು ಉಪದೇಶಿಸಿದ ಶಾಸ್ತ್ರ ಸಮೂಹ; ನಾಲ್ಕು: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ಅನುಯೋಗಗಳು (ಅನುಯೋಗಕುಸುಮಪಾದಪಂ ಅನೇಕನಯಲತಿಕ ಮಂಗಫಳಮಹೀಜಂ ಸದ್ವನವನಂ ಎಮಗೆ ವಿಶ್ರಮವನಮಕ್ಕೆ ಅತಿವಿಶ್ರುತಶ್ರುತಸ್ಕಂಧವನಂ: **ಆದಿಪು,** ೧. ೧೦)

**ಅನುರಾಗ** – ಗಾಢ ಪ್ರೀತಿ (ಧರ್ಮದೊಳಪ್ಪ ಅನುರಾಗಂ ಒದವುಗುಂ ರತ್ನನ ಪೇಟ್ದಜಿತನ ಪುರಾಣಮಂ ಕೇಳಲೊಡಂ: **ಅಜಿತಪು,** ೧೨. ೩೨)

**ಅನುವದಿಸು** – ಹೇಳಿಕೊಟ್ಟಂತೆ ಹೇಳು (ಮುನಿಜನಮೋದಿಸಿದೋಜೆಯೊಳ್ ಅನುವದಿಪುದು: **ಆದಿಪು,** ೧. ೧೪)

**ಅನುವಜಿ** – ಕ್ರಮವನ್ನು ಅರಿ, ಔಚಿತ್ಯ ತಿಳಿ (ಅಂತು ಅನುವಜಿದು ಒಸಗೆಯೊಳ್ ಅಮರರಾಜನುಂ ಸನಾಭಿಗಳ್ವೆರಸು ನಾಭಿರಾಜನುಂ ಬಂದು ... ಪಾಣಿಗ್ರಹಣಂ ಗೆಯ್ಸಿದಾಗಳ್: **ಆದಿಪು,** ೮. ೨೨ ವ)

**ಅನುಷ್ಠಿತ** – ನೆರವೇರಿಸಿದ (ಅಂತು ನೇಸಮರ್ೂಡುವುದುಂ ಅನುಷ್ಠಿತ ವಿಹಿತಾನುಷ್ಠನಂ ಧರ್ಮಸಹಾಯನಪ್ಪುದಜೆಂ ವಿವಿಧಾಯುಧನಿವೃತ್ತಿಗೆಯ್ದು: **ಮಲ್ಲಿನಾಪು,** ೧೦. ೧೪ ವ)

**ಅನುಸಂಧಿಸು** – ಜೋಡಿಸು, ಸೃಷ್ಟಿಸು (ರಸಭಂಗಭಯದಿನಿಂದ್ರಂ ಪೊಸತೊಂದು ಆ ದೊರೆಯ ಪಾತ್ರಮಂ ತಂದನನುಸಂಧಿಸುವುದುಂ: **ಆದಿಪು,** ೯. ೪೨)

**ಅನುಸ್ಮರಣ** – ನೆನಪು (ಮಹಾನದಾವಗಾಹನಸಮಯ ನೌದ್ರೋಣಿ ಸಂಕ್ರಮಾದಿ ವಿಧಾನ ಪ್ರಾಗ್ಲಲ್ಭ್ಯನುಂ ಅನುಸ್ಮರಣಮಾತ್ರ ನಿಷ್ಪಾದಿತ ಸಪ್ತತಳಾದಿ ಪ್ರಾಸಾದಪ್ರಕರಣನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ: **ಆದಿಪು,** ೧೧. ೩ ವ)

**ಅನೂಪ** – ನೀರು ಸಮೃದ್ಧವಾಗಿರುವ ಭೂಮಿ (ಬಟಿಕಂ ದೇವಮಾತೃಕ ಸಾಧಾರಣ ಅನೂಪ ಜಾಂಗಳ ಭೇದಂಗಳುಮಂ ಅಂತಪಾಳ ಪಾಳಿತದುರ್ಗ ಪರಿವೃತಾಂತಂ ಗಳುಂ: **ಆದಿಪು,** ೮. ೫೪ ವ)

**ಅನೇಕಭವ** – ನಾನಾ ಹುಟ್ಟುಗಳು (ವಿಶಾಖನಂದಿಯುಂ ಆಯುರವಸಾನದೊಳ್ ಸತ್ತು ಅನೇಕಭವ ಗಹನಪರ್ಯಟನದಿಂ ಬಂದು: **ಶಾಂತಿಪು,** ೭. ೬೨ ವ)

**ಅನೇಕಭೋಗಭಾಗಿ** – ನಾನಾ ಭೋಗಗಳಿಗೆ ಪಾತ್ರ (ವಿನಯವಿನಮಿತ ಮಣಿಮುಕುಟನಾದ ವಜ್ರಜಂಘನಂ ಅನೇಕಭೋಗಭಾಗಿಯಾಗೆಂದು ಪರಸಿ: **ಆದಿಪು,** ೪. ೨೪ ವ)

**ಅನೇಕಮುಖ** – ನಾನಾ ರೀತಿ (ಅಂತು ಪಿರಿದಪ್ಪುದಜೆಂದ ಅನೇಕಮುಖದೊಳ್ ನಡೆವ ಸುರಕೋಟಿಯಂ ಕಂಡು: **ಶಾಂತಿಪು,** ೧೨. ೨೩ ವ)

**ಅನೇಕಾತ್ಮಕ** – ಅನೇಕ ವಿಷಯಗಳನ್ನೊಳಗೊಂಡ (ಜಿನೇಂದ್ರೋಕ್ತಂ ವಿಶುದ್ಧಾಂತರಂಗಂ ಅನೇಕಾತ್ಮಕಮುರ್ಚೆ ಸುತ್ತಟಿಯೆ ಧರ್ಮಧ್ಯಾನಬಂಧಂ: **ಶಾಂತಿಪು,** ೯. ೨೩)

**ಅನೈಕಾಂತಿಕ** – ಏಕಾಂತಿಯಲ್ಲದವನು (ಅನೈಕಾಂತಿಕರ್ ಕೆಲರ್ ತನುತರತನು ಗಳೊಳಂ ಅತಿವಿಶದ ಪ್ರಜ್ಞಾತಿಶಯವುಮಂ ಕಾಣಲಾದಪ್ಪುದು: **ಆದಿಪು,** ೨. ೧೦ ವ)

**ಅನ್ನ** – ಆಹಾರ (ಉನ್ನತ ಕುಕ್ಕುಟೇಶ್ವರ ಜಿನೇಶ್ವರಂ ಜಿನಭಕ್ತೆ ಪೋಗಿ ಕಾಣ್ಬನ್ನೆಗಂ ಅನ್ನಮಂ ಬಿಸುಟು: **ಅಜಿತಪು,** ೧. ೬೧)

**ಅನ್ನಂಬಡೆ** – ಆಹಾರವನ್ನು ಪಡೆ (ಮುನ್ನಿನ ಸಿರಿಯ ನೆನೆನೆನೆದು ಉನ್ನತಿಗೆಟ್ಟ ಬಡತನದ ಒದವಿಂದ ಅನ್ನಂಬಡೆಯದೆ ಮಱುಗಿ: **ಧರ್ಮಾಮೃ**, ೮. ೯೫)

**ಅನ್ನದಾನ** – ಧರ್ಮಕ್ಕಾಗಿ ಆಹಾರ ನೀಡುವುದು (ಅತಿಥಿಯೊಳ್ ಇನ್ನು ಅನ್ನದಾನಮಂ ಕುಡುವೆಡೆಯೊಳ್: **ಆದಿಪು**, ೧೫. ೪೦); (ಏಗೆಟ್ಟತೆನ್ನದೆ ಮನಮೋಗಡಿಸದೆ ತೀರದಾಱೆನೆಂದುಡುಗದೆ ನಿರ್ವೇಗಂ ಚಿತ್ತದೊಳಣಮಿನಿಸಾಗದೆ ತಾಂ ಮಾಳ್ಪುದನ್ನದಾನಮನಱಿಪಿಂ: **ಧರ್ಮಾಮೃತ**, ೪. ೩೬)

**ಅನ್ನಪ್ರಾಶನಕ್ರಿಯೆ** – ಮಗುವಿಗೆ ಅನ್ನ ತಿನ್ನಿಸುವುದು (ಮಾಸಪೃಥಕ್ತ್ವ ಪೋಗೆ ಪೂಜಾವಿಧಿಪೂರ್ವಕಂ ಯಥಾಕ್ರಮದಿನಗುಳೂಡುವುದು ಅನ್ನಪ್ರಾಶನಕ್ರಿಯೆ; **ಚಾವುಂಡಜಯ**, ಪು. ೧೮೧)

**ಅನ್ನಾಂಗ** – ಆಹಾರವನ್ನು ನೀಡುವ ಕಲ್ಪವಕ್ಷ; ಹತ್ತು ಕಲ್ಪವೃಕ್ಷಗಳಲ್ಲಿ ಒಂದು (ವಸನಾಂಗ ಆತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗ ಅನ್ನಾಂಗ ಸುರಾಂಗ ಭಾಜನಾಂಗ ಅವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ: **ಚಂದ್ರಪ್ರಪು**, ૩. ૩૪)

**ಅನ್ಯತರವೇದನೀಯ** – ವೇದ್ಯವಾಗುವಂತೆ ಮಾಡುವುದೇ ವೇದನೀಯ; ಸಾತಾವೇದನೀಯ ಅಸಾತಾವೇದನೀಯ ಎಂಬ ಎರಡು ಕರ್ಮಪ್ರಕೃತಿಗಳಲ್ಲಿ ಒಂದು (ನಿಜದ್ವಿಚರಸಮಯದಳ್ ಅನ್ಯತರವೇದನೀಯ ದೇವಗತಿ ತತ್ಪ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತವರ್ಣರಸಪಂಚಕ ಸಂಸ್ಥಾನ ಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ ಗಂಧದ್ವಿಕಂ: **ಆದಿಪು**, ೬. ೪೯ವ)

**ಅನ್ಯತ್ವ** – ಅನುಪ್ರೇಕ್ಷೆಗಳಲ್ಲಿ ಒಂದು, ಆತ್ಮನು ದೇಹಕ್ಕೆ ಸಂಬಂಧಿಸಿದ ವಸ್ತುಗಳಿಗಿಂತಲೂ ದೇಹಕ್ಕಿಂತಲೂ ಬೇರೆಯೆಂಬ ಸ್ಥಿತಿ (ಎರಡುಂ ಪಲಗೆಯಂ ಪತ್ತಿ ಪೋಗುತ್ತುಂ ಅನ್ಯತ್ವಮೆಂಬ ಅನುಪ್ರೇಕ್ಷೆಯನಿದಂ ಕಂಡು ನಂಬಿಂ ಎಂಬಂತೆ: **ಹರಿವಂಶ**, ೪. ೧೫ ವ)

**ಅನ್ವಯದತ್ತಿ** – ತನ್ನ ವಂಶವನ್ನು ಸ್ಥಿರವಾಗಿ ನೆಲೆಗೊಳಿಸಲು ವಂಶದ ಬೇರೆಯವನಿಗೆ ಧರ್ಮವನ್ನೂ ಸರ್ವಸ್ವವನ್ನೂ ಒಪ್ಪಿಸುವುದು (ತನ್ನ ಸಂತತಿಯಂ ನಿಱಿಸಲೆಂದು ಪುತ್ರಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಸರ್ವಸ್ವಮುಮಂ ಅಪ್ಪಯಿಸಿ ಕೊಡುವುದು ಅನ್ವಯದತ್ತಿ ಎಂಬುದು: **ಅಜಿತಪು**, ೧೨. ೧ ವ)

**ಅಪಕ್ಷ್ಮತಾಸ** – ರೆಪ್ಪೆ ಬಡಿಯದಿರುವುದು (ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ ಅಪಕ್ಷ್ಮತಾಸಂ ಆಯತಗಗನಪ್ರಚಾರಂ ಅಪಜೀವವಧಂ ಪರಿವೀತ ದೇಹಬಿಂಬತೆ: **ಆದಿಪು**, ೧೦. ೪೩)

**ಅಪಕ್ಷ್ಮಪಾತ** – ರೆಪ್ಪೆ ಮಿಟುಕಿಸದವನು (ಬಿಲ್ಲುಂಬೆಱಗುಮಾಗಿ ಚಿತ್ರನ್ಯಸ್ತರೂಪುಗಳಂತೆ ನಿಶ್ಚಳೀಭೂತರುಮಪಕ್ಷ್ಮಪಾತರುಮಾಗಿಯುಂ ನೀಡುಂ ನೋಡಿ: **ಶಾಂತಿಪು**, ೪. ೧೧ ವ)

**ಅಪಚಯ** – ಆಯುಷ್ಯ, ಬಲ, ಶರೀರ, ವೈಭವ ಮುಂತಾದವು ಕುಂದುವುದು (ಶರೀರ ಬಳ ಆಯುಃ ದೇಹಪ್ರಮಾಣ ಉಪಚಯ ಅಪಚಯಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ)

**ಅಪಜೀವವಧ** – ಪ್ರಾಣಿಹಿಂಸೆಯಿಲ್ಲದಿರುವುದು (ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ ಅಪಕ್ಷ್ಮತಾಸಂ ಆಯತಗಗನಪ್ರಚಾರಂ ಅಪಜೀವವಧಂ ಪರಿವೀತದೇಹಬಿಂಬತೆ: **ಆದಿಪು,** ೧೦. ೪೩)

**ಅಪಧ್ಯಾನ** – ಅನರ್ಥದಂಡದ ಒಂದು ಬಗೆ: ರಾಗದ್ವೇಷದಿಂದ ಇತರರಿಗೆ ಕೇಡು ಬಗೆಯುವುದು, ಅನ್ಯಧರ್ಮದ ಕಾವ್ಯಗಳ ಬಗ್ಗೆ ಚಿಂತಿಸುವುದು (ಗುರುಗಳೊಳ್ ಸಮಾತ್ಸರ್ಯಂ ಅಪಧ್ಯಾನಂ ಅಪಹರ್ಷಂ ಅವಿನಯಂ ಜ್ಞಾನದೃಗಾವರಣದಾಸ್ರವಕ್ಕೆ ನಿಮಿತ್ತಂ: **ಸುಕುಮಾಚ,** ೮. ೧೬)

**ಅಪರವಿದೇಹ** – ಸುಮೇರುಪರ್ವತದ ಪಶ್ಚಿಮದಲ್ಲಿರುವ ಗಂಧಮಾಲಿನೀ ಮುಂತಾದ ಹದಿನಾರು ಕ್ಷೇತ್ರಗಳು (ಜಂಬೂದ್ವೀಪದಪರವಿದೇಹದೊಳ್ ಗಂಧಿಳಮೆಂಬುದು ವಿಷಯಂ: **ಆದಿಪು,** ೨. ೩೫ ವ)

**ಅಪರಾಜಿತೆ** – ಎಂಟು ಮಂದಿ ದಿಗ್ವನಿತೆಯರಲ್ಲಿ ಒಬ್ಬಳು (ಜಯಂತೆ ಅಪರಾಜಿತೆ .. . ಎಂಬ ಎಣ್ಬರುಂ ದಿಗ್ವನಿತೆಯರುಂ: **ಆದಿಪು,** ೭. ೩ ವ)

**ಅಪವರ್ಗಪದ** – ಮೋಕ್ಷಪದವಿ (ಶತಬಳನಂ ಸಹಸ್ರಬಳಖೇಚರನಿಟ್ಟು ತಪೋನಿಯೋಗನಿಶ್ಚಿತಮನನಾಗಿ ಸಂದನಪವರ್ಗಪದಕ್ಕೆ: **ಆದಿಪು,** ೨. ೧೯)

**ಅಪವರ್ತ್ಯಾಯುಷ್ಯ** – ವಿಷ ಮುಂತಾದ ಹೊರಕಾರಣಗಳಿಂದ ಆಯುಸ್ಸು ಕುಗ್ಗುವುದು (ಧೃತನಿರಯಜಾರ್ಯವರಚರಮತನು ದಿವೋದ್ಭೂತಪವತ್ಯಾಯುಷ್ಯಸ್ಥಿತರ್: **ಸುಕುಮಾಚ,** ೮. ೧೪)

**ಅಪಾಯವಿಚಯ** – ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಎರಡನೆಯದು; ಲೋಕದ ಅಜ್ಞಾನ–ದುಃಖಗಳನ್ನು ಹೋಗಲಾಡಿಸುವ ಚಿಂತನೆ (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

**ಅಪಿಂಡ** – ಕರ್ಮದ ನಾನಾ ಬಗೆಗಳಲ್ಲಿ ಎರಡನೆಯ ವಿಭಾಗ, ನಾಮಕರ್ಮದಲ್ಲಿ ಎರಡನೆಯ ವಿಭಾಗ (ನಾನಾ ಕರ್ಮಮುಂ ಪಿಂಡಾಪಿಂಡನಾಮದಿಂ ತೊಂಬತ್ತು ಮೂಱು ತೆಱನಕ್ಕುಂ:: **ಶಾಂತಿಪು,** ೧೨. ೧೧ ವ)

**ಅಪೂರ್ವಕರಣ** – ಹದಿನಾಲ್ಕು ಗುಣಸ್ಥಾನಗಳಲ್ಲಿ ಒಂದು, ನೋಕಷಾಯ ಕರ್ಮಗಳ ಉಪಶಮ ಮತ್ತು ಕ್ಷಯವಾದಾಗ ಅಧಃಪ್ರವೃತ್ತಿಕರಣ, ಅಪೂರ್ವಕರಣ ಮತ್ತು ಅನಿವೃತ್ತಿಕರಣವೆಂಬ ಮೂರು ಪರಿಣಾಮಗಳಾಗಿ, ಇವುಗಳಲ್ಲಿ ಪ್ರತಿಸಮಯವೂ ಶುದ್ಧಿಹೊಂದುವಿಕೆಯುಂಟಾಗಿ ಅಪೂರ್ವ ಪರಿಣಾಮವಾಗುತ್ತದೆ (ಪ್ರಾಯೋಗ್ಯಾಧಃಪ್ರವೃತ್ತಿಕರಣಪರಿಣತನಪೂರ್ವಕರಣಕ್ಷಪಕಂ ಪ್ರಥಮಶುಕ್ಲಧ್ಯಾನ ಪರಿಣತನಾಗಿರ್ದಾಯುಃಕರ್ಮಮನುಟಿಪಿ: **ಆದಿಪು,** ೧೦. ೧೪ ವ)

**ಅಪ್ರತ್ಯಾಖ್ಯಾನ** – ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು (ಧನದತ್ತಂಗ ಮಾತನ ಪರದಿತಿ ಧನದತ್ತೆಗಂ ಉಗ್ರಸೇನನೆಂಬೊಂ ತನೂಜಂ ಅಪ್ರತ್ಯಾಖ್ಯಾನಕ್ರೋಧದಿಂ ತಿರ್ಯಗಾಯುಷ್ಯಂಗಟ್ಟಿ: **ಆದಿಪು,** ೫. ೧೪ ವ)

**ಅಪ್ರತ್ಯಾಖ್ಯಾನಕ್ರೋಧ** – ಭೂಮಿಯಲ್ಲಿ ಕೊರೆದ ರೇಖೆಯಂತೆ ಇರುವ ತೀವ್ರತರವಾದ ಕ್ರೋಧ (ಧನದತ್ತಂಗಮಾತನ ಪರದಿತಿ ಧನದತ್ತೆಗಂ ಉಗ್ರಸೇನನೆಂಬೊಂ ತನೂಜಂ ಅಪ್ರತ್ಯಾಖ್ಯಾನಕ್ರೋಧದಿಂ ತಿರ್ಯಗಾಯುಷ್ಯಂಗಟ್ಟಿ: **ಆದಿಪು,** ೫. ೧೪ ವ)

**ಅಪ್ರತ್ಯಾಖ್ಯಾನಚತುಷ್ಕ** – ಕ್ರೋಧ, ಮಾನ, ಮಾಯ ಮತ್ತು ಲೋಭವೆಂಬ ಕಷಾಯಗಳು (ವಿಶುದ್ಧಪರಿಣಾಮಾತಿಶಯಪರವಶನಪ್ರತ್ಯಾಖ್ಯಾನ ಕ್ರೋಧಮಾನ ಮಾಯಾ ಲೋಭಂಗಳೆಂಬೆಂಟು ಕಷಾಯಂಗಳಂ ಕಿಡಿಸಿ; **ಆದಿಪು,** ೧೦. ೧೪ ವ)

**ಅಪ್ರತ್ಯಾಖ್ಯಾನಮಾನ** – ಮಾನಕಷಾಯ, ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು (ಈ ವಿಷಯದ ವಿಜಯಪುರದೊಳ್ ಆನಂದನೃಪತಿಗಂ ವಸಂತಸೇನೆಗಂ ಹರಿಕಾಂತನೆಂಬ ತನಯಂ ಅಪ್ರತ್ಯಾಖ್ಯಾನಮಾನದೊಳ್: **ಆದಿಪು,** ೫. ೧೬ ಮತ್ತು ೧೬ ವ)

**ಅಪ್ರತ್ಯಾಖ್ಯಾನಮಾಯೆ** – ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು (ಕುಬೇರ ದತ್ತಂಗಂ ತದ್ವನಿತೆ ವಸುದತ್ತೆಗಂ ನಾಗದತ್ತನೆಂಬೊಂ ಮಗಂ ಅಪ್ರತ್ಯಾಖ್ಯಾನ ಮಾಯೆಯಂ ಕೈಕೊಂಡು: **ಆದಿಪು,** ೫. ೧೭ ವ)

**ಅಪ್ರತ್ಯಖ್ಯಾನಲೋಭ** – ಮಾನಕಷಾಯ, ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು (ಸುಪ್ರತಿಷ್ಠಪುರದೊಳ್ ಅಪ್ರತ್ಯಾಖ್ಯಾನಲೋಭಾಭಿಭೂತಂ ದ್ರವ್ಯಲೋಲು ಪನೆಂಬೊಂ ಕಲ್ಲುರಿಗನಾಗಿ: **ಆದಿಪು,** ೫. ೧೮ ವ)

**ಅಪ್ರಮತ್ತ** – ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು, ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದರಿಂದ ಮೇಲಿನವುಗಳಲ್ಲಿರುವ ಆತ್ಮ (ಬಟಿಯಂ ಅಂತರ್ಮುಹೂರ್ತ ಕಾಲಂ ಪ್ರಮತ್ತಾಪ್ರಮತ್ತ ಪರಾವರ್ತನಸಹಸ್ರಂಗೆಯ್ದು: **ಆದಿಪು,** ೧೦. ೧೪ ವ)

**ಅಪ್ರಮತ್ತಗುಣಸ್ಥಾನ** – ಆತ್ಮನ ಆಧ್ಯಾತ್ಮಿಕ ಉನ್ನತಿಯನ್ನು ಸೂಚಿಸುವ ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದು; ಕಷಾಯಗಳ ತೀವ್ರತೆ ಕಡಿಮೆಯಾಗುವುದು (ಅಂತವಿಶ್ರಾಂತ ಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧ ಲೇಶ್ಯಾಪರಿಣಾಮ ಪರಿಪೂರ್ಣಂ ಅಪ್ರಮತ್ತಗುಣಸ್ಥಾನದೊಳ್ ನಿಂದು ... ಕ್ರೋಧ ಮಾನ ಮಾಯಾ ಲೋಭಗಳೆಂಬ ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ: **ಮಲ್ಲಿನಾಪು,** ೧೪. ೫೭ ವ)

**ಅಪ್ರಾಸುಕ** – ಜೀವಂತ ವಸ್ತುಗಳಿಂದ ಕೂಡಿರುವ ಹೂ, ಹಣ್ಣು, ನೀರು ಮೊದಲಾದ ಅಶುದ್ಧ ವಸ್ತುಗಳು (ಧರೆ ಪೂಗಳ ತುಱುಗಲೊಳೆಸೆಯೆ ಪೊಟಲಿದು ಅಪ್ರಾಸುಕಮೆಂದೊಳಪುಗದೆ: **ಆದಿಪು,** ೫. ೧೦)

**ಅಬ್ಬೆ** – ಜೈನಸನ್ಯಾಸಿನಿ (ಯತಿಗಳ ಪಾವನ ಪಾದಪದ್ಮಂಗಳಂ ಗಣಮಂ ಮೆಟ್ಟಿ ಪವಿತ್ರಂ ಮಾಟ್ಪಿ ಪೊಟಲ್ತಾದುದೆಂದು ಬೇಗಮಬ್ಬೆಗಳಂ ಬಂದಿಸಿ ಬಸದಿಯಂ ಪೊಱಮಟ್ಟು: **ನೇಮಿನಾಪು,** ೧. ೭೯ ವ)

**ಅಭಯದಾನ** – ನಾಲ್ಕು ಬಗೆಯ ದಾನಗಳಲ್ಲಿ ಒಂದು, ಜೀವಿಗಳ ಎಲ್ಲ ಬಗೆಯ ಭಯವನ್ನೂ ದೂರಮಾಡುವುದು (ಕುಡುವುದುಮಾಹಾರಾಭಯಭೈಷಜ್ಯ ಶಾಸ್ತ್ರದಾನದಿಂ ಚತುರ್ವಿಧಮಕ್ಕುಂ: **ಆದಿಪು,** ೧೦. ೯ ವ)

**ಅಭವ್ಯ** – ಭವ್ಯನಲ್ಲದ, ಮುಕ್ತಿ ಹೊಂದಲಾರದ ಜೀವ (ನೀಂ ಬೆಸಸಿ ಅಭವ್ಯನೊ ಭವ್ಯನೊ ದೂರಭವ್ಯನೋ: **ಆದಿಪು,** ೨. ೩೪)

**ಅಭಿಯೋಗ್ಯ** – ಇಂದ್ರ ಮುಂತಾದವರಿಗೆ ವಾಹನಸೇವೆ ಮಾಡುವವರು (ಲೋಕಪಾಲ ಅಭಿಯೋಗ್ಯ ದಿಗ್ಗಜೇಂದ್ರ ದೇವವಿಹಾರಪ್ರಸಾದ ಅಭಿರಾಮಮುಂ ... ಆಗಿ: **ಆದಿಪು,** ೧. ೪೯ ವ); ಒಂದು ದೇವತಾವರ್ಗ (ಸಾಮಾನಿಕ ತ್ರಾಯಸ್ತ್ರಿಂಶತ್ಪಾರಿಷದ ಆತ್ಮರಕ್ಷ ಲೋಕಪಾಳ ಅಭಿಯೋಗ್ಯ ಕಿಲ್ಬಿಷರೊಡನೆ: **ಆದಿಪು,** ೭. ೪೨ ವ)

**ಅಭಿಷೇಕ** – ಒಂದು ಗರ್ಭಾನ್ವಯಕ್ರಿಯೆ, ತಪಶ್ಚರಣದಿಂದ ಹೊಂದುವ ಅಭಿಷೇಕಪ್ರಾಪ್ತಿ (ಅಭಿಷೇಕ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಅಭೀಕ್ಷ್ಣಜ್ಞಾನೋಪಯೋಗ** – ದರ್ಶನವಿಶುದ್ಧತೆ, ಷೋಡಶಭಾವನೆಗಳಲ್ಲಿ ಒಂದು, ಜೀವಾದಿ ಪದಾರ್ಥ ಸ್ವತತ್ವವಿಷಯ ಸಮ್ಯಕ್‌ಜ್ಞಾನದಲ್ಲಿ ನಿರಂತರ ಯುಕ್ತವಾಗಿರುವುವು (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯ ಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣೆ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಅಭುಕ್ತಿ** – ಭೋಜನಾಭಾವ (ಮಿತನಖಕೇಶಶೋಭಿತ ತನುತ್ವಂ ಅಭುಕ್ತ್ಯುಪಸರ್ಗಭಾವಂ ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ: **ಆದಿಪು,** ೧೦. ೪೩)

**ಅಭ್ಯಂತರತಪಸ್** – ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ಬಗೆಯ ಅಂತರಂಗ ತಪಸ್ಸು (ಮತ್ತಂ ಅಭ್ಯಂತರ ತಪಷ್ಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಯಾಪತ್ಯ ಸ್ವಾಧ್ಯಾಯ ಧ್ಯಾನ ವ್ಯುತ್ಸರ್ಗಂಗಳೊಳಂ ಕೈಕೊಂಡು: **ಆದಿಪು,** ೬. ೩೩ ವ)

**ಅಭ್ಯಂತರಪರಿಗ್ರಹ** – ಮಮತೆಗೆ ಕಾರಣವಾಗುವ ಹದಿನಾಲ್ಕು ಬಗೆಯ ಆಂತರಿಕ ಭಾವನೆಗಳು (ಮಿಥ್ಯಾತ್ವ ಕ್ರೋಧ ಮಾನ ಮಾಯಾ ಲೋಭ ಹಾಸ್ಯ ರತ್ಯರತಿ ಶೋಕ ಭಯ ಜುಗುಪ್ಸಾ ವೇಧ ರಾಗ ದ್ವೇಷ ಚತುರ್ದಶಭೇದಮಪ್ಪಭ್ಯಂತರ ಪರಿಗ್ರಹಮಮಂ: **ಅಜಿತಪು,** ೬. ೧೨೩ ವ)

**ಅಭ್ಯರ್ಚನೆ** – ಪೂಜೆ, ಸತ್ಕಾರ (ಜೈನಪದ ಅಭ್ಯರ್ಚನೆಯುಂ ದಾನಮುಂ ಅಣಮಿಲ್ಲದಿರ್ದೊಡಂ ದಿಬ್ಯಸುಖಂ ಜೈನಂಗಕ್ಕುಂ: **ಸಮಯಪ,** ೪. ೬೯)

**ಅಭ್ಯಾಹತಪ್ರತಿಪತ್ತೆ** – ಮನೆಗೆ ಬಂದವರಿಗೆ ಮಾಡುವ ಸತ್ಕಾರ, ಉಪಚಾರ (ಆಭ್ಯಾಗತಪ್ರತಪತ್ತಿಗೆಯ್ಯಲ್ವೇಟ್ಟುಮೆಂದು ಗುರುಗಳನೊಡಂಬಡಿಸಿ ಬೇಗಮನ್ನ ಪಾನಾದಿಗಳಿಂ ಸಂತೋಷಂಬಡಿಸಿದೊಡೆ: **ಹರಿವಂಶ,** ೧೧. ೨. ವ)

**ಅಮರಕಾಂತೆ** – ಜಿನಜನನಿಯ ಗರ್ಭಶೋಧನ ಸಂದರ್ಭದಲ್ಲಿ ವಿವಿಧ ಸೇವೆಗಳಿಗೆ ನಿಯೋಜಿತರಾದ ದೇವತೆಯರು (ಅನ್ಯನಗನಿವಾಸಗಳಪ್ಪ ಮಾಳಿಕೆ ಮಾಳಿನಿ ಕನಕದೇವಿ ಕನಕಚಿತ್ರೆ ಪುಷ್ಪಚೂಳಿಕೆ ಮಾಳತಿ ಸುರದೇವಿ ತ್ರಿಶಿರೆ ಮೊದಲಾಗಿ ಪೆಱರುಮಮರಕಾಂತೆಯರಂ: **ಆದಿಪು,** ೭. ೩ ವ)

**ಅಮೂಢದೃಷ್ಟಿತ್ವ** – ಸಮ್ಯಗ್ದರ್ಶನದ ಎಂಟು ಅಂಗಗಲ್ಲಿ ಒಂದಾದ ಅಮೂಢ ದೃಷ್ಟಿಯನ್ನು ಹೊಂದಿರುವುದು (ಮರಕ್ಕೆ ಶಾಖೆಯುಮೆಂತಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಂ ಎಂದು ಎಸೆವ ಅಂಗಂ ಎಂಟರಿಂ: **ಧರ್ಮಾಮೃ,** ೧. ೭೨ ವ ಮತ್ತು ೭೩)

**ಅಯಶಸ್ಕೀರ್ತಿ** – ಎಪ್ಪತ್ತೆರಡು ಪ್ರಕೃತಿಗಳಲ್ಲಿ ಅಪಕೀರ್ತಿ ಎಂಬ ಪ್ರಕೃತಿ ಅಥವಾ ಕರ್ಮ (ಶುಭಾಶುಭ ಸುಸ್ವರ ದುಸ್ವರ ಸುಭ್ಗ ದುರ್ಭಗ ಪ್ರತ್ಯೇಕ ಶರೀರ ಅಯಶಸ್ಕೀರ್ತಿ ಅನಾದೇಯ ... ದ್ವಿಸಪ್ತತಿ ಪ್ರಕೃತಿಗಳಂ: **ಆದಿಪು,** ೧೬.೪೯ ವ)

**ಅಯೋಗಕೇವಲಿ** – ಮನೋವಾಕ್ಕಾಯಗಳ ಚಾಂಚಲ್ಯವಿಲ್ಲದವನು, ಹದಿನಾಲ್ಕನೆಯ ಗುಣಸ್ಥಾನವನ್ನು ಸೇರಿದವನು (ವಾಙ್ಮನಕಾಯಮಯೋಗವನಡಂಗಿಸಿ ಸಕಲಬದ್ಧಾಶ್ರವ ನಿರೋಧದಿನಯೋಗಿ ಕೇವಲಿ ಗುಣಸ್ಥಾನಮಂ ಪೊರ್ದಿ: **ಪಂಪರಾ,** ೧೬. ೭೯ ವ)

**ಅಯೋಗಕೇವಳಿ** – ಅಯೋಗ ಕೇವಲಿ (ವೃಷಭನಾಥಂ ಸ್ವಸ್ಥಂ ಅಯೋಗಕೇವಳಿ ಕೇವಳಿಪ್ರದೇಶನಿರ್ಜರೆಯಂ ಮಾಡುತ್ತುಂ: **ಆದಿಪು,** ೧೬.೪೯ ವ)

**ಅಯೋಗಗುಣಸ್ಥಾನ** – ಹದಿನಾಲ್ಕನೆಯ ಗುಣಸ್ಥಾನ (ಪಂಚಹ್ರಸ್ವಾಕ್ಷರೋಚ್ಚಾರಣ ಮಾತ್ರ ಕಾಲಪ್ರಮಿತಾಯೋಗ ಗುಣಸ್ಥಾನಸ್ಥಿತಂ: **ಆದಿಪು,** ೧೬.೪೯ವ)

**ಅಯೋಗಿ** – ಅಯೋಗ ಕೇವಲಿ (ಪಲ್ಲಿಖೇಡಮೆಂಬ ಊರ್ಗೆ ಬಂದು ಯೋಗ ನಿರೋಧಂ ಗೆಯ್ದು ಅಯೋಗಿ ಭಟಾರರಾಗಿ: **ವಡ್ಡಾರಾ,** ಪು ೧೫೫, ಸಾ ೨೧)

**ಅಯೋಧ್ಯ** – ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಬ್ಬನಾದ ಸೇನಾಪತಿಯ ಹೆಸರು (ಅಯೋಧ್ಯ ಭದ್ರಮುಖ ಕಾಮವೃಷ್ಟಿ ಬುದ್ಧಿಸಾಗರ ವಿಜಯಪರ್ವತ ಪರಂಜಯ ... ಸ್ತ್ರೀರತ್ನಂಗಳ್ ಎಂಬ ಏೞುಂ ಜೀವರತ್ನಂಗಳುಮಂ: **ಚಂದ್ರಪ್ರಪು,** ೬. ೧೧೧ ವ)

**ಅಯ್ಯುದಸಮಿತಿ** – ಮುನಿಗಳು ಆಚರಿಸಬೇಕಾದ ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ, ಉತ್ಸರ್ಗ ಎಂಬ ಐದು ವ್ರತರೂಪದ ಪ್ರತಿಜ್ಞೆ (ನಡೆವ ನುಡಿವ ಉಣ್ಬ ಕೊಳ್ವ ಇಡುವ ಎಡೆಯೊಳ್ ತಾಂ ಕಾಯುವುಲ ಮನುಗುಳ್ವೆಡೆಯೊಳ್ ಎಡಂಬಡಂ ಎನಿಸದೆ ಓವಿ ಜೀವಮನಡಕಂಬೆರಸು ಅಯ್ಯುದಸಮಿತಿಯೊಳ್ ಮುನಿ ನೆಗಟ್ದಂ: **ಆದಿಪು,** ೬. ೨೮)

**ಅರಣ್ಯ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಅರತಿ** – ಚಾರಿತ್ರ ಮೋಹನೀಯಕರ್ಮದ ಪ್ರಕೃತಿಗಳಲ್ಲಿನ ಒಂಬತ್ತು ನೋಕಷಾಯ ಗಳಲ್ಲಿ ಒಂದು; ಅರುಚಿಯನ್ನುಂಟುಮಾಡುವಂಥದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯ ಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ಅರಿಂಜಯಲಿಂಗ** – ಮುನಿಗಳ ಯೋಗಸಾಧನೆಯ ಒಂದು ವಿಧ, ತೃಪ್ತಿಯ ಲಕ್ಷಣ (ಸ್ತ್ರೀಲಿಂಗಂ ಸರಸ್ವತಿಲಿಂಗಮೆಂಬುದುಂ ಪ್ರತಿವ್ರತಾಲಿಂಗಮೆಂಬುದುಂ ಕೇಶವ್ರತಿಲಿಂಗಮೆಂಬುದುಂ ಅರಿಂಜಯಲಿಂಗಮೆಂಬುದುಂ ಚತುರ್ವಿಧಮಕ್ಕುಂ. ಅದಱೊಳ್ ಸರಸ್ವತಿಲಿಂಗಮಧ್ಯಯನಕಾರಣಂ ಪತಿವ್ರತಾಲಿಂಗಂ ವಿಕಲ್ಪಯೋಗ ಸಾಧನಂ ಕೇಶವ್ರತಿಲಿಂಗಂ ಸನ್ಮಾರ್ಗಸಾಧನಂ ಅರಿಂಜಯಲಿಂಗಂ ತೃಪ್ತಿ ಲಕ್ಷಣಂ. ಇವು ನಿರ್ವಾಣಸಾಧನಲಿಂಗಂ; **ಚಾವುಂಡಜಯ,** ಪು ೧೮೯)

**ಅರಿಷ್ಟ** – ಒಂದು ರತ್ನ ಪ್ರಭೇದ (ರುಚಕಾಚಳದ ಮೂಡಣ ದೆಸೆಯುಂ ... ಅರಿಷ್ಟದ ಅಪರಾಜಿತೆಯುಂ: **ಚಂದ್ರಪ್ರಪು,** ೧೧. ೧೨೨ ವ)

**ಅರಿಷ್ಟನೇಮಿ** – ಇಪ್ಪತ್ತೆರಡನೆಯ ತೀರ್ಥಂಕರ (ಆ ಸುರೇಶ್ವರಂ ತ್ರಿವಿಷ್ಟಪಾಧೀಶ್ವರಗೆ ಅರಿಷ್ಟನೇಮಿಸ್ವಾಮಿಯೆಂಬ ಪುಣ್ಯಾಭಿಧಾನಮನಿಟ್ಟು: **ಕರ್ಣನೇಮಿ,** ೮. ೧೬೬ ವ)

**ಅರಿಷ್ಟೆ** – ಒಂದು ನರಕದ ಹೆಸರು (ಅಲ್ಲಿಂದತ್ತಂ ಏಕರಜ್ಜುಪ್ರಮಾಣಾಂತರದೊಳ್ ಅರಿಷ್ಟೆಯೆಂಬ ಪೆಸರನುಳ್ಳ ... ನರಕಬಿಲ: **ಅಜಿತಪು,** ೧೧. ೭ ವ)

**ಅರುಣ** – ಲೋಕಾಂತಿಕ ದೇವರಲ್ಲಿ ಒಂದು ಬಗೆ (ಸಾರಸ್ವತ ಆದಿತ್ಯ ವಹ್ನಿ ಅರುಣ ... ದೇವರ್ ಬಂದು: **ಆದಿಪು,** ೯. ೬೦ ವ)

**ಅರುಹ** – ತೀರ್ಥಂಕರ (ಎಱಗುವಂ ಅರುಹಂಗೆ ಉಳಿದರ್ಗೆಱಗಂ ಕನಸಿನೊಳಂ; **ಕಬ್ಬಿಗಕಾ,** ೯)

**ಅರ್ಕಪೂಜೆ** – ಸೂರ್ಯಪೂಜೆ (ಎಂಟುಂ ತೆಱದ ಪೂಜೆಯುಮಂ ಅರ್ಕಪೂಜೆಯುಮಂ ಮನ್ನಿಸಿ: **ಆದಿಪು,** ೧೫. ೧೩ ವ)

**ಅರ್ಘಿಸು** – ಅರ್ಘ್ಯವನ್ನು ಕೊಡು (ಅರ್ಘ್ಯಮನೆತ್ತಿ ದಿನೇಶಂಗೆ ಅರ್ಘಿಸಿ ಪೊಡೆವಟ್ಟು: **ಸುಕುಮಾಚ,** ೩. ೪)

**ಅರ್ಘ್ಯಕರ** – ಪೂಜಾಸಾಮಗ್ರಿಗಳನ್ನು ಕೈಯಲ್ಲಿಟ್ಟುಕೊಂಡವನು (ವಿವಿಧ ಅರ್ಘ್ಯಕರರ್ ಕಾಣ್ಬುಜ್ಜುಗದಿಂ ಭವನ ಮಹತ್ತರದೇವರ್ ಕ್ರಮದಿಂ ಬರೆ: **ಚಂದ್ರಪ್ರಪು,** ೪. ೬೩)

**ಅರ್ಘ್ಯಪ್ರದೀಪ** – ಗೌರವದ ಹಣತೆ (ಅರಿಮಕುಟರತ್ನಮಂ ನಿಜಚರಣಕ್ಕರ್ಘ್ಯ ಪ್ರದೀಪಮಾಗಿರ್ಪುದಂ ಆ ಭರತೇಶ್ವರಂಗೆ ಕಾಣ್ಬಂತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ: **ಆದಿಪು,** ೧೧. ೧೨)

**ಅರ್ಘ್ಯಹಸ್ತ** – ಕೈಯಲ್ಲಿ ಅರ್ಘ್ಯವನ್ನು ಹಿಡಿದವನು (ಉಡುಗಿ ಪಿಂಛಚ್ಛತ್ರಮಂ ಪ್ರಶ್ರಯಾಕರವೇಷೋಚಿತರ್ ಅರ್ಘ್ಯಹಸ್ತರ್ ಇದಿರಂ ಬಂದರ್ ಭಯ ಭ್ರಾಂತಿಯಿಂ: **ಆದಿಪು,** ೧೨. ೬೮)

**ಅರ್ಘ್ಯೋದ್ಧರಣ** – ಎತ್ತಿ ಅರ್ಘ್ಯವನ್ನು ಸಲ್ಲಿಸುವುದು (ಕಳಮಧವಳಾಕ್ಷತಂಗಳ ಪೊಳೆವಲರ್ಗಳ ಚಂದನದ್ರವೋನ್ಮಿಶ್ರ ಜಲಂಗಳ ಪೊಳೆಪಿನೊಳೆಸೆದುದು ವಿಯತ್ತಳಂಬರಂ ನೆಗೆದುದಿಂದ್ರನರ್ಘ್ಯೋದ್ಧರಣಂ: **ಆದಿಪು,** ೭. ೮೦)

**ಅರ್ಚನಾನೀಕ** – ಪೂಜಾದ್ರವ್ಯಗಳ ಸಂದಣಿ (ಜಿನಪದಾಂಭೋಜಮಂ ಪೂಜಿಸಿದ ವಿವಿಧಮಪ್ಪ ಅರ್ಚನಾನೀಕಮಂ ದೇವನಿಕಾಯಂ ಪ್ರೀತಿಯಿಂದಂ ... ತಾಳುವರ್: **ಸಮಯಪ,** ೧. ೧೨೧)

**ಅರ್ಚನಾವಿಧಿ** – ಪೂಜಾಕ್ರಮ (ಏಂ ದ್ರವ್ಯದ ಭವದ ಅರ್ಚನಾವಿಧಿ ಪಿರಿದೋ: **ಶಾಂತಿಪು,** ೧೨. ೪೭)

**ಅರ್ಚನೆ** – ಪೂಜಾಸಾಮಗ್ರಿ (ವಿವಿಧ ಅರ್ಚನೆಗಳಿನರ್ಚಿಸಿ ವಿವಿಧಸ್ತುತಿಶತಸಹಸ್ರದಿಂ ಸ್ತುತಿಯಿಸಿ: **ಆದಿಪು,** ೫. ೭೨)

**ಅರ್ಚನೆಗುಣಿ** – [ಅರ್ಚನೆ+ಕುಣಿ] ಅರ್ಚನೆಯ ಭಾಗವಾಗಿ ಕುಣಿ (ತಮ್ಮುತ್ತಮಿಕೆ ಯನೊಕ್ಕು ಆಗಡೆ ಸತ್ತಪೆವೆಂದಂಜಿ ಬಳರಿಗೆ ಅರ್ಚನೆಗುಣಿವರ್: **ಸಮಯಪ,** ೯. ೯೧)

**ಅರ್ಚಾಕ್ರೀಡನ** – ಪೂಜೆಯ ಆಟ (ತತ್ ಪ್ರತಿಮಾನೀಡಾಗಮಂ ಅರ್ಚನಾ ಕ್ರೀಡನಮುಂ ಮುಕ್ತಿಹೇತುವಪ್ಪುದು ಪಿರಿದೇ: **ಶಾಂತಿಪು,** ೧೨. ೪೯)

**ಅರ್ಚಿಸು** – ವೀರಶಯ್ಯೆಯ ಮೇಲೆ ಏಕಪಾರ್ಶ್ವದಲ್ಲಿ ಮಲಗಿ ಆಹಾರ ಬಿಟ್ಟು ಮರಣವನ್ನು ಸಾಧಿಸುವ ಕ್ರಮ (ಸಿದ್ಧಕೂಟಮಂ ತ್ರಿಃಪ್ರದಕ್ಷಿಣಂಗೈದು

ಜಿನೇಂದ್ರಾರ್ಚನಾ ಪುರಸ್ಸರಂ ವಾಚನಾಗ್ರಹಣಸಮೇತಂ ಆರಾಧನೆಯಿಂ ಅರ್ಚಿಸಿ: **ಆದಿಪು,** ೨. ೫೦ ವ)

**ಅರ್ಥಕಥೆ:** ಧರ್ಮಕಥೆಗಳಲ್ಲಿನ ಒಂದು ವಿಧ; ರಾಜರ ಬಗೆಗಿನ ಕಥೆಯೇ ಅರ್ಥಕಥೆ (ಅರ್ಥಕಥೆಯೆಂದುಂ ಕಾಮಕಥೆಯೆಂದುಂ ಧರ್ಮಕಥೆಯೆಂದುಂ ವ್ಯಾಮಿಶ್ರಕಥೆಯೆಂದುಂ ಚತುರ್ವಿಧಮಕ್ಕುಂ. ಅವಱೊಳರ್ಥಕಥೆಯೆಂಬುದು ದೇಶಕಾಲಾಕ್ಷೇಪಣಮುಂ ಸಾಮಾದ್ಯುಪಾಯ ಸಮುದ್ಭೂತಮಲಬ್ಧಲಾಭಾದಿ ರಾಜವೃತ್ತಚತುಷ್ಟಯಮುಮಪ್ಪುದು. **ಚಾವುಂಡಜಯ,** ಪು. ೩೨೬)

**ಅರ್ಥರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಅರ್ಥರುಚಿಯೆಂಬುದು ವಚನವಿಸ್ತರದಪರಾಙ್ಮುಖತ್ವದಿನುಪದೇಶಕರ್ ಪೇೞ್ದರ್ಥ ಸತ್ಯದೊಳಪ್ಪ ಶ್ರದ್ಧಾನಂ: **ಚಾವುಂಡಜಯ,** ಪು. ೩೩೭)

**ಅರ್ಥಾಪತ್ತಿ** – ಪ್ರತ್ಯಕ್ಷಾದಿ ಪ್ರಮಾಣಗಳಲ್ಲಿ ಒಂದು (ಮೊಲೆಯನುಣ್ಬಭ್ಯಾಸಮಂ ಕಲಿಸಿದರಾರುಮಿಲ್ಲದು ಕಾರಣದಿಂ ಪಿಂದಣ ಜನ್ಮದೊಳಾತ್ಮನುಂಟೆಂಬಿ ದರ್ಥಾಪತ್ತಿಯಿಂ ಪ್ರತಿಪನ್ನಂ: **ಧರ್ಮಬಾಹು,** ೫. ೬೬ ವ)

**ಅರ್ಧಚಕ್ರವರ್ತಿ** – ಭರತಖಂಡದ ಮೂರು ಖಂಡಗಳಿಗೆ ಅಧಿಪತಿಯಾದ ಸಾಮ್ರಾಟ (ಅದನಾಳ್ವೊಂ ವಿಷ್ಣು ಅರ್ಧಚಕ್ರಿ ಆತನ ತಂದೆ ವಸುದೇವಸ್ವಾಮಿಯೆಂಬೊಂ: **ವಡ್ಡಾರಾ,** ಪು ೫೦, ಸಾ ೧೪)

**ಅರ್ಹಚ್ಛಾಸನ** – (ಅರ್ಹತ್+ಶಾಸನ) ಜಿನನ ಆಜ್ಞೆ, ಜೈನಧರ್ಮ (ಅರ್ಹಚ್ಛಾಸನದೆಱ ವಿಡಿದು ಅಘಮಂ ತ್ರಾಸಿಸಲೆಂದು ಅಮಳದೀಕ್ಷೆಯಂ ಕೆಯ್ಕೊಂಡಳ್: **ಶಾಂತಿಪು,** ೪. ೮೪)

**ಅರ್ಹತ್** – ಅರಹಂತ, ಪಂಚಪರಮೇಷ್ಠಿಗಳಲ್ಲಿ ಒಬ್ಬ, ಸಯೋಗಕೇವಲಿ, ಘಾತಿಕರ್ಮಗಳನ್ನು ನಾಶಪಡಿಸಿಕೊಂಡವನು (ಉದ್ಧರಿಸುಗೆ ತಾತ್ಪರ್ಯದಿಂ ಅರ್ಹತ್ ಸಿದ್ಧ ಆಚಾರ್ಯ ಉಪಾಧ್ಯಾಯ ಸರ್ವಸಾಧುಗಳೆಮ್ಮಂ: **ಆದಿಪು,** ೧. ೬)

**ಅರ್ಹತ್(ಭಕ್ತಿ)** – ದರ್ಶನವಿಶುದ್ಧತೆ, ಷೋಡಶಭಾವನೆಗಳಲ್ಲಿ ಒಂದು, ಅರ್ಹಂತನ ಬಗೆಗಿನ ಭಕ್ತಿ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪ ಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯ ಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್: **ಚಾವುಂಡಜಯ,** ಪು ೨೦೬)

**ಅರ್ಹತ್ಪದ** – ತೀರ್ಥಂಕರ ಪದವಿ, ತೀರ್ಥಂಕರನ ಪಾದ (ಅರ್ಹತ್ಪದಮಂ ನೆನೆಯುತ್ತುಂ ಅನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ: **ಆದಿಪು,** ೨. ೫೭)

**ಅರ್ಹತ್ಪರಮೇಶ್ವರ** – ತೀರ್ಥಂಕರಸ್ವಾಮಿ, ಭವಬಂಧನದಿಂದ ಮುಕ್ತನಾಗಿ ಸಂಸಾರ ನಿಸ್ತರಣೋಪಾಯವನ್ನು ಭವ್ಯರಿಗೆ ಬೋಧಿಸಿ ಮೋಕ್ಷಕ್ಕೆ ಸಂದ ಸಯೋಗ ಕೇವಲಿ, ಅವನೇ ಮುಂದೆ ಅಯೋಗಕೇವಲಿಯಾಗುತ್ತಾನೆ (ಮುದಮಂ ಎಯ್ದುವಂ ಅರ್ಹತ್ಪರಮೇಶ್ವರ ಮಣಿಭವನೋಪರಿಲಂಘನ ಪಾಪಲೋಪ ದಿಂದಂ ಚಂದ್ರಂ: **ಅನಂತಪು,** ೧೦೫)

**ಅರ್ಹತ್ಪ್ರತಿಮೆ** – ಜಿನಪ್ರತಿಮೆ (ಉನ್ನತ ವೇದೀತಳಾಷ್ಟಮಹಾಪ್ರಾತಿಹಾರ್ಯಸಮನ್ವಿತ ಜಗತ್ಪೂಜ್ಯ ಪೂಜಿತಾರ್ಹತ್ಪ್ರತಿಮೆಗಳಂ ನಿಜೆಸಿ: **ಆದಿಪು,** ೧೫. ೧೬ ವ)

**ಅರ್ಹತ್ಪ್ರವಚನ** – ತೀರ್ಥಂಕರನ ಉಪದೇಶ (ಸುಖಮಂ ಭಾವಿಸೆ ಶರೀರಿಗೆ ಅರ್ಹತ್ಪ್ರವಚನಮಲ್ಲದೆ ಪೆಱತಿಲ್ಲ: **ಚಂದ್ರಪ್ರಪು,** ೨. ೩೯)

**ಅರ್ಹದಾದಿಭಕ್ತಿ** – ಷೋಡಶಭಾವನೆಗಳಲ್ಲಿ ಒಂದು, ಕೇವಲಜ್ಞಾನಿಗಳ ಬಗೆಗಿನ ಅನುರಾಗ (ಅರ್ಹದಾದಿಭಕ್ತಿಯೆಂಬುದು ಕೇವಳಜ್ಞಾನಧರರಪ್ಪಾಚಾರ್ಯರೊಳಂ ... ನಿಶ್ರೇಣೀಭೂತಮಪ್ಪಾಗಮದೊಳಂ ಮನೋವಾಕ್ಕಾಯ ತ್ರಿಶುದ್ಧಿಯಿನಪ್ಪನುರಾಗಂ: **ಚಾವುಂಡಜಯ,** ಪು. ೨೦೭)

**ಅರ್ಹದಾಲಯ** – (ಅರ್ಹತ್+ಆಲಯ) ಬಸದಿ (ಅವಱಿಡೆಯೊಳ್ ತಾನೊಂದೊಂದು ಅರ್ಹದಾಲಯಂ ಸೊಗಯಿಸುಗುಂ: **ಆದಿಪು,** ೧೦. ೨೪)

**ಅರ್ಹದ್ರೂಪ** – [ಅರ್ಹತ್+ರೂಪ] ಜಿನನ ರೂಪ (ಭರತರಾಜಪುತ್ರಂ ಮರೀಚಿಯೊರ್ಬನುಟಿಯೆ ಮುನ್ನಂ ಭಗ್ನತಪರಾದ ಕಚ್ಛಮಹಾಕಚ್ಛಾದಿಗಳ್ ಅರ್ಹದ್ರೂಪಮಂ ಕೈಕೊಂಡರ್: **ಆದಿಪು,** ೧೦. ೬೫ ವ)

**ಅರ್ಹನ್ಮತ** – (ಅರ್ಹತ್+ಮತ) ಜೈನಮತ (ಅರ್ಹನ್ಮತ ಸ್ಥಾಪನಾಚಾರ್ಯ ಪರವಾದಿಭಯಂಕರನೆನಿಸುತ್ತ: **ತ್ರಿಷಷ್ಟಿಪು,** ೨೯. ೩ ವ)

**ಅರ್ಹಲ್ಲಕ್ಷ್ಮಿ** – (ಅರ್ಹತ್+ಲಕ್ಷ್ಮಿ) ಮೋಕ್ಷಲಕ್ಷ್ಮಿ (ಅರ್ಹಲ್ಲಕ್ಷ್ಮೀಪ್ರಭುತೆವರಂ ಬರೆಯಿಸಿ ಭಕ್ತಿಭಾರಮಂ ಸಫಲಮೆನಿಸಿ ನಿಜೆಸಿದನಿಂದ್ರಂ: **ಶಾಂತಿಪು,** ೧೨. ೪೧)

**ಅಲಾಭ** – ಮುನಿಗೆ ಚರಿಗೆಯಲ್ಲಿ ಭಿಕ್ಷೆ ದೊರೆಯದಿರುವುದು (ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರೆಂದರ್ ಏನಲಾಭಮಾದುದೇ: **ವಡ್ಡಾರಾ,** ಪು. ೯. ಸಾ. ೨೧)

**ಅಲೋಕಾಕಾಶ** – ಲೋಕದ ಹೊರಗಿನ ಆಕಾಶ; ಸಿದ್ಧರು ಇರುವ ಸ್ಥಳ (ಅತ್ತಲ್ ಅಲೋಕಾಕಾಶಂ ಸುತ್ತಿರ್ದುದು ಅನಂತಂ: **ಸುಕುಮಾಚ,** ೧೧. ೫೯)

**ಅವಗಹನ** – ಮುಕ್ತಾತ್ಮದ ಎಂಟು ಗುಣಗಳಲ್ಲಿ ಒಂದು; ಮುಕ್ತಜೀವನದಲ್ಲಿ ಅನೇಕ ಸಿದ್ಧಜೀವಿಗಳು ಸೇರುವ ಅವಕಾಶ (ಅವಗಹನಮುಂ ಅವ್ಯಾಬಾಧಂಗಳೆಂಟುಂ ಗುಣಸ್ಥಾನಂಗಳ್ ಆತ್ಮಾಯತ್ತಮಾಗೆ: **ಶಾಂತಿಪು,** ೧೨. ೫೧ ವ)

**ಅವಗಾಢರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಅವಗಾಢರುಚಿಯೆಂಬುದು ಆಚಾರಾದಿ ದೃಷ್ಟಿವಾದಾಂತ ದ್ವಾದಶಾಂಗ ಸಾಮಾಯಿಕಾದ್ಯಂಗಬಾಹ್ಯ ವಿವಿಧ ಶ್ರುತಸಮುದ್ರಾವಗಹನ ಸಮುಪಜನಿತ ತತ್ವಶ್ರದ್ಧಾನಂ: **ಚಾವುಂಡಜಯ,** ಪು. ೩೩೭)

**ಅವಗ್ರಹ** – ಅವಗ್ರಹ, ಈಹಾ, ಅವಾಯ ಮತ್ತು ಧಾರಣ ಎಂಬ ನಾಲ್ಕು ಪ್ರತ್ಯಕ್ಷ ಪ್ರಮಾಣಗಳಲ್ಲಿ ಮೊದಲನೆಯದು (ಸಕಲ ವಿನೇಯ ಸಂಹತಿಯೊಳಲ್ಲದೆ ಅವಗ್ರಹವೆಂಬುದಿಲ್ಲ: **ಅಜಿತಪು,** ೧. ೨೨)

**ಅವತಾರ** – ಗರ್ಭಾನ್ವಿತಕ್ರಿಯೆಗಳಲ್ಲಿ ಒಂದು (ಮತ್ತಂ ಅವತಾರ ವೃತ್ತಿಲೋಭ ಗಣಗ್ರಹಣ ಪೂಜಾರಾಧ್ಯ ... ಎಂಬೆಂಟುಂಬೆರಸು: **ಆದಿಪು,** ೧೫. ೧೬ ವ)

**ಅವತಾರಕ್ರಿಯೆ:** ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಇಂದ್ರತ್ಯಾಗವುಳ್ಳವನು ಆಯುರಂತ್ಯದಲ್ಲಿ ಭೂಮಿಯಲ್ಲಿ ಅವತರಿಸುವುದು (ಅರ್ಹತ್ಪೂಜೆಯಂ ಮಾಡಿ ಸಿದ್ಧನಮಸ್ಕಾರಂಗೆಯ್ದು ಸ್ವರ್ಗಾವತರಣಕಲ್ಯಾಣಪೂರ್ವಕಂ ಷೋಡಶ ಶುಭ ಸ್ವಪ್ನಾನಂತರಂ ಕುಳಾಚಳಗಳೊಳಿಪ್ಪ ಶ್ರೀದೇವಿಪ್ರಭೃತೀದೇವಿ ಜನಸೇವಿತೆಯಪ್ಪೊಳ ಗರ್ಭಕ್ಕವತರಿಸುವುದು ಅವತಾರಕ್ರಿಯೆ: **ಚಾವುಂಡಜಯ,** ಪು. ೧೮೫)

**ಅವಧಿ** – ಕಾಲದೇಶಗಳ ಮಿತಿ ಮೀರಿ ಯಾವುದೇ ಜಾಗ ಕಾಲದಲ್ಲಿ ನಡೆಯುವದನ್ನು ತಿಳಿಯುವ ಶಕ್ತಿ, ಎಂಟು ಬಗೆಯ ಜ್ಞಾನಗಳಲ್ಲಿ ಒಂದು; ಇದರಲ್ಲಿ ಮೂರು ಬಗೆ: ದೇಶಾವಧಿ, ಪರಮಾವಧಿ, ಸರ್ವಾವಧಿ (ಮುನಿನಾಥಂ ಅವಧಿಯಿಂ ಬಗೆದು ನೋಡಿ ನಿಗಾಯುರವಧಿ ಮೂಱುದಿನಂ ...ಎಂದು ಸುಕುಮಾರ ಸ್ವಾಮಿಯ ಪರಿಚ್ಛೇದಕ್ಕೆ ... ಮೆಚ್ಚಿ ಬಿಚ್ಚಳಿಸಿ ದೀಕ್ಷಾಪ್ರಸಾದಂಗೆಯ್ವುದುಂ; **ಸುಕುಮಾಚ,** ೧೨. ೮ ಮತ್ತು ೮ ವ)

**ಅವಧಿಜ್ಞಾನ** – ಕಾಲದೇಶಗಳ ಮಿತಿ ಮೀರಿ ಯಾವುದೇ ಜಾಗ ಕಾಲದಲ್ಲಿ ನಡೆಯುವದನ್ನು ತಿಳಿಯುವ ಶಕ್ತಿ (ಅವಧಿಜ್ಞಾನದಿಂ ತಾನಾ ಕನಸುಗಳನಜೆವನಾಗಿಯುಂ: **ಆದಿಪು.** ೧೫. ೨೫ ವ); ಅವಧಿಜ್ಞಾನವನ್ನುಳ್ಳವನು (ಅವಧಿಜ್ಞಾನನುಂ ಸ್ವಾವಧಿಕ್ಷೇತ್ರಬಳಪ್ರಕಾಶ ಶರೀರ ವಿಕ್ರಿಯಾದಿ ಗುಣಾಲಂಕೃತನುಂ ಆಗಿ: **ನೇಮಿನಾಪು,** ೪. ೬೫ ವ)

**ಅವಧಿಜ್ಞಾನಾವರಣೀಯ** – ಅವಧಿಜ್ಞಾನವನ್ನು ಮುಚ್ಚುವ ಕರ್ಮ (ಅವಧಿಜ್ಞಾನಾ ವರಣೀಯಂ ... ಎಂದೀ ಪ್ರಕಾರದೆ ಪಂಚಪ್ರಕಾರ ಜ್ಞಾನಾವರಣೀಯಮಂ: **ಸುಕುಮಾಚ,** ೩. ೩೯ ವ)

**ಅವಧಿಜ್ಞಾನಿ** – ಅವಧಿಜ್ಞಾನವಿರುವವನು (ವಿಜಯಭದ್ರರೆಂಬ ಭಟಾರರ್ ಅವಧಿಜ್ಞಾನಿಗಳ್ ಚರಿಗೆವೊಕ್ಕೊಡೆ: **ವಡ್ಡಾರಾ,** ಪು ೪೩, ಸಾ ೨೦)

**ಅವಧಿದರ್ಶನಾವರಣೀಯ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು, ರೂಪವುಳ್ಳ ಪದಾರ್ಥದ ಒಟ್ಟು ಕಾಣುವಂತೆ ಮಾಡುವ ಅವಧಿದರ್ಶನವನ್ನು ಮರೆಮಾಚುವುದು (ಚಕ್ಷುದರ್ಶನಾವರಣೀಯಂ ಅಚಕ್ಷು ದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಮೆಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ಅವಧಿಬೋಧ** – ಅವಧಿಜ್ಞಾನ (ಆ ದೇವರ ದೇವಂ ... ಉದಯಿಸಲಿರ್ದುದಂ ಸೌಧರ್ಮೇಂದ್ರಂ ಅವಧಿಬೋಧದಿಂದಱಿದು ... ವೈಶ್ರವಣಂ ರತ್ನವೃಷ್ಟಿಯಂ ಕಱೆಯುತ್ತಿರೆಂದು ನೇಮಿಸಿದಾಗಳ್: **ಶಾಂತೀಶ್ವಪು,** ೧೩. ೨೦೪ ವ)

**ಅವಧಿವಿಬೋಧ** – ಅವಧಿಜ್ಞಾನ (ಅವಧಿಬೋಧದಿಂ ಲಕ್ಷ್ಮಣಂ ಮರಣಪ್ರಾಪ್ತನಪ್ಪುದುಂ ರಾಮಂ ಶೋಕಾಧಿಭೂತನಾಗಿರೆ ಪಗೆವಡೆಯಿಱಿಯಲೆಂದು ಬಂದು ಅಯೋಧ್ಯೆಯಂ ಬಳಸಿ ಬಿಟ್ಟಿರ್ದುದಂ ಅಱಿದು: **ಪಂಪರಾ,** ೧೬. ೫೩ ವ)

**ಅವಮೋದರ್ಯ** – ಒಂದು ಬಗೆಯ ತಪಸ್ಸು; ಆಹಾರದಲ್ಲಿ ಒಂದೊಂದು ತುತ್ತು ಕಡಿಮೆ ಮಾಡುತ್ತ ಬಂದು ಕಡೆಗೆ ಒಂದು ತುತ್ತನ್ನಷ್ಟೇ ಉಳಿಸಿಕೊಳ್ಳುವ ಕ್ರಮ (ಮನುಷ್ಯನ ಸಹಜ ಆಹಾರ ಮೂವತ್ತೆರಡು ತುತ್ತುಗಳು) (ಗೃಹೀತೋಪಾಸಕ ವ್ರತಂ ಅನಶಂ ಅವಮೋದರ್ಯ ಆದಿ ಆಚರಣಪರಿಣತಂ ಯಥೋಚಿತ ವಿಧಿಯಿಂದ ಆಯುರವಸಾನದೊಳೆ ... ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತಂ: **ಆದಿಪು,** ೨. ೧೯ ವ)

**ಅವಲಂಬಬ್ರಹ್ಮಚಾರಿ** – ಉಪನಯನ, ಅವಲಂಬ, ಅದೀಕ್ಷಿತ, ಗೂಢ ಮತ್ತು ನೈಷ್ಠಿಕ ಎಂಬ ಬ್ರಹ್ಮಚಾರಿಯ ಐದು ಪ್ರಭೇದಗಳಲ್ಲಿ ಒಂದು, ಸಾಮಾನ್ಯನಂತೆ ಆಗಮಾಭ್ಯಾಸದಲ್ಲಿ ತೊಡಗುವವನು (ಅವಲಂಬಬ್ರಹ್ಮಚಾರಿಯೆಂಬೊಂ ಕ್ಷುಲ್ಲಕನ ರೂಪದಿಂದಾಗಮಾಭ್ಯಾಸಗೆಯ್ದು ಗೃಹಾವಾಸದೊಳ್ನಿಲ್ವಂ: **ಚಾವುಂಡಜಯ,** ಪು ೧೯೩)

**ಅವಲೋಕಿನೀವಿದ್ಯೆ** – ದೂರದಲ್ಲಾಗುವುದನ್ನು ತಿಳಿಯಲು ಸಹಾಯಕವಾದ ವಿದ್ಯೆ (ಅಂತು ನೆನೆಯಲೊಡಂ ಅವಲೋಕಿನೀವಿದ್ಯೆ ಮನದೊಡನೆ ಬಂದು: **ಪಂಪರಾ,** ೯. ೪೯ ವ)

**ಅವಸರ್ಪಣ** – ಮನುಷ್ಯರ ಆಯುಸ್ಸು, ಸುಖ ಮುಂತಾದುವು ಕ್ರಮವಾಗಿ ಇಳಿಕೆಗೊಳ್ಳುವ ಕಾಲ (ತನು ಭೋಗಾಯುಷ್ಯಂಗಳ್ ಮನುಷ್ಯರೊಳ್ ಕುಂದುವಡೆಗುಂ ಅವಸರ್ಪಣದೊಳ್: **ಪಂಪರಾ,** ೧. ೫೮)

**ಅವಸರ್ಪಿಣಿ** – ಧರ್ಮ, ಸತ್ಯ, ಆಯುಸ್ಸು, ಮೊದಲಾದುವು ಕ್ರಮೇಣ ಕಡಿಮಾಯಾಗುವ ಕಾಲ (ಶರೀರ ಬಳ ಆಯುಃ ದೇಹಪ್ರಮಾಣೋಪಚಯ ಅಪಚಯ

ಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ): ಇದರಲ್ಲಿನ ಆರು ಕಾಲಭೇದಗಳು: (ಅವಸರ್ಪಿಣಿ ಕಾಲಂ ಸುಷಮೆ, ಸುಷಮಸುಷಮೆ, ಸುಷಮದುಷಮೆ, ದುಷಮಸುಷಮೆ, ದುಷಮೆ, ಅತಿದುಷಮೆಯೆಂದು ಷಡ್ವಿಧಮಕ್ಕುಂ: **ಚಾವುಂಪು,** ೧೬೪, ಸಾ. ೪–೫)

**ಅವಿಪಾಕ[ನಿರ್ಜರೆ]** – ನಿರ್ಜರೆಯ ಎರಡು ರೂಪಗಳಲ್ಲಿ (ಅವಿಪಾಕ ಮತ್ತು ಸವಿಪಾಕ) ಒಂದು: ಕರ್ಮವು ಉದಯವಾಗಿ ಫಲ ಕೊಡುತ್ತಿದ್ದರೂ ರಾಗದ್ವೇಷರಹಿತವಾದ ಆತ್ಮನಿಗೆ ಹೊಸಕರ್ಮಗಳ ಬಂಧವಾಗುವುದಿಲ್ಲ, ಮತ್ತು ಪೂರ್ವಬದ್ಧ ಕರ್ಮಗಳು ಉದುರಿಹೋಗುತ್ತವೆ (ಯಥಾಕಾಲಾನುಭವನ ಸವಿಪಾಕ ಅವಿಪಾಕರೂಪದಿಂ ಪೂರ್ವಾರ್ಜಿತನಿರ್ಜರಣಂ ನಿರ್ಜರೆಯೆಂಬುದು: **ಆದಿಪು,** ೧೦. ೬೩ ವ)

**ಅವಿಮಧೂತ** – ದರ್ಶನ ಮೋಹನೀಯಗಳಲ್ಲಿ ಒಂದು (ಅವಿಮಧೂತಂ ಸಮ್ಯಗ್ವಿಧೂತಂ ಸಮ್ಯಕ್ತ್ವಪ್ರಕೃತಿಯುಮೆಂದು ದರ್ಶನಮೋಹನೀಯಂ ಮೂಱು ತೆಱಂ: **ಶಾಂತಿಪು,** ೧೨. ೧೧ ವ)

**ಅವ್ಯಾಬಾಧ** – ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು, ಯಾವುದರಿಂದಲೂ ಕುಂದದ ಅಥವಾ ಹೆಚ್ಚದ ಅನಂತಸುಖತ್ವ (ಸಮ್ಯಕ್ ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ನೆನೆಯುತ್ತುಂ: **ಆದಿಪು,** ೧೦. ೧೪ ವ)

**ಅಶಲ್ಯಭಾವೆ** – ರಾಗದ್ವೇಷರಹಿತಳಾದವಳು (ಪರಮ ಜಿನೇಂದ್ರನಂ ಬಗೆವ ಭಾವಂ ಅಚಾಲ್ಯಂ ಅಶಲ್ಯಭಾವೆಯಾ: **ಸುಕುಮಾಚ,** ೯. ೧೬)

**ಅಶ್ವಗ್ರೀವ** – ಒಬ್ಬ ವಿದ್ಯಾಧರ (ಅಶ್ವಗ್ರೀವ ನಭಶ್ಚರನಲ್ತೆ ಪುರಾತನವೈರದಿನಟಿದನಾ ತ್ರಿಪೃಷ್ಠನ ಕೈಯೊಳ್: **ಶಾಂತಿಪು,** ೭. ೬೪)

**ಅಶ್ವರತ್ನ** – ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲೊಂದು, ವಿಜಯಾರ್ಧಪರ್ವತದಲ್ಲಿ ಹುಟ್ಟಿದ್ದು (ವಿಜಯಾರ್ಧ ಪರ್ವತದೊಳ್ ಪುಟ್ಟಿದ ಗಜಾಶ್ವಸ್ತ್ರೀರತ್ನಂಗಳುಂ: **ಆದಿಪು,** ೧೫. ೩ ವ)

**ಅಷ್ಟಋದ್ಧಿ** – ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧ, ರಸ, ಅಕ್ಷೀಣ ಎಂಬ ಎಂಟು ಬಗೆಯ ಋದ್ಧಿಗಳು (ಏಂ ಸಮನಿಸಿದುದೊ ಸನ್ನುತಮತಿಗೆ ಅಷ್ಟಋದ್ಧಿಗಳ್ ಕ್ರಮದಿಂದಂ: **ಚಂದ್ರಪು,** ೧೪. ೩೦)

**ಅಷ್ಟಕರ್ಮ** – ಆತ್ಮನ ಸಹಜಗುಣಗಳನ್ನು ಮರೆಮಾಚುವ ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃ, ನಾಮ, ಗೋತ್ರ, ವೇದನೀಯ ಎಂಬ ಎಂಟು ಕರ್ಮಗಳು (ಅಷ್ಟಕರ್ಮಾಗ್ನಿ ಪರಿಪ್ಲುಷ್ಟಂ ... ನಿಕೃಷ್ಟಮೀ ಸಂಸಾರಂ: **ಅಜಿತಪು,** ೨. ೭೪)

**ಅಷ್ಟಗುಣ** – ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ ಮತ್ತು ವಶಿತ್ವವೆಂಬ ಅಷ್ಟಸಿದ್ಧಿಗಳು (ಅಣಿಮಾದ್ಯಷ್ಟಗುಣಮಣಿನಿಧಾನನುಂ:

**ಚಂದ್ರಪ್ರಭ**, ೧೧. ೩೩ ವ); ಸಿದ್ಧಪರಮೇಷ್ಠಿಗಳು ಗಳಿಸಿಕೊಳ್ಳುವ ಎಂಟು ಗುಣಗಳು (ಸಮ್ಯಕ್ ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ನೆನೆಯುತ್ತುಂ: **ಆದಿಪು**, ೧೦. ೧೪ ವ)

**ಅಷ್ಟಮತೀರ್ಥನಾಥ** – ಎಂಟನೆಯ ತೀರ್ಥಂಕರ, ಚಂದ್ರಪ್ರಭ (ಪ್ರಿಯದಿಂದ ಅಷ್ಟಮತೀರ್ಥನಾಥಂ ಇರದೆನ್ನಲ್ಲಿಗೇ ಮಾತೊ ನಿರ್ವಾಯ ಸೌಖ್ಯೋನ್ಮುಖ ನೆಂದು ತನ್ನಗರಿ ತಾಂ ಮೆಯ್ವೆರ್ಚೆ: **ಚಂದ್ರಪ್ರಭ**, ೧೧. ೭೪)

**ಅಷ್ಟಮಂಗಲ(ಳ)** – ಕಳಶ, ಕನ್ನಡಿ, ಕೇತನ, ಭೃಂಗಾರ, ಛತ್ರ, ಚಾಮರ, ಬೀಸಣಿಗೆ, ಸುಪ್ರತಿಷ್ಠಗಳು ಎಂಬ ಎಂಟು ಬಗೆಯ ಶುಭವಸ್ತುಗಳು (ಅಲ್ಲಿಂದತ್ತಮಷ್ಟ ಮಂಗಲನವನಿಧಿ ಸಮೇತಂಗಳುಂ: **ಆದಿಪು**, ೧೦. ೩೩ ವ/ ೩೪ ವ)

**ಅಷ್ಟಮದ** – ಕುಲಮದ, ರೂಪಮದ, ವಯಸ್ಸಿನ ಮದ, ತೋಳಿನ ಮದ, ತಪೋಮದ, ಕಲಾಮದ, ದೇವತಾಬಲಮದ ಹಾಗೂ ರಾಜ್ಯಮದಗಳು (ಶಂಕಾದ್ಯಷ್ಟಮಲಂಗಳುಂ ಎಂಟು ಮದಂಗಳುಂ ಮೂಱು ಮೂಢಮುಂ: **ವಡ್ಡಾರಾ**, ಪು ೬, ಸಾ ೨೧)

**ಅಷ್ಟಮಭೂಮಿ** – ಸಿದ್ದರು ವಾಸಮಾಡುವ ಲೋಕಭಾಗ (ಅಷ್ಟಮಭೂಮಿ ಸಮೀಪವಾಾಯ್ತು ಜೈನಾಗಮಭಾಗಿ ಭವ್ಯಜನಕೇನುಪಶಾಂತಿಯೋ ಶಾಂತಿನಾಥನಾ: **ಶಾಂತಿಪು**, ೧೨. ೨೪)

**ಅಷ್ಟಮಲ** – ಶಂಕೆ, ಘೃಣೆ, ಭಯ, ಲಜ್ಜೆ, ಜುಗುಪ್ಸೆ, ಕುಲ, ಶೀಲ, ಜಾತಿ ಇವುಗಳ ಭಾವನೆಯಿಂದ ಬರುವ ದೋಷಗಳು (ಶಂಕಾದ್ಯಷ್ಟಮಲಂಗಳುಂ ಎಂಟು ಮದಂಗಳುಂ ಮೂಱು ಮೂಢಮುಂ: **ವಡ್ಡಾರಾ**, ಪು ೬, ಸಾ ೨೧)

**ಅಷ್ಟಮಹಾಪ್ರಾತಿಹಾರ್ಯ** – ಜಿನನ ಎಂಟು ಮಂಗಳ ಲಾಂಛನಗಳು: ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಷ್ಷಷ್ಟಿಚಾಮರ, ರತ್ನಖಚಿತ ಸುವರ್ಣ ಸಿಂಹಾಸನ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ (ಅನಂತಚತುಷ್ಟಯ ಸಂಪುಷ್ಟನುಂ ಅಷ್ಟಮಹಾಪ್ರಾತಿಹಾರ್ಯ ಪರ್ಯಾಯಪ್ರಯುಕ್ತನುಂ: **ಕರ್ಣನೇಮಿ**, ೧೩. ೮೯ ವ)

**ಅಷ್ಟಮಾವನಿ** – ಅಷ್ಟಮಭೂಮಿ (ಸಿದ್ಧರ್ ಖರಕರ್ಮಾಷ್ಟಕಮಟೆಯೆ ಜಗತ್ಪರ್ಯಷ್ಟಿಗೆ ನೆಲೆಯಾದರ್ ಅಷ್ಟಮಾವನಿನಿಳಯರ್: **ಶಾಂತಿಪು**, ೨೪. ೯)

**ಅಷ್ಟವಿಧಕರ್ಮ** – ನಾಲ್ಕು ಘಾತಿ ಕರ್ಮಗಳು ಮತ್ತು ನಾಲ್ಕು ಅಘಾತಿ ಕರ್ಮಗಳು (ಕನಿಷ್ಠದಿಂದ ಏಱು ಭವಂಗಳೊಳಗೆ ಅಷ್ಟವಿಧ ಕರ್ಮಂಗಳಂ ಕಿಡಿಸಿ ಮೋಕ್ಷಮನೆಯ್ದುವರ್: **ವಡ್ಡಾರಾ**, ಪು ೯೮, ಸಾ ೨೭)

**ಅಷ್ಟವಿಧಶುದ್ಧಿ** – ಕಾರ್ಯ, ಭಾವ. ಈರ್ಯಾಪಥ, ಭಿಕ್ಷಾ, ಪ್ರತಿಷ್ಠಾಪನಾ, ಶಯನ, ಆಸನ, ವಾಕ್ಯ – ಇವುಗಳಿಗೆ ಸಂಬಂಧಿಸಿದ ಶುದ್ಧಿ (ಕಾರ್ಯಶುದ್ಧಿ ವಿನೇಯಶುದ್ಧಿ ಆದಿ ಅಷ್ಟವಿಧಶುದ್ಧಿಯುಂ ... ತನ್ನೊಳುಂ ಸಚ್ಛನ್ನಮಾಗಿ: **ಪುಷ್ಪದಂಪು**, ೧೪. ೧೬ ವ)

**ಅಷ್ಟವಿಧಾರ್ಚನೆ** – ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಕೂಡಿದ ಎಂಟು ಬಗೆಯ ಅರ್ಚನೆ (ತ್ರಿಲೋಕ ಶಿಖರಶೇಖರಂಗೆ ಅಷ್ಟಾಂಗಮೆಱಗಿ ಪೊಡಮಟ್ಟು ಅಷ್ಟವಿಧಾರ್ಚನೆಗಳಿನರ್ಚಿಸಿ: **ಶಾಂತಿಪು,** ೮. ೧೧೪ ವ)

**ಅಷ್ಟಶೋಭೆ** – ವಿಶೇಷ ಸಂದರ್ಭಗಳಲ್ಲಿ ನಗರಕ್ಕೆ ಮಾಡುವ ಮಂಗಳಕರವಾದ ಎಂಟು ಬಗೆಯ ಅಲಂಕಾರಗಳು: ಸುಣ್ಣಬಣ್ಣ ಹಚ್ಚುವುದು, ಸುಗಂಧದ್ರವ್ಯ ಗಳಿಂದ ಸಾರಣೆ, ರಂಗವಲ್ಲಿ, ತಳಿರುತೋರಣ, ಧ್ವಜವನ್ನು ಏರಿಸುವುದು, ಪುಷ್ಪಗುಚ್ಛಗಳಿಂದ ಅಲಂಕರಿಸುವುದು, ಚಪ್ಪರ ಹಾಕುವುದು, ಮೇಲುಕಟ್ಟು (ಗುಣಪಾಲಸೆಟ್ಟಿಯಂ ಬರಿಸಿ ಪುರದೊಳಷ್ಟಶೋಭೆಯಂ ಮಾಡಿಸಿ: **ಧರ್ಮಾಮೃತ,** ೧೦. ೧೫೬ ವ)

**ಅಷ್ಟಾಂಗಕಯುಕ್ತ** – ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ ಇವುಗಳನ್ನು ಹೊಂದಿದವನು (ಅಷ್ಟಾಂಗಕಯುಕ್ತನಾತನೆ ವಲಂ ಸಮ್ಯಕ್ತ್ವರತ್ನಾಕರಂ: **ಸಮಯಪ,** ೪. ೧೩)

**ಅಷ್ಟಾಂಗಮಹಾನಿಮಿತ್ತ** – ಎಂಟು ಅಂಗಗಳಿಂದ ಕೂಡಿದ ಜ್ಞಾನ (ಅಂತರಿಕ್ಷ ಭೌಮ ಅಂಗ ಸ್ವರ ವ್ಯಂಜನ ಲಕ್ಷಣ ಛಿನ್ನ ಸ್ವಪ್ನಮೆಂಬಷ್ಟಾಂಗಮಹಾನಿಮಿತ್ತಂ: **ಚಾವುಂಡಜಯ,** ಪು. ೧೫೪)

**ಅಷ್ಟಾದಶದೋಷ** – ಜೀವಿಗೆ ಅಂಟುವ (ತೀರ್ಥಂಕರರಲ್ಲಿ ಇಲ್ಲದ) ಹದಿನೆಂಟು ದೋಷಗಳು: ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ (ಮೊದಲಾತಂ ಅಷ್ಟಾದಶದೋಷರಹಿತನಪ್ಪೊಂ: **ಚಾವುಂಪು,** ಪು. ೧೬೧, ಸಾ. ೩)

**ಅಷ್ಟಾದಶಶೀಲ** – ಮುನಿಯ ಹದಿನೆಂಟು ಶೀಲಗಳು (ಅಷ್ಟಾದಶಶೀಲ ಸಹಸ್ರ ಚತುರಶೀತಿ ಲಕ್ಷಣಗುಣ ಮಣಿಭೂಷಣಭೂಷಿತನುಂ: **ಕರ್ಣನೇಮಿ,** ೨. ೬೧)

**ಅಷ್ಟಾರ್ಘ್ಯ** – ಜಲ, ಅಕ್ಷತೆ, ಗಂಧ, ಪುಷ್ಪ, ಧೂಪ, ದೀಪ, ಚರು, ಫಲ ಇವುಗಳ ಅರ್ಪಣೆ (ದೊರೆವೆತ್ತಷ್ಟಾರ್ಘ್ಯಮುಮಂ ಮಾಡಿದುದು ... ಜಿನನ ತಾಯ್ಗಿಂದ್ರಕಾಂತಾಕದಂಬಂ: **ಪುಷ್ಪದಂಪು,** ೯. ೬೧)

**ಅಷ್ಟಾರ್ಚನೆ** – ಅಷ್ಟವಿಧಾರ್ಚನೆ: ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಕೂಡಿದ ಎಂಟು ಬಗೆಯ ಅರ್ಚನೆ (ಆ ನೃಪನಾಗಳ್ ... ಪುಣ್ಯೋದಂ ಉತ್ತಮಗಂಧಂ ವಿಮಲಾಕ್ಷತಂ ಸುರಭಿಪುಷ್ಪಂ ದಿವ್ಯಧೂಪಂ ಸುದೀಪಂ ಉದಂಚಚ್ಚರು ಸತ್ಫಲಾವಳಿ ಎನಿಪ್ಪ ಅಷ್ಟಾರ್ಚ ನಾನೀಕದಿಂದಮೆ ತಾನರ್ಚಿಸಿ: **ಶಾಂತೀಶ್ವಪು,** ೬. ೪೯)

**ಅಷ್ಟಾವಿಂಶತಮೂಲಗುಣ** – ಮುನಿಗಳಿಗೆ ಬೇಕಾದ ಆವಶ್ಯಕ ಗುಣಗಳು: ಪಂಚ ಮಹಾವ್ರತ, ಪಂಚ ಸಮಿತಿ, ಪಂಚೇಂದ್ರಿಯನಿಗ್ರಹ, ದಿಗಂಬರತ್ವ, ಕೇಶಲುಂಚನ

ಪ್ರತಿಜ್ಞೆ, ಷಡಾವಶ್ಯಕಗಳಲ್ಲಿ ನಿರ್ಬಾಧಕತ್ವ, ಅಚೇಲಕತ್ವ, ಸ್ನಾನರಾಹಿತ್ಯ, ದಂತಧಾವನರಾಹಿತ್ಯ, ನಿಂತು ಮಾಡುವ ಊಟ, ಒಂದೇ ಹೊತ್ತಿನ ಊಟ (ಅಷ್ಟಾವಿಂಶತ ಮೂಲಗುಣಮಂ ಪದಿಮೂಱು ತೆಱದ ಚಾರಿತ್ರಮಂ ದರ್ಶನಮುಂ ಬೆರಸು ಮೋಕ್ಷಮಂ ಸಾಧಿಸುವುದು:**ಧರ್ಮಾಮೃತ,** ೫. ೫೧ ವ)

**ಅಷ್ಟಾವಿಂಶತಿಮೋಹನೀಯಕಳಂಕ** – ಇಪ್ಪತ್ತೆಂಟು ಮೋಹನೀಯ ಕರ್ಮಗಳು: ಸಾತವೇದನೀಯ ಅಸಾತವೇದನೀಯ ಮೋಹನೀಯವೆಂಬ ವೇದನೀಯ ಕರ್ಮಪ್ರಕೃತಿಗಳು; ಸಮ್ಯಕ್ತ್ವ ಪ್ರಕೃತಿ ಮಿಥ್ಯಾತ್ವ ಸಮ್ಯಜ್ಮಿಥ್ಯಾತ್ವ ಎಂಬ ದರ್ಶನ ಮೋಹನೀಯಗಳು: ಹಾಸ್ಯ ರತಿ ಅರತಿ ಶೋಕ ಭಯ ಜುಗುಪ್ಸೆ ಸ್ತ್ರೀವೇದ ಪುಂವೇದ ನಪುಂಸಕವೇದಗಳೆಂಬ ಅಕಷಾಯವೇದನೀಯಗಳು; ಅನಂತಾನುಬಂಧಿ ಕ್ರೋಧ ಮಾನ ಮಾಯಾ ಲೋಭಗಳು, ಹಾಗೂ ಅಪ್ರತ್ಯಾಖ್ಯಾನಕ್ರೋಧ, ಮಾನ ಮಾಯಾ ಲೋಭಗಳು, ಸಂಜ್ವಲನ ಕ್ರೋಧ ಮಾನ ಮಾಯಾ ಲೋಭಗಳೆಂಬ ಎಂಬ ಕಷಾಯವೇದನೀಯಗಳು (ಸೂಕ್ಷ್ಮಸಾಂಪರಾಯಲೋಭಕ್ಕೆ ನಿರ್ಮೂಲವಿಲಯಮಂ ಮಾಡಿ ನಿರಸ್ತಾಷ್ಟಾವಿಂಶತಿ ಮೋಹನೀಯಕಳಂಕನಾಗಿ: **ಆದಿಪು,** ೧೦. ೧೪ ವ)

**ಅಷ್ಟಾಹ್ನಿಕ** – ಶ್ರಾವಕರು ಎಂಟು ದಿನಗಳು, ಪ್ರತಿದಿನ ಎಂಟು ಜಾವಗಳು ಆಚರಿಸುವ ಜಿನಪೂಜೆ (ಅರಸಂ ಅಷ್ಟಾಹ್ನಿಕಮಂ ಎತ್ತಿಕೊಂಡು ಇತ್ತ ಮಹೇಂದ್ರನುಂ ಮಾಡಲಾಱದ ಮಹಾಮಹಿಮೆಯಂ ಮಾಡುತ್ತುಮಿರ್ದಂ: **ನೇಮಿನಾಪು,** ೨. ೫ ವ)

**ಅಸಂಜ್ಞಿ** – ಪಂಚೇಂದ್ರಿಯ ಜೀವಿಗಳಲ್ಲಿ ಒಂದು ಬಗೆ; ಆಹಾರ ಮೈಥುನ ಭಯ ಪರಿಗ್ರಹ ಎಂಬ ನಾಲ್ಕು ಸಂಜ್ಞೆಗಳಿಲ್ಲದ ಜೀವಿ (ಕ್ರಮದೊಳ್ ಅಸಂಜ್ಞಿಯುಂ ಸರಿಸೃಪಾಳಿಯುಂ ವಿಹಗಾಳಿಯುಂ ಭುಜಂಗಮತತಿಯುಂ ಮೃಗಾರಿಗಣಮುಂ ಲಲನಾಜನಮುಂ: **ಆದಿಪು,** ೫. ೯೩)

**ಅಸಂಯುತ** – ಇಂದ್ರಿಯನಿಗ್ರಹಿಯಲ್ಲದವನು (ದರ್ಶನವಿಶುದ್ಧನಾಗಿಯುಂ ಶೀಲವ್ರತಭಾವನಾರಹಿತಂ ಅಸಂಯುತಂ ಜಘನ್ಯಪಾತ್ರಂ:**ಆದಿಪು,** ೧೦.೯ ವ)

**ಅಸಾತಾವೇದನೀಯ** – ದುಃಖವನ್ನುಂಟುಮಾಡುವ ಕರ್ಮ (ವೇದನೀಯಮುಂ ಸಾತಾವೇದನೀಯಮುಂ ಅಸಾತಾವೇದನೀಯಮುಂ ಎಂದಿರ್ತೆಱನಕ್ಕುಂ: **ಶಾಂತಿಪು,** ೧೨. ೧೧ ವ)

**ಅಸಿಕರ್ಮ** – ಖಡ್ಗಕಾರ್ಯ, ಯೋಧವೃತ್ತಿ (ಸೇವಾಧರ್ಮೋಚಿತಮೆನಿಸುವ ಅಸಿಕರ್ಮಮುಮಂ ಅನೇಕ ಲಿಪಿವಿಧಾನಂಗಳಪ್ಪ ಮಷಿಯುಮಂ ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ ಶಾಸ್ತ್ರಾನುಗತಮಪ್ಪ ವಿದ್ಯೆಯುಮಂ ವಣಿಗ್ವ್ಯವಹಾರಾನುಕಾರಿಯಪ್ಪ ವಾಣಿಜ್ಯಮುಮಂ: **ಆದಿಪು,** ೮. ೬೪ ವ)

**ಅಸ್ತಿಕಾಯ** – ಬಹುಪ್ರದೇಶವುಳ್ಳ ವಸ್ತು; ಇವುಗಳಲ್ಲಿ ಐದು ಬಗೆ (ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಆಕಾಶಾತಿಕಾಯವೆಂಬ ಪಂಚಾಸ್ತಿಕಾಯ ನಿಕಾಯಮುಂ: **ಸುಕುಮಾಚ,** ೩. ೩೯ ವ)

**ಅಸ್ತೇಯ** – ಕದಿಯದಿರುವುದು, ಪಂಚಾಣುವ್ರತಗಳಲ್ಲಿ ಒಂದು (ಅಸ್ತೇಯವ್ರತಕ್ಕತಿ ಕ್ರಮಮಕ್ಕುಂ: **ಸುಕುಮಾಚ,** ೬. ೧೫)

**ಅಹಮಿಂದ್ರ** – ಹದಿನಾರು ಸ್ವರ್ಗಗಳೂ ಅಣೂತ್ತರಗಳೂ ಆದ ಮೇಲೆ ಬರುವ ಗ್ರೈವೇಯಕದಲ್ಲಿ ಹುಟ್ಟಿದ ಜೀವ; ಅಸೂಯೆ ಪರನಿಂದೆ ಆತ್ಮಶ್ಲಾಘನೆ ಮತ್ಸರ – ಇವುಗಳಿಲ್ಲದೆ ಸಂತೋಷಪಡುವವರು (ನಿನಗಹಮಿಂದ್ರರುಂ ಇಂದ್ರರುಂ ಅನಿಬರುಂ ಈ ಲೋಕಪಾಲರುಂ . .. ಎಱಗುವರ್: **ಅಜಿತಪು,** ೮. ೨೧)

**ಅಹಮಿಂದ್ರತ್ವ** – ಅಹಮಿಂದ್ರತನ (ಅಹಮಿಂದ್ರತ್ವಮಂ ಕುಡೆಂದು ಜಿನೇಂದ್ರಂಗೆ ಪಾಟಿಂಬಿಡುವಂತೆ ಮೂಱು ತಿಂಗಳ್ ಸನ್ಯಸನಮಿರ್ದು ಒಡಲನೀಡಾಡಿ: **ನೇಮಿನಾಪು,** ೪. ೬೫ ವ)

**ಅಹಿಂಸಾವ್ರತ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು, ಆರಂಭರಹಿತವಾದ ಧರ್ಮ (ಅಹಿಂಸಾವ್ರತಮೆಂಬುದಾರಂಭರಹಿತಮಪ್ಪ ಧರ್ಮಂ: **ಚಾವುಂಡಜಯ,** ಪು. ೮)

**ಅಹಿಂಸೆ** – ಕೊಲ್ಲದಿರುವುದು; ಸೂಕ್ಷ್ಮವಾದ ಸಸ್ಯ ಮುಂತಾದ ಏಕೇಂದ್ರಿಯ ಜೀವ, ಶ್ರಾವಕನು ಅದನ್ನು ಕೊಲ್ಲಬಹುದು; ಆದರೆ ಕ್ರಿಮಿ ಮುಂತಾದ ದ್ವೀಂದ್ರಿಯ ಮುಂತಾದ ಜೀವಿಗಳೂ ಸ್ಥೂಲ, ಆದರೆ ಅವುಗಳನ್ನು ಕೊಲ್ಲದಿರುವುದೇ ಅಹಿಂಸಾವ್ರತ (ಕೊಲ್ಲದ ಪರನಾರಿಗಾಟಿಸದ ಕಳ್ಳದ ಸತ್ಯದೊಳೊಂದದಾಗಳುಂ ಕುದಿದಪತೃಷ್ಣೆಯಂ ಕುಸಿದು ಮಾನಿಸುವಯ್ದುಮಣುವ್ರತಂಗಳಂ: **ಆದಿಪು,** ೬. ೭)

**ಅಹೀಂದ್ರ** – ನಾಗರಾಜ (ನತದಿವಿಜೇಂದ್ರ ಅಹೀಂದ್ರ ವಾಸುಪೂಜ್ಯ ಜಿನೇಂದ್ರಾ: **ಸುಕುಮಾಚ,** ೪. ೪೯)

**ಅಱುವರುಂ ದೇವಿಯರ್** – ಪದ್ಮಾದಿ ಸರೋವರವಾಸಿನಿಯರಾದ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಯರು (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬಱುವರುಂ ದೇವಿಯರುಮಂ: **ಅಜಿತಪು,** ೩, ೫ ವ); (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

# ಆ

**ಆಕಾಶಗಾಮಿ** – [ಜೈನ] ಅಂತರಿಕ್ಷದಲ್ಲಿ ಸಂಚರಿಸುವವನು (ಆತಂ ಆಕಾಶಗಾಮಿ ನೀಮೆಂತು ಕೊಲ್ವಿರೆನೆ: **ವಡ್ಡಾರಾ,** ಪು. ೫೯. ಸಾ. ೨೩)

**ಆಕಾಶಗಾಮಿತ್ವ** – ಅಷ್ಟವಿಧಸಿದ್ಧಿಗಳಲ್ಲಿ ಒಂದಾದ ಕ್ರಿಯಾಋದ್ಧಿಗಳಲ್ಲಿ ಎರಡು ವಿಧ: ಚಾರಣತ್ವ ಮತ್ತು ಆಕಾಶಗಾಮಿತ್ವ. ಜಲಚಾರಣತ್ವ ಜಂಘಾಚಾರಣತ್ವ ತಂತುಚಾರಣತ್ವ ಪುಷ್ಪಚಾರಣತ್ವ ಫಲಚಾರಣತ್ವ ಎಂಬಿವೇ ಮೊದಲಾದವು ಚಾರಣಋದ್ಧಿಯಾದರೆ, ನಡಿಗೆಯಿಲ್ಲದೆಯೇ ಆಕಾಶದಲ್ಲಿ ತೇಲಿಹೋಗುವುದು ಆಕಾಶಗಾಮಿತ್ವ (ಪರ್ಯಂಕಾಸನಾದಿ ಯೋಗಾಸ್ತಿಕ ಸ್ವರೂಪ ಚಾರಣತ್ವಮುಂ ... ಆಕಾಶಗಾಮಿತ್ವಮೆಂದಿರ್ತೆಱನಪ್ಪ ಕ್ರಿಯಾಋದ್ಧಿಯೊಳಂ, **ಚಂದ್ರಪ್ರಪು,** ೧೪. ೩೦ ವ)

**ಆಕಾಶದ್ರವ್ಯ** – ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಷಡ್ದ್ರವ್ಯಗಳಲ್ಲಿ ಒಂದು, ಜೀವ ಪುದ್ಗಲ ಧರ್ಮ ಅಧರ್ಮ ಕಾಲ ಮತ್ತು ಆಕಾಶವೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು, (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣ ಪರ್ಯಾಯಮುಂ: **ಸುಕುಮಾಚ,** ೩. ೩೯ ವ)

**ಆಕಾಶಾಸ್ತಿಕಾಯ** – ಪಂಚಾಸ್ತಿಕಾಯಗಳಲ್ಲಿ ಒಂದು (ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಆಕಾಶಾಸ್ತಿಕಾಯವೆಂಬ ಪಂಚಾಸ್ತಿಕಾಯ ನಿಕಾಯಮುಂ: ಸುಕುಮಾಚ, ೩. ೩೯ ವ), ನೋಡಿ, 'ಅಸ್ತಿಕಾಯ'

**ಆಕಿಂಚನ್ಯ** – ಯತಿಯ ದಶಧರ್ಮಗಲ್ಲಿ ಒಂದು, ತನ್ನದಾಗಿ ಏನನ್ನೂ ಹೊಂದದಿರುವುದು (ಎಂಬಿನಮುತ್ತಮಕ್ಷಮಾಮಾರ್ದವಾರ್ಜವಸತ್ಯಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ಆಕ್ಷೇಪಣಿ** – ಆಕ್ಷೇಪಣಿ, ವಿಪೇಕ್ಷಣಿ, ಸಂವೇದನಿ, ನಿರ್ವೇದನಿ ಎಂಬ ನಾಲ್ಕು ಬಗೆಯ ತತ್ವನಿರೂಪಣೆಯ ಕತೆಗಳು: ಆಕ್ಷೇಪಣಿಯೆಂದರೆ ಜೀವಾದಿ ಪದಾರ್ಥಗಳ ಒಂಬತ್ತು ಭಾಗಗಳನ್ನು ಯಥಾರ್ಥವಾಗಿ ನಿರೂಪಿಸುವುದು (ಕಥೆಯೆಂಬುದಾಕ್ಷಪಣೀಯುಂ ವಿಕ್ಷೇಪಣಿಯುಂ ಸಂವೇದನಿಯುಂ ನಿರ್ವೇದನಿಯುಮೆಂದು ಚತುರ್ವಿಧಮಕ್ಕುಮವಱೊಳ್ ಆವುದೊಂದಱೊಳ್ ಜೀವಾದಿ ಪದಾರ್ಥಂಗಳ ನವಭಾಗಂಗಳಂ ಯಾಥಾತ್ಮ್ಯ ಪ್ರರೂಪಣಂಗೆಯ್ವುದಾಕ್ಷೇಪಣಿಯಮೆಂಬುದು: **ಚಾವುಂಡಜಯ** ಪು. ೩೨೬)

**ಆಗಮ** – ಆಪ್ತನು ಕ್ರಮವಾಗಿ ಹೇಳಿದುದೇ ಆಗಮ; ಆಗಮದ ಅರ್ಥವು ಯಾವುದೋ ಅದೇ ಪದಾರ್ಥ (ಆಗಮವೆಂಬುದು ಆಪ್ತಮುಖನಿರ್ಗತಮುಂ ಪೂರ್ವಾಪರ ವಿರೋಧರಹಿತಮುಂ ಸಪ್ತಭಂಗಿಸಮಾಲಿಂಗಿತಮುಂ ಸ್ಯಾದ್ವಾದೋಪಲಕ್ಷಿತಮುಂ ಯಥಾವಸ್ಥಿತ ಸಮಸ್ತ ವಸ್ತುಸ್ವರೂಪ ನಿರೂಪಕಮುಂ: **ಚಾವುಂಡಜಯ,** ಪು.೫)

**ಆಗಮಧರ** – ಆಗಮಜ್ಞ (ಹೇಯಂ ಉಪಾದೇಯಂ ... ನೆಗೞಿದ ಆಗಮಧರನಪ್ಪಾ ಯತಿಯಂ ಯತಿಯೆನವೇಡ: **ಸಮಯಪ,** ೭. ೫೧)

**ಆಗಮಭಾಷೆ** – ಶಾಸ್ತ್ರಗಳಲ್ಲಿನ ನುಡಿ (ಪೆಱವುಱೆವುಳ್ಳುವಿಲ್ಲಿಯೊಳ್ ಆವ ಆಗಮಭಾಷೆಗಳಲ್ಲಿಯುಳ್ಳವಂ ಪೆಱವುಱೆ ಕಾಣಲಾಗದು: **ಅಜಿತಪು,** ೧೨. ೩೩)

**ಆಗಮವಿತ್ತ್ವ** – ಆಗಮಜ್ಞಾನ (ಅನ್ವಿತ ಚತುರಾನನತ ಆಗಮವಿತ್ವಂ ... ಇಂತು ಪತ್ತತಿಶಯಂಗಳಿವೇಂ ಜಿನನೊಳ್ ಪೊದಳ್ದುವೋ: **ಆದಿಪು,** ೧೦. ೪೩)

**ಅಘಾತ ಕರ್ಮ** – ಆತ್ಮನ ಗುಣಗಳನ್ನು ನಾಶಮಾಡುವ ಕರ್ಮ, ಇವು ನಾಲ್ಕು ತೆರ: ಆಯು, ನಾಮ, ಗೋತ್ರ ಮತ್ತು ವೇದನೀಯ (ದೇವನಿಕಾಯಂ ಬಂದರ್ಚಿಸಿ ಪೂಜಿಸಿ ಪೋದೊಡೆ ಅವರುಂ ಬೞೆಕ್ಕ ಅಘಾತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ವೋದರ್: **ವಡ್ಡಾರಾ,** ಪು ೧೦೪, ಸಾ ೨೫)

**ಆಚಾಮ್ಲವರ್ಧನ** – ಒಂದು ಬಗೆಯ ಉಪವಾಸವ್ರತ (ಅಚಾಮ್ಲವರ್ಧನಮಂ ತಪ್ಪದೆ ನೋಂತಂತಪ್ಪ ತನುವಂ ಪ್ರಾಯೋಪವೇಶಕ್ಕೆ ತಂದು: **ಶಾಂತಿಪು,** ೯. ೮೪)

**ಆಚಾಮ್ಲವರ್ಧನತಪ** – ಆಚಾಮ್ಲವರ್ಧನ; ಒಂದು ಉಪವಾಸವ್ರತ: [ಒಂದು ದಿನ ಆಚಾಮ್ಲ ಗಂಜಿ ಸೇವನೆ ಒಂದು ಪಾರಣೆ, ಎರಡು ಆಚಾಮ್ಲ ಸೇವನೆ ಒಂದು ಪಾರಣೆ, ಮೂರು ಆಚಾಮ್ಲ ಸೇವನೆ ಒಂದು ಪಾರಣೆ – ಈ ಕ್ರಮದಲ್ಲಿ ಹತ್ತು ಆಚಾಮ್ಲಗಳವರೆಗೆ ಸಾಗಿ ಅನಂತರ ಒಂಬತ್ತು ಆಚಾಮ್ಲ, ಎಂಟು ಆಚಾಮ್ಲ ಹೀಗೆ ಒಂದರವರೆಗೆ ಇಳಿಸುತ್ತ ಬರುವ ವ್ರತ; ಇದರಲ್ಲಿ ಒಟ್ಟು ನೂರು ಆಚಾಮ್ಲಗಳೂ ಹತ್ತೊಂಬತ್ತು ಪಾರಣೆಗಳೂ ಆಗುತ್ತವೆ (ಭವ್ಯಜನ ಮನೋನಂದನ ರನೆನಿಸಿದಭಿನಂದನ ಗುರುಗಳಂ ಸಾರ್ದು ಶಾಶ್ವತಸೌಖ್ಯವರ್ಧನಕರ ಮಪ್ಪಾಚಾಮ್ಲವರ್ಧನತಪದೊಳ್ ನೆಗಟ್ದು ಪರಮಪದಮನೆಯ್ದಿದಂ: **ಆದಿಪು,** ೩. ೬೫ ವ)

**ಆಚಾರ** – ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪಾಚಾರ ಮತ್ತು ವೀರ್ಯಾಚಾರಗಳೆಂಬ ಐದು ಬಗೆಯ ನಡವಳಿಕೆ (ಸಂದೈದು ಮಾಚಾರದೊಳ್ಸದ್ಭಾವಂ ಕೈಗಣ್ಮೆ: **ಆದಿಪು,** ೧. ೩)

**ಆಚಾರ್ಯ** – ಪಂಚಪರಮೇಷ್ಠಿಗಳಲ್ಲಿ ಒಬ್ಬ (ತಪದಿಂ ಸ್ವಾಧ್ಯಾಯದಿಂ ವರ್ಯರಪ್ಪಾಚಾರ್ಯರ್ ನಮಗೀವರಕ್ಕೆ ದಯೆಯಿನಾಚಾರಸಂಪತ್ತಿಯಂ: **ಮಲ್ಲಿನಾಪು,** ೧. ೩); ಆವಶ್ಯಕವಾದ ಮೂವತ್ತಾರು ಗುಣಗಳನ್ನು ಹೊಂದಿ, ಐದು ಆಚಾರಗಳನ್ನು ತಮ್ಮ ಜೀವನದ ಭಾಗವಾಗಿಸಿಕೊಂಡು ಶಿಷ್ಯರ ನಡವಳಿಕೆಯ ಕ್ರಮವನ್ನು ಕರುಣೆಯಿಂದ ನೇರ್ಪಡಿಸುತ್ತ, ಅವರ ಬಳಿ ದೋಷಗಳು ಸಾರದಂತೆ ಎಚ್ಚರವಹಿಸುವರು ಆಚಾರ್ಯರುಗಳು (ಮೂವತ್ತಾಱು ಗುಣಂಗಳತ್ತಮಗಮರ್ದಿರೆ ಸಂದೈದುಮಾಚಾರದೊಳ್ಸದ್ಭಾವಂ ಕೈಗಣ್ಮೆ

ಶಿಷ್ಯಾಚರಣವಿಧಿಗಳಂ ತಿರ್ದಿ ಕಾರುಣ್ಯದಿಂದಂ ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯರ್: **ಆದಿಪು,** ೧. ೩)

**ಆಚಾರ್ಯ(ಭಕ್ತಿ)** – ದರ್ಶನವಿಶುದ್ಧತೆ ಷೋಡಶಭಾವನೆಗಳಲ್ಲಿ ಒಂದು, ಪಂಚಪರಮೇಷ್ಠಿಗಳಲ್ಲಿ ಒಬ್ಬರಾದ ಆಚಾರ್ಯರಲ್ಲಿ ಭಕ್ತಿ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗ ಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಆಚಾರ್ಯಷಟ್ಕರ್ಮ** – ಆಚಾರ್ಯರು ಅನುಸರಿಸುವ ಆರು ಕರ್ಮಗಳು (ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯಮುಂ ಸಂಯಮಮುಂ ತಪಮುಮೆಂಬೀ ಆಚಾರ್ಯಷಟ್ಕರ್ಮಂಗಳುಂ ಶ್ರಾವಕಜನಕ್ಕೆ ಕುಲ ಧರ್ಮಂಗಳ್: **ಚಾವುಂಡಜಯ,** ಪು

**ಆಜ್ಞಾರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಆಜ್ಞಾರುಚಿಯೆಂಬುದು ಸರ್ವಜ್ಞನಾಜ್ಞೆಯಿಂ ಜೀವಾದಿಪದಾರ್ಥಂಗಳಪ್ಪ ಶ್ರದ್ಧಾನಂ: **ಚಾವುಂಡಜಯ,** ಪು. ३३೬)

**ಅಜ್ಞಾವಿಚಯ** – ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು; ಆಗಮಗುಣಗಳ ಕುರಿತಾದ ಚಿಂತನೆ (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

**ಆಜ್ಞಾವಿಧೇಯ** – ಆಜ್ಞಾನುಸಾರ ನಡೆಯುವವನು (ಕಳಿಂಗರಾಜಂಗೆ ಕೋಶೋಪನತ ವೃತ್ತಿಯನಿತ್ತು ಸರ್ವಸ್ವಮಂ ಕೊಂಡಾಜ್ಞಾವಿಧೇಯಮಂ ಮಾಡಿ ಮಹೇಂದ್ರ ಉಪಕಂಠದೊಳ್ ಮೂಱು ಉಪ್ಪಯಣಂಗೆಯ್ದು: **ಶಾಂತಿಪು,** ೧೦. ೧೬೫)

**ಆತಪಯೋಗ** – ಬಿಸಿಲಿನಲ್ಲಿ ನಿಂತು ತಪಸ್ಸು ಮಾಡುವುದು (ತಪನಾತಪದಿಂ ತೇಷ್ಟಾಕ್ಷಪಣೆಯನೊಳಕೊಂಡು ಕೋೞ್ಮಿಗಂ ಬೆೞ್ಮಿಗಮಾತ್ಮಪುರೋಭಾಗ ದೊೞಿರ್ದೊಡಮುಪಶಮಿಸಿದುದೊಳ್ಪನೀಗುಮಾತಪಯೋಗಂ: **ಪಂಪರಾ,** ೭. ೯೫)

**ಆತೋದ್ಯಾಂಗ** – ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಬೇಡಿದ ವಾದ್ಯವನ್ನು ನೀಡುವ ವೃಕ್ಷ (ವಸನಾಂಗ ... ವಿಭೂಷಣಾಂಗ ದಶಕಲ್ಪಕುಜಂ: **ಚಂದ್ರಪ್ರಪು,** ३. ३४); ನೋಡಿ **'ಕಲ್ಪಕುಜ'**

**ಆತ್ಮಪಾಲನ** – ತನ್ನನ್ನು ತಾನು ಕಾಪಾಡಿಕೊಳ್ಳುವುದು (ಆತ್ಮಪಾಲನಮೆಂಬುದು ಸ್ವರ್ಗಪ್ರಾಕಾರದೊಳಮಾತ್ಮರಕ್ಷೆಗೆಯ್ವುದು: **ಚಾವುಂಡಜಯ:** ಪು.

**ಆತ್ಮಪುಣ್ಯ** – ತಾನು ಮಾಡಿದ ಪುಣ್ಯ (ಅಬ್ಬೆ ದಾದಿ ಪರಿಚಾರಕರೀಜೆಲ ಕಾಪು ಕಾಪೆ ಕೂರ್ತಿಟ್ಟವರಾತ್ಮಪುಣ್ಯಮೆ ವಿಪುಣ್ಯರನೋಳಿಯೆ ಕಾಪು ಕಾಗುಮೇ: **ಶಾಂತಿಪು,** ೬. ೧೦೫)

**ಆತ್ಮರಕ್ಷ** – ಒಂದು ದೇವತಾವರ್ಗ (ಸಾಮಾನಿಕ ತ್ರಾಯಸ್ತ್ರಿಂಶತ್ಪಾರಿಷದ ಆತ್ಮರಕ್ಷ ಲೋಕಪಾಳ ಅಭಿಯೋಗ್ಯ ಕಿಲ್ಬಿಷರೊಡನೆ: **ಆದಿಪು,** ೭. ೪೨ ವ)

**ಆತ್ಮರಕ್ಷಕ** – ಸ್ವರ್ಗದಲ್ಲಿ ಹುಟ್ಟಿದ ಜೀವಕ್ಕೆ ಅಂಗರಕ್ಷಕರಾಗಿರುವ ದೇವತೆಗಳು (ಅಮರರುಂ ... ಆತ್ಮರಕ್ಷಕ ಲೋಕಪಾಲ ಕಿಲ್ಬಿಷಾಭಿಯೋಗ್ಯಭೇದದಿಂ ನವವಿಧಮಕ್ಕುಂ: **ಶಾಂತಿಪು,** ೧೨. ೬ ವ)

**ಆದಾನ** – ಐವತ್ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ನಾಮಕರ್ಮ ಬಹಿರ್ಯಾನನಿಷದ್ಯಾನ್ನಪ್ರಾಶನವ್ಯುಷ್ಟಿ ... ತ್ಯಾಗಾಗ್ರನಿರ್ವೃತಿಯೆಂಬಯ್ವತ್ತು ಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಆದಿಜಿನ** – ಮೊದಲ ತೀರ್ಥಂಕರ, ವೃಷಭನಾಥ (ಅನತಿಶಯ ಕೇವಲಜ್ಞಾನಂ ಅನಿರೀಕ್ಷಿ ವಿಶ್ವನಾಥಂ ಆದಿಜಿನಂ: **ಆದಿಪು,** ೧೦. ೧೫)

**ಆದಿಜಿನೇಂದ್ರ** – ಆದಿಜಿನ (ದೇವಾಸುರಮಕುಟಮಣಿದ್ಯುತಿ ಭಾಸುರ ಚರಣಾರವಿಂದನಾದಿಜಿನೇಂದ್ರಂ: **ಆದಿಪು,** ೧೦. ೩೮)

**ಆದಿಜಿನೇಶ್ವರ** – ಆದಿಜಿನ (ಆದಿಜಿನೇಶ್ವರಂ ಮೊದಲ ಚಕ್ರಿಗೆ ಭಾವಿಜಿನೇಂದ್ರ ನಾಮತೀರ್ಥೋದಯಮಾಳೆಯಂ ಬೆಸಸೆ: **ಶಾಂತಿಪು,** ೧೦. ೭೯)

**ಆದಿತೀರ್ಥಕರ್ತಾರ** – ಆದಿತೀರ್ಥಂಕರ (ಇತ್ತಲ್ ಆದಿತೀರ್ಥಕರ್ತಾರಂ ಅಮರಗಿರಿಯಂತೆ ಅಚಳನುಂ ಪಾರಾವಾರದಂತೆ ಅಕಲುಷಿತನುಂ ಅನಿಲನಂತೆ ನಿಸ್ಸಂಗನುಂ ಅಂಬರದಂತೆ ನಿರ್ಲೇಪನುಂ ಆಗಿ ನಿಲೆ: **ಆದಿಪು,** ೯. ೯೩ ವ)

**ಆದಿತೀರ್ಥಪ್ರವರ್ತಕ** – ಆದಿಜಿನ (ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ: **ಆದಿಪು,** ೫. ೧೩ ವ)

**ಆದಿತೀರ್ಥೇಶ** – ಆದಿಜಿನ (ಕೇಶೋತ್ಪಾಟನದಂದು ಭಾವಿಸೆ ನಮಸ್ಸಿದ್ಧೇಭ್ಯ ಎಂದಾದಿತೀರ್ಥೇಶರ್ ವಂದಿಸಿ ದೀಕ್ಷೆಗೆಯ್ದರ್: **ಶಾಂತಿಪು,** ೧. ೨)

**ಆದಿತೀರ್ಥೇಶ್ವರ** – ಆದಿಜಿನ (ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತಾದಿ ತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ: **ಆದಿಪು,** ೧೬. ೪೩)

**ಆದಿತ್ಯ** – ಎಂಟು ಮಂದಿ ಲೋಕಾಂತಿಕ ದೇವರಲ್ಲಿ ಒಬ್ಬ (ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ಭತೋಯ ತುಷಿತಾವ್ಯಾಬಾಧಾರಿಷ್ಟರೆಂಬ ಎಣ್ಬರುಂ ಲೋಕಾಂತಿಕ ದೇವರ್ ಬಂದು: **ಆದಿಪು,** ೯. ೩೦ ವ)

**ಆದಿದೇವ** – ಮೊಟ್ಟ ಮೊದಲ ದೇವ, ಆದಿಜಿನ (ಇದಿರ್ಗೊಳ್ವಂತಾಯ್ತು ... ಬಂದೊಡೆ ಆದಿದೇವಂ: **ಆದಿಪು,** ೭. ೬೦)

**ಆದಿನಾಥ** – ಆದಿಜಿನ (ಆದಿನಾಥನ ಮುನಿರೂಪಮಂ ಕಾಣಲೊಡಂ ಜಾತಿಸ್ಮರನೆನಾಗಿ ಮಾರ್ಗಸ್ಥಿತಿಯನಱಿದು ನಿಱಿಸಿದಂ: **ಆದಿಪು,** ೧೦. ೮ ವ)

**ಆದಿನಾಥಮತ** – ಜೈನಮತ (ತತ್ತ್ವಂ ಆದಿನಾಥಮತದಿಂ ಸಿರಿಯಂ ನೃಪರಿಂ ಮಹಾಪ್ರಸಿದ್ಧಂ: **ಶಾಂತಿಪು,** ೧೨. ೮೦)

**ಆದಿಪುರಾಣ** – ಮೊದಲ ತೀರ್ಥಂಕರನನ್ನು ಕುರಿತ ಪುರಾಣ (ನೆಗಟ್ದಿ ಆದಿಪುರಾಣದೊಳ್ ಅಱಿವುದು ಕಾವ್ಯಧರ್ಮಮಂ ಧರ್ಮಮುಮಂ: **ಆದಿಪು,** ೧. ೩೮)

**ಆದಿಪೂರುಷ** – ಆದಿಜಿನ (ಎಮ್ಮ ಬಾಟ್ವಿ ತೆಱನಾವುದು ದೇವ ಶರಣ್ಗೆ ವಂದೆವು ಆದರದೆ ಎಮಗಪ್ಪುದಂ ಬೆಸಸಿ ಕಾವುದು ಲೋಕಮನಾದಿಪೂರುಷಾ: **ಆದಿಪು,** ೮. ೬೨)

**ಆದಿಬ್ರಹ್ಮ** – ಆದಿಜಿನ (ಶ್ರೀದೇವೇಂದ್ರಮುನೀಂದ್ರವಂದಿತ ಗುಣವ್ರಾತಂ ಜಗತ್ಸ್ವಾಮಿ ಸಂದಾದಿಬ್ರಹ್ಮಂ ಅಗಾಧಬೋಧನಿಳಯಂ: **ಆದಿಪು,** ೧. ೧)

**ಆದಿಭಟ್ಟಾರಕ** – ಆದಿತೀರ್ಥಂಕರ (ಮಹಾಂಭೋರಾಶಿ ಗಂಭೀರನಪ್ಪ ಆದಿಭಟ್ಟಾರಕನ ಚಿತ್ತವೃತ್ತಿಯುಂ ಆ ಮಹಾತ್ಮನಾವ ಮಾಟ್ಕೆಯೊಳಱಿದಂ: **ಆದಿಪು,** ೧೦. ೭ ವ)

**ಆದಿಭೂಭುಜ** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಹನ್ನೆರಡು ಮಂದಿ ಚಕ್ರವರ್ತಿಗಳಲ್ಲಿ ಮೊದಲನೆಯವನು, ಭರತ (ರಾಜರಾಜನಧಿರಾಜಂ ಚಕ್ರನಿಧೀಶಂ ಆದಿಭೂಭುಜನೆನೆ ನೆಗಟ್ದಂ ಭರತಚಕ್ರಿ ವಿಶ್ವಂಭರೆಯೊಳ್: **ಆದಿಪು,** ೧೫. ೩)

**ಆದೇಶಪುರುಷ** – ಭವಿಷ್ಯವಾಣಿಯಲ್ಲಿ ಹೇಳಲಾದ ವ್ಯಕ್ತಿ (ಆದೇಶಪುರುಷದರ್ಶನಂ ಸಮನಿಸೆ ನಮಗೆ ಸಮನಿಸಿತು ಇನ್ನೇಕೆ ಇರ್ಪಂ: **ಕರ್ಣನೇಮಿ,** ೫. ೩೬ ವ)

**ಆದೇಯ** – ಒಂದು ವಿಧದ ನಾಮಕರಣ, ಈ ಕರ್ಮದ ಉದಯದಿಂದ ಜೀವನಿಗೆ ಬಹುಮಾನ್ಯತೆಯು ದೊರೆಯುತ್ತದೆ (ಸುಭಗ ದುರ್ಭಗ ಸುಸ್ವರ ದುಸ್ಸ್ವರರಾದೇಯ ಯಶಸ್ಕೀರ್ತ್ಯಯಶಸ್ಕೀರ್ತಿ ನಿರ್ಮಾಣ ನೀಚಗೋತ್ರಂಗಳೆಂಬೆತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ)

**ಆನತ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಆನಂದನಾಟಕ** – ಆನಂದದಿಂದ ಆನಂದವುಂಟಾಗುವಂತೆ ಮಾಡುವ ರೂಪಕಸಹಿತವಾದ ನೃತ್ಯ, ಜಿನಶಿಶುವಿನ ಜನ್ಮಸವನಕಾಲದಲ್ಲಿ ಸೌಧರ್ಮೇಂದ್ರನು

ಮಾಡುವ ಆನಂದನೃತ್ಯ (ಆನಂದನಾಟಕಂ ಪರಮಾನಂದಮನಂದು ಮಾಡೆ: **ಆದಿಪು.** ೧೬. ೨೮)

**ಆನಂದನೃತ್ಯ** – ಆನಂದನಾಟಕ, ಆನಂದದಿಂದ ಮಾಡುವ ನೃತ್ಯ (ಅಂತು ಮೂವತ್ತಿರ್ವರಿಂದ್ರರುಮಾನಂದನೃತ್ಯಮನಾಡೆಯುಂ: **ಶಾಂತಿಪು,** ೧೨. ೩೭ ವ)

**ಆಪ್ತ** – ಅಷ್ಟಾದಶದೋಷರಹಿತನಾದವನು (ಮಾತೇಂ ಉದ್ಘಾತ ದೋಷ ಪ್ರಕರರಹಿತನೆನಿಪಂ ಆಪ್ತಂ: **ಸುಕುಮಾಚ,** ೫. ೩೯); ಪೂಜ್ಯವ್ಯಕ್ತಿ (ಪೊಲ್ಲೆಂದು ಆವೇಕೆಂದಪೆಂ ಆಪ್ತಂ ಪಾವನಮಲ್ಲೆಂದು ಸಾಱುತಿರ್ಪರ್ ಶೈವರ್: **ಸಮಯಪ,** ೮. ೧೬), ನೋಡಿ, **'ಅಷ್ಟಾದಶದೋಷ'**

**ಆಭಿಯೋಗ್ಯದೇವತೆ** – ಸೌಧರ್ಮಾದಿ ಕಲ್ಪಗಳಲ್ಲಿ ಹುಟ್ಟುವ ದೇವತೆಗಳಿಗೆ ವಾಹನಾದಿ ಕರ್ಮಗಳಲ್ಲಿ ತೊಡಗಿರುವ ದೇವತೆಗಳ ಒಂದು ಪಂಗಡ (ಸೋಮ ಯಮ ವರುಣ ಕುಬೇರ ಪ್ರಮುಖ ಲೋಕಪಾಲಾಭಿಯೋಗ್ಯ ದಿಗ್ಗಜೇಂದ್ರ ದೇವವಿಹಾರ ಪ್ರಾಸಾದಾಭಿರಾಮಮುಂ: **ಆದಿಪು,** ೧. ೪೯ ವ)

**ಆಭೋಗಿ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

**ಆಮ್ನಾಯ** – ಪರಂಪರೆ (ನೀಂ ಮುಮ್ಮನೆಂಯುಪ್ಪೈ ನೋಡು ನಣ್ಪಿಂ ನಿಮಗಮೆಗಮಾಮ್ನಾಯದಿಂ ಬಂದುದಿಂತೀ ಜಿನಧರ್ಮಂ: **ಆದಿಪು,** ೨. ೨೦)

**ಆಯುಧಾಗಾರ** – ಚಕ್ರವರ್ತಿ ತನ್ನ ಶಸ್ತ್ರಗಳನ್ನಿಡುವ ಜಾಗ (ಆ ಮುನಿಯ ಮನೋಗಾರದೊಳ್ ಧ್ಯಾನಚಕ್ರಂ ಪುಟ್ಟಿತ್ತು ಆ ರಾಜ್ಯಾಶ್ರಮಮುನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು: **ಆದಿಪು,** ೬. ೨೪ ವ)

**ಆಯುರಬ್ಧಿ** – ಒಂದು ಸಾಗರದಷ್ಟು ಆಯುಸ್ಸು (ತನ್ನಯ ದೇವಿಯರ್ ಪಲರ್ ಕಟಿವಿನಂ ಆಯುರಬ್ಧಿಯೊಳ್ ಅನುಕ್ರಮದಿಂ ಪಳಿತೋಪಮಂಗಳ್ ಅಯ್ದುಟಿವಿನೆಗಂ: **ಆದಿಪು,** ೨. ೭೨)

**ಆಯುಶ್ಚ್ಯುತಿ** – ಆಯುಸ್ಸಿನ ಕೊನೆ (ಅಚ್ಯುತೇಂದ್ರನ ಆಯುಶ್ಚ್ಯುತಿಯೊಳ್ ... ವಿಬುಧಸಮಾಖ್ಯೆಗಂ ನಾಡೆ ಮಾಡಿದಂ ಸಾರ್ಥತೆಯಿಂ: **ಚಂದ್ರಪ್ರಪು,** ೯. ೫೮)

**ಆಯುಷ್ಯಚತುಷ್ಕ** – ನರಕಾಯುಷ್ಯ, ತಿರ್ಯಗಾಯುಷ್ಯ, ಮನುಷ್ಯಾಯುಷ್ಯ ಮತ್ತು ದೇವಾಯುಷ್ಯ ಎಂಬ ನಾಲ್ಕು ಬಗೆಯವು, ಜೀವನು ಶರೀರದಲ್ಲಿ ವಾಸಿಸುವ

ಕಾಲ (ನರಕತಿರ್ಯಗ್ಮನುಷ್ಯ ದೇವಾಯುಷ್ಯಚತುಷ್ಕಮುಂ: **ಸುಕುಮಾಚ,** ೩. ೩೯ ವ)

**ಆಯುಷ್ಯಪರಾವರ್ತನ** – ವಿವಿಧ ಜನ್ಮಗಳಲ್ಲಿ ಬೇರೆ ಬೇರೆ ಆಯುಷ್ಯಗಳನ್ನು ಹೊಂದುವುದು (ಒಂದಾಯುಷ್ಯಮನೊರ್ಮೆ ಕಟ್ಟಿ ಮತ್ತಮಂತೆ ಪೆಱಪೆಱಾಯುಷ್ಯಮೆಲ್ಲಮಂ ಕಟ್ಟಿ ಬಿಸುಟ್ಟು ಮುನ್ನಿನಾಯುಷ್ಯದ ಕೆಲದಾಯುಷ್ಯಮಂ ಕೂಡಿ ಕಟ್ಟಿಕೊಂಡೊಡದೊಂದಾಯುಷ್ಯಪರಾವರ್ತನಂ: **ಜೀವಸಂ,** ೫. ೨ ವ)

**ಆರಂಭನಿವೃತ್ತ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಎಂಟನೆಯ ವರ್ಗಕ್ಕೆ ಸೇರಿದವನು (ಘನತರಸಾವದ್ಯಕರಂ ನೆನೆವೊಡೆ ಷಟ್ಕರ್ಮನಿರತಮೆಂದವಂ ತೊಱೆದವನೆಂಟನೆಯ ನೆಲೆಯಾತನಾರಂಭಿ ನಿವೃತ್ತನೆನಿಕುಮುಪ ಮೋದ್ದಾಮಗುಣಂ: **ಸುಕುಮಾಚ,** ೬. ೩೩); (ಆರಂಭದೆಸೆಯಂ ಬಿಟ್ಟೋರಂತಿರೆ ಪೆಱಗೆ ಪೇಟ್ದಗುಣಮನಿತಱೊಳಂ ಸಾರವಿದನೆನಿಸಿ ನಡೆದವನಾರಂಭ ನಿವೃತ್ತನೆಂಟನೆಯಾತಂ: **ಧರ್ಮಾಮೃತ,** ೫. ೯೬)

**ಆರಾಧನೆ** – ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ಚಾರಿತ್ರ, ಸಮ್ಯಕ್ತಪಸ್ಸು ಎಂಬ ನಾಲ್ಕನ್ನು ಸಾಧಿಸುವುದು (ಇಂತಾ ಮಹಾನುಭಾವನಾ ಮಹೋಪಸರ್ಗಮನಶ್ರಮದಿಂ ಸೈರಿಸಿ ಸಮ್ಯಗ್ದರ್ಶನಜ್ಞಾನಚಾರಿತ್ರ ತಪಸಾಂ ಸ್ವೀಕರಣಮಾರಾಧನಾ ನಾಮಮೆಂಬ ಚತುರ್ವಿಧಾರಾಧನೆಗಳನಾರಾಧಿಸಿ: **ಸುಕುಮಾಚ,** ೧೨. ೪೦ ವ)

**ಆರಾಧಿಸು** – ಪೂಜಿಸು (ಸಿದ್ಧಕೂಟಮಂ ತ್ರಿಪ್ರದಕ್ಷಿಣಂಗೈದು ಜಿನೇಂದ್ರಾರ್ಚನ ಪುರಸ್ಸರಂ ವಾಚನಾಗ್ರಹಣಸಮೇತಮಾರಾಧನೆಯಿನರ್ಚಿಸಿ: **ಆದಿಪು,** ೨. ೫೦ ವ)

**ಆರಿಕೆ** – ಕಂತಿ, ಜೈನ ಸನ್ಯಾಸಿನಿ (ಪೃಥಿವೀತಿಳಕೆ ಸುಮತಿಯೆಂಬಾರಿಕೆಯ ಸಾರೆ ದೀಕ್ಷೆಗೊಂಡು: **ಶಾಂತೀಶ್ವಪು,** ೧೨, ೧೧೭ ವ)

**ಆರೂಢತಪ** – ತಪಸ್ಸಿನ ನೆಲೆಯನ್ನು ಏರಿದ; ತಪಸ್ಸನ್ನು ಕೈಕೊಂಡ (ಅಜಿತಸೇನ ಮಹಾರಾಜಂ ... ಸಾಮಂತನ ತರಣಿಯಂತೆ ಪರಿಹೃತಾಂಬರನುಂ ... ಶಿಶಿರಸಮಯದಂತಾರೂಢತಪನುಮಾಗಲೊಡಂ: **ಚಂದ್ರಪ್ರಪು,** ೯. ೪೧ ವ)

**ಆರ್ಜವ** – ದಶಧರ್ಮಗಳಲ್ಲಿ ಒಂದು (ಎಂಬಿನಮುತ್ತಮಕ್ಷಮಾಮಾರ್ದವಾರ್ಜವ ಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು; **ಆದಿಪು,** ೬. ೩೦ ವ)

**ಆರ್ಜಿಕೆ** – ಕಂತಿ (ಅಭಿವಿನುತಭಕ್ತಿಯಿಂದ ಅಗ್ನಿಭೂತಿ ಮೊದಲಾದ ಮುನಿಪರುಂ ನಾಗಶ್ರೀಪ್ರಭೃತಿ ಸಮಸ್ತ ಆರ್ಜಿಕೆಯರುಂ ಅಭೀಕ್ಷಪರಿಣಾಮಶುದ್ಧಿಯಿಂ ವಂದಿಸಿದರ್: **ಸುಕುಮಾಚ,** ೮. ೬೯)

**ಆರ್ಜಿಸು** – ಸಂಪಾದನೆ ಮಾಡು (ನೋಟದೊಳ್ ಅಲಂಪನಾರ್ಜಿಸಿ ಕಾಮಿನಿ ಕಾಮಪಾಶದಂತೆಯಿರೆ ನಾಲ್ವರುಂ ಭಟರ ಮನಮನುಱ್ ಸೆಱೆವಿಡಿದಳ್: **ಸುಕುಮಾಚ**, ೭. ೧೨)

**ಆರ್ತಧ್ಯಾನ** – ಇಷ್ಟವಾದದ್ದು ದೂರವಾದೀತೆಂಬ ಮತ್ತು ಅದರ ಬಗೆಗಿನ ಆಕಾಂಕ್ಷೆಯಿಂದ ಕೂಡಿದ ಚಿಂತೆ (ಅಂತು ಆರ್ತಧ್ಯಾನದೊಳ್ ಅಜಗರನಾಗಿ ತನ್ನ ಮುನ್ನಿನ ಸಂಚಿತವಸ್ತುಗಳಂ ಕಾವಂದು ಮಗಂ ಮಣಿಮಾಳಿಯಂ ಕಂಡು ಜಾತಿಸ್ಮರನಾಗಿ: **ಆದಿಪು**, ೨. ೧೫ ವ); ಇದರಲ್ಲಿ ಎರಡು ಬಗೆ: ಬಾಹ್ಯ, ಆಧ್ಯಾತ್ಮಿಕ (ಆರ್ತಮುಂ ಬಾಹ್ಯಮಾಧ್ಯಾತ್ಮಿಕಮೆಂದು ದ್ವಿಪ್ರಕಾರಮಕ್ಕುಂ; ಅಲ್ಲಿ ಬಾಹ್ಯಮೆಂಬುದು ಕ್ರಂದನ ವಿಳಾಪನ ಪರಿದೇವನ ಶಚನ ಪರಿವಿಭವ ವಿಸ್ಮಯ ವಿಷಯಸಂಗಾದಿಗಳ್ಪರಾನುಮೇಯಮಪ್ಪುದಱಿಂ ಬಾಹ್ಯಂ: ಸ್ವಸಂವೇದ್ಯಮಪ್ಪಾ ಧ್ಯಾತ್ಮಿಕಾರ್ತಧ್ಯಾನಂ ಚತುರ್ವಿಧಮಕ್ಕುಂ: **ಚಾವುಂಡಜಯ**, ಪು. ೩೮೪)

**ಆರ್ತರೌದ್ರ** – ತನ್ನ ಕಷ್ಟಕ್ಕೆ ಕಾರಣರಾದವರ ಮೇಲೆ ಸೇಡು ತೀರಿಸಿಕೊಳ್ಳುವ ಚಿಂತೆ, ಹಂಬಲ (ಆರ್ತರೌದ್ರದಿಂ ಪೆಣ್ಬುಲಿಯಾಗಿ ಪುಟ್ಟಿ ಸಹದೇವಿ ಬರುತ್ತಿರೆ: **ಪಂಪರಾ**, ೨. ೫೩)

**ಆರ್ಯ** – ಭೋಗಭೂಮಿಯಲ್ಲಿ ಹುಟ್ಟಿದವನು (ಆತನ ಸೇನನಾಯಕ ಮಂತ್ರಿಪುಂಗವ ಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದ ಮುತ್ತರಕುರುವಿನೊಳಾರ್ಯರಾಗಿ; **ಆದಿಪು**, ೫. ೧೩ ವ)

**ಆರ್ಯಕರ್ಮ** – ಶ್ರಾವಕರು ಅನುಸರಿಸಬೇಕಾದ ಆರು ಬಗೆಯ ಕರ್ತವ್ಯಗಳು (ಇಜ್ಯೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪಮೆಂದಾರ್ಯಕರ್ಮಮಾಱು ತೆಱನಕ್ಕುಂ: **ಸುಕುಮಾಚ**, ೬. ೨೫ ವ)

**ಆರ್ಯಷಟ್ಕರ್ಮ** – ಹೊಸತಾಗಿ ತಾನು ಸೃಷ್ಟಿಸಿದ ಬ್ರಾಹ್ಮಣರಿಗೆ ಭರತನು ನಿಗದಿಗೊಳಿಸಿದ ಆರು ಕರ್ಮಗಳು: ಪೂಜೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪಸ್ಸುಗಳು (ಪಂಚಾಣುವ್ರತಾದಿಪ್ರವರ್ತನ ಸ್ವಭಾವಸಂಯಮಮುಂ ತಪಮುಂ ಅನಶನವೃತ್ಯಾದಿ ತಪೋನುಷ್ಠಾನಮುಂಬೆರಸಾರ್ಯ ಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದು ಅಱಿಯೆ ಪೇೞ್ದು ಕೈಕೊಳಿಸಿ: **ಆದಿಪು**, ೧೫. ೧೩ ವ); ನೋಡಿ, **ಆರ್ಯಕರ್ಮ**

**ಆರ್ಯಿಕೆ** – ಗೌರವಾರ್ಹಳು, ಕಂತಿ (ಸುವ್ರತೆಯರ್ ಎಂಬ ಆರ್ಯಿಕೆಯರ್ಗೆ ಆಹಾರದಾನಮಂ ಮಾಡಿದೊಡೆ ಅವರುಂ ಉಪವಾಸ ಶ್ರಮದಿಂ ಛರ್ದಿಗೆಯ್ಯೆ: **ಶಾಂತೀಶ್ವಪು**, ೮. ೧೩೨ ವ)

**ಆರ್ಹತ** – ಜೈನಧರ್ಮ (ಕುಮತಂಗಳ್ ಭುವನದೊಳಗೆಲ್ಲಂ ಆರ್ಹತದವೊಲೇಮ ಸಂದಪುದೇ; **ಸಮಯಪ**, ೩. ೧೨); ಜೈನಧರ್ಮಿ (ಮಾಹೇಶ್ವರವೃತ್ತಿಯೊಳ್ ಎಸಗುತ್ತುಮಿರ್ದು ಕಳ್ಗುಡಿವವರಂ ಪತ್ತಿದೊಡೆ ಮುಟಿಯರ್ ಆರ್ಹತರ್: **ಸಮಯಪ**, ೧೩. ೩೭)

**ಆರ್ಹಂತ್ಯ** – ಮೋಕ್ಷ (ಪೂಜಾರ್ಹಂ ಆರ್ಹಂತ್ಯಲಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾೞ್ಕೆ ಇಷ್ಟಾರ್ಥ ಸಂಸಿದ್ಧಿಯಂ: **ಪಂಪರಾ,** ೧. ೧); ಅರ್ಹಂತಸ್ಥಿತಿ (ಘಾತಿಗಳಂ ಘಾತಿಸಿ ತದ್ಯುಗಂಧರಮಹಾಯೋಗೀಶ್ವರಂ ಪೊರ್ದಿದಂ: **ಆದಿಪು,** ೩. ೮೦); ಐವತ್ತೂಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ದಾನಸುಖೋದಯ ಇಂದ್ರತ್ಯಾಗ ಅವತಾರಹಿರಣ್ಯಗರ್ಭೋತ್ತ ... ಆರ್ಹಂತ್ಯವಿಹಾರ ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಆರ್ಹಂತ್ಯಕ್ರಿಯೆ** – ತೀರ್ಥಂಕರತ್ವ (ಅಷ್ಟಮಹಾಪ್ರಾತಿಹಾರ್ಯ ಚತುಸ್ತ್ರಿಂಶತತಿಶಯಂಗಳೆಸೆಯೆ ಸಮವಸರಣಮಂಡಲದೊಳು ದ್ವಾದಶಗಣ ಪರಿನಿವೇಷ್ಟಿತನಾಗಿಪ್ಪುದು ಆರ್ಹಂತ್ಯಕ್ರಿಯೆ: **ಚಾವುಂಡಜಯ,** ಪು. ೧೮೭)

**ಆರ್ಹಂತ್ಯಧರ್ಮ** – ಜೈನಧರ್ಮ (ಆರ್ಹಂತ್ಯಧರ್ಮಂ ತನಗಾರ್ಮಂ ಭೂಷೆ ರತ್ನತ್ರಯಮೆನೆ ನೆಗೞ್ದಂ ಧಾತ್ರಿಯೊಳ್ ಶಾಂತಿನಾಥಂ: **ಸುಕುಮಾಚ,** ೧. ೫೫)

**ಆರ್ಹಂತ್ಯಲಕ್ಷ್ಮಿ** – ಮೋಕ್ಷಲಕ್ಷ್ಮಿ (ಪೂಜಾರ್ಹಮಂ ಆರ್ಹಂತ್ಯಲಕ್ಷ್ಮೀಕಾಂತಂ ಮುನಿಸುವ್ರತಂ; **ಪಂಪರಾ,** ೧. ೧)

**ಆವರ್ತಿನಿ** – ಒಂದು ಬಗೆಯ ವಿದ್ಯೆ (ಒಂದು ದಿವಸಂ ಪ್ರಜ್ಞಪ್ತಿ ಕಾಮರೂಪಿಣಿ ಅಗ್ನಿಸ್ತಂಭಿನಿ ಉದಕಸ್ತಂಭಿನಿ ವಿಶ್ವಪ್ರವೇಶಿನಿ ಅಪ್ರತಿಘಾತಗಾಮಿನಿ ಉತ್ಪಾಟಿನಿ ವಶೀಕಾರಣಿ ಆವೇಶಿನಿ ಪ್ರಸ್ಥಾಪನಿ ಪ್ರಮೋಹಿನಿ ಪ್ರಹರಣಿ ಸಂಕ್ರಮಣಿ ಆವರ್ತಿನಿ ಸಂಗ್ರಹಿಣಿ ... ಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು: **ಚಾವುಂಡಜಯ,** ಪು. ೧೬೪)

**ಆವಶ್ಯಕ** – ದೀಕ್ಷೆ ವಹಿಸುವವನ ಆರು ಆವಶ್ಯಕ ಗುಣಗಳು (ಸಾಮಾಯಿಕ ಚತುರ್ವಿಂಶತಿಸ್ತವನ ವಂದನ ಪರಿಕ್ರಮಂ ಪ್ರತ್ಯಾಖ್ಯಾನ ಕಾಯೋತ್ಸರ್ಗಗಳೆಂಬ ಆಱು ಆವಶ್ಯಕಂಗಳುಂ: **ಹರಿವಂಶ,** ೧೪. ೫೨ ವ)

**ಆವಶ್ಯಕಪರಿಹಾರಿಣಿ** – ಷೋಡಶಭಾವನೆಗಳಲ್ಲಿ ಒಂದು, ಸಾಮಾಯಿಕ ಚತುರ್ವಿಂಶತಿಸ್ತವನ ವಂದನೆ ಪ್ರತಿಕ್ರಮಣ ಪ್ರತ್ಯಾಖ್ಯಾನ ಕಾಯೋತ್ಸರ್ಗವೆಂಬ ಷಡಾವಶ್ಯಕಕ್ರಿಯೆಗಳನ್ನು ಯಥಾಕಾಲ ನೆರವೇರಿಸುವುದು, ಪಂಚಪರಮೇಷ್ಠಿಗಳಲ್ಲಿ ಒಬ್ಬರಾದ ಆಚಾರ್ಯರಲ್ಲಿ ಭಕ್ತಿ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೮)

**ಆವಳಿಕ** – ಆವಲಿ, ಒಂದು ಕಾಲಪ್ರಮಾಣ, ಅಸಂಖ್ಯಾತ ಸಮಯಗಳು ಸೇರಿ ಒಂದು ಅವಲಿ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾನುಕ್ರಮದಿಂ: **ಆದಿಪು,** ೬. ೪೮ ವ)

**ಆವಾಪ್ತಿ** – ಸಿದ್ಧಿ (ದೇವಿಯರೊಂದು ಅಭಿಲಷಿತಫಲ ಆವಾಪ್ತಿಗೆ ದೇವ ನಿಮ್ಮ ದಯೆಗೆಯ್ದ ಫಳಂ ಕೇವಲ ಶುಭಸೂಚಕಂ: **ಮಲ್ಲಿನಾಪು,** ೪. ೨೫)

**ಆಶಾಂಗನೆ** – ದಿಗಂಗನೆ (ಮಂಗಳಮನೆ ಪಾಡುತ್ತುಂ ಮಂಗಳಧಾರಿಣಿಯರಾಗಿ ಮುಂದಂ ನಡೆವಾಶಾಂಗನೆಯರಿಂದೆ: **ಆದಿಪು,** ೭. ೪೮)

**ಆಶಾವಧು** – ರುಚಕಾಚಳದ ಪಶ್ಚಿಮದಿಕ್ಕಿನ ಎಂಟು ಕೂಟಗಳ ದೇವಿಯರು (ದ್ವಿಗುಣ ಚತುಃಕೂಟಂಗಳೊಳಂ ಸಂಚರಿಸುವ ಇಳಾದೇವಿ ಸುರಾದೇವಿ ಪೃಥ್ವಿ ಪದ್ಮಾವತಿ ಕಾಂಚನೆ ನವಮಿಕೆ ಸೀತೆ ಭದ್ರೆ ಎಂಬ ಎಣ್ಬರುಂ ಆಶಾವಧೂವರರಂ: **ಆದಿಪು,** ೭. ೩ ವ)

**ಆಶ್ರವ** – ಸಪ್ತತತ್ವಗಳಲ್ಲಿ ಒಂದು ಪುಣ್ಯಪಾಪ ರೂಪವಾದ ಕರ್ಮವು ಜೀವನಲ್ಲಿ ಹರಿಯುವುದು (ಸಕಲಬದ್ಧಾಶ್ರವ ನಿರೋಧದಿನಯೋಗಿಕೇವಲಿ ಗುಣಸ್ಥಾನಮಂ ಪೊರ್ದಿ: **ಪಂಪರಾ,** ೧೬. ೭೯ ವ); ನೋಡಿ **'ಪಂಚಾಸ್ರವ'**

**ಆಸನ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು ಗುಣ, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ; ಎರಡು ಸೈನ್ಯಗಳು ಯುದ್ಧಕ್ಕೆ ಬಂದೂ ಮೇಲೆ ಬೀಳಲಾರದೆ ನಿಲ್ಲುವುದು ಆಸನ (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಳ್ಪುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೇಳ್ವುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹದ್ವಯಾವಸ್ಥಾನಂ ದ್ವೈಧೀಭಾವನಮದಕ್ಕುಂ: **ಚಾವುಂಡಜಯ,** ಪು. ೨೫೭)

**ಆಸನಕಂಪ** – ತೀರ್ಥಂಕರನ ಜೀವಿತದ ವಿಶೇಷ ಪ್ರಸಂಗಗಳಲ್ಲಿ ಆಗುವ ದೇವೇಂದ್ರನ ಪೀಠದ ಅಲುಗಾಟ (ವಾಸವನ ಆಸನಕಂಪದಿಂ ಆ ಸಮಯದೊಳು ಅವಧಿಯಂ ಪ್ರಯೋಗಿಸಿ ಬೋಧಾವಾಸಪ್ರಿಯನ ಉದಯಮನಱಿದು: **ಆದಿಪು,** ೭. ೪೧)

**ಆಸನ್ನಭವ್ಯ** – ಶೀಘ್ರದಲ್ಲಿಯೇ ಮನಃಪರಿಪಾಕವನ್ನು ಹೊಂದುವವನು (ಆತನಭವ್ಯನಲ್ಲಂ ಭವ್ಯನೇ, ಭವ್ಯನಾಗಿಯುಂ ಆಸನ್ನಭವ್ಯಂ: **ಆದಿಪು,** ೨. ೩೫ ವ)

**ಆಸನ್ನಭವ್ಯೆ** – ಆಸನ್ನಭವ್ಯತೆಯನ್ನು ಹೊಂದಿದವಳು (ಆಸನ್ನಭವ್ಯೆಯುಂ ಜಿನಶಾಸನದೀಪಿಕೆಯುಮೆನಿಸಿ: **ಅಜಿತಪು,** ೧. ೫೭)

**ಆಸಾತಪ್ರಬಂಧತ್ವ** – ದುಃಖವನ್ನುಂಟುಮಾಡುವ ಕರ್ಮಬಂಧ (ಆಸಾತಪ್ರಬಂಧತ್ವಂ ಅವಿಕಳತ್ವಂ ಪರಸೇವಕತ್ವಂ ... ಅಧರ್ಮಂ: **ಕರ್ಣನೇಮಿ,** ೧. ೮೦)

**ಆಸ್ರವ** – ಸಪ್ತತತ್ವಗಳಲ್ಲಿ ಒಂದು; ಪುಣ್ಯಪಾಪ ರೂಪವಾದ ಕರ್ಮವು ಜೀವದೊಳಕ್ಕೆ ಹರಿಯುವುದು (ಆಸ್ರವಂ ಎರಡು ತೆಱಂ ಪುಣ್ಯಾಸ್ರವಂ ಒಂದು ಅದಱ ವೈಪರೀತ್ಯಭವಂ ಪಾಪಾಸ್ರವಂ ಅಂತವಱೊಳ್ ಪುಣ್ಯಾಸ್ರವಂ ವಸ್ತುಸ್ವರೂಪಮಕ್ಕುಂ ತ್ರಿವಿಧಂ: **ಶಾಂತಿಪು,** ೧೨. ೪)

**ಆಸ್ರವಪದಾರ್ಥ** – ನವಪದಾರ್ಥಗಳಲ್ಲಿ ಒಂದು (ಜೀವಪದಾರ್ಥಮಜೀವಪದಾರ್ಥಂ ಆಸ್ರವಪದಾರ್ಥಂ ಸಂವರಪದಾರ್ಥಂ ನಿರ್ಜರಪದಾರ್ಥಂ ಬಂಧಪದಾರ್ಥಂ ಮೋಕ್ಷಪದಾರ್ಥಂ ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥ ಮುಂ; **ಸುಕುಮಾಚ,** ೩. ೩೯ ವ)

**ಆಹಾರಕ** – ಜೀವರುಗಳಿಗಿರುವ ಐದು ವಿಧವಾದ ಶರೀರಗಳಲ್ಲಿ ಒಂದು, ಆಹರಣವೆಂದರೆ ಗ್ರಹಣ: ಗ್ರಹಣ ಮಾಡುವ ಶರೀರ (ಅನುಕ್ರಮದಿಂ ಅಯ್ದು ಭೇದದಿನೌದಾರಿಕವೈಕ್ರಿಯಕಮಾಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ: **ಸುಕುಮಾಚ,** ೮. ೧೦)

**ಆಹಾರದಾನ** – ಸತ್ಪಾತ್ರರಿಗೆ ಆಹಾರವನ್ನು ನೀಡುವುದು (ಸುವ್ರತೆಯರ್ ಎಂಬ ಆರ್ಯಿಕೆಯರ್ಗೆ ಆಹಾರದಾನಮಂ ಮಾಡಿದೊಡೆ ಅವರುಂ ಉಪವಾಸ ಶ್ರಮದಿಂ ಛರ್ದಿಗೆಯ್ಯೆ: **ಶಾಂತೀಶ್ವಪು,** ೮. ೧೩೨ ವ)

**ಆಳೋಚಿಸು** – ಜೈನಗುರುವಿನ ಬಳಿ ತಪ್ಪೊಪ್ಪಿಗೆ ಮಾಡು (ಗುರುಗಳ್ಗೆ ತಮ್ಮುಕ್ಕೆವದಿಂ ತಪಂಬಟ್ಟುದನಾಳೋಚಿಸಿ ಪ್ರಾಯಶ್ಚಿತ್ತಂಗೊಂಡು: **ವಡ್ಡಾರಾ,** ಪು. ೬, ಸಾ ೨೬)

**ಆಱವಧಿ** – ಅನುಗಾಮಿ, ಅನನುಗಾಮಿ, ವರ್ಧಮಾನ, ಹೀಯಮಾನ, ಅವಸ್ಥಿತ ಮತ್ತು ಅನವಸ್ಥಿತ ಎಂಬ ಆರು ಬಗೆಯ ಅವಧಿಜ್ಞಾನಗಳು (ಪದಿನಾಲ್ಕು ಪೂರ್ವಂಗಳುಮಂ ಅಯ್ದು ಚೂಳಿಕೆಯುಮಂ ಆಱವಧಿಯುಮಂ ಪೆಸರ್ಗೊಂಡು: **ಆದಿಪು,** ೩. ೪೦ ವ)

**ಆಱುಂ ಕುಲಗಿರಿ** – ಹಿಮವ ಮಹಾಹಿಮವ ನಿಷಧ ನೀಲ ರುಗ್ಮಿ ಶಿಖರಿ ಎಂಬ ಆರು ವರ್ಷಧರಪರ್ವತಗಳು (ಇದು ಹೈಮಾಂದ್ರೀಂದ್ರಂ ಆಱುಂ ಕುಲಗಿರಿಗೆ ಮೊದಲ್: **ಆದಿಪು,** ೧೩. ೬೮)

**ಆಱುಂ ಬಲಂಗಳ್** – ಆನೆ ಕುದುರೆ ರಥ ಪದಾತಿ ದಿವಿಜ ಖೇಚರ ಸೇನೆಗಳು (ನೆಗಟ್ದೀ ಷಟ್ಖಂಡಭೂಮಂಡಲಮನನಿತುಮಂ ಗೆಲ್ದು ಅಖಂಡಪ್ರತಾಪಂ ನೆಗಟ್ವಂತೆ ಆಱುಂ ಬಲಂಗಳ್ವೆರಸು ಒದವಿದ ಸಂಗ್ರಾಮಸಂರಂಭದಿಂದಂ: **ಆದಿಪು,** ೧೪. ೮೨)

**ಆಱುಮಾಸ** – ಆರು ತಿಂಗಳು (ಬಗೆಗೊಂಡು ಅಭೀತಮನಂ ಅರ್ಚಿಸಿ ಬಂದಿಸಿ ಚೈತ್ಯಗೇಹಮುಳ್ಳನಿತುಮಂ ಆಱುಮಾಸಂ ಅದಱಿಂ ಬಳಿಕ ಅಚ್ಯುತಕಲ್ಪದೊಳ್: **ಆದಿಪು,** ೩. ೮)

## ಇ

**ಇಂಗಿಣೀಮರಣ** – ಹತ್ತೊಂಬತ್ತು ಬಗೆಯ ಮರಣಗಳಲ್ಲಿ ಒಂದು; ಯತಿಯು ಸಂಗವನ್ನು ತೊರೆದು ಒಂಟಿಯಾಗಿದ್ದು, ಆಹಾರವನ್ನು ಬಿಟ್ಟು, ಉಪಸರ್ಗದಲ್ಲಿ ಉಪಚಾರ ಬಿಟ್ಟು ಸಮತೆಯಿಂದ ಹೊಂದುವ ಮರಣ (ಕ್ಷಮೆಯಂ ಭಾವಿಸಿ ಚತುರ್ವಿಧಮಪ್ಪ ಆಹಾರ ಶರೀರಮುಮಂ ತೊಱೆದು ಇಂಗಿಣೀಮರಣದಿಂ ಶುಭಪರಿಣಾಮದೊಳ್ ಕೂಡಿ: **ವಡ್ಡಾರಾ,** ಪು ೧೯೨, ಸಾ ೧೦)

**ಇಂದುಗತಿ** – ಸರ್ವಸಮಾನತ್ವದಿಂದ ಚರಿಗೆಗೆ ಹೋಗುವುದು (ಪಾರಣೆಗೆ ಮಱು ದಿನದೊಳ್ ಇಂದುಗತಿಯಿಂ ಆ ಯತಿಪರ್ ಚರಿಗೆಗೆ ವರೆ: **ಕರ್ಣನೇಮಿ,** ೬. ೪ ವ)

**ಇಂದ್ರ** – ಒಂದೊಂದೂ ಕಲ್ಪದ ಒಡೆಯ (ಇಂದ್ರರ್ ಮಾಟ್ಪಿ ಇಂದ್ರಧ್ವಜಮುಂ ಸಮಸ್ತಭವ್ಯಜನನಿರ್ವರ್ತ್ಯಮಾನಾಷ್ಟಾಹ್ನಿಕಮುಂ: **ಆದಿಪು,** ೧೫. ೧೩ ವ)

**ಇಂದ್ರಕ** – ನರಕಬಿಲಗಳಲ್ಲಿ ಒಂದು ಬಗೆ (ಆ ಬಿಲಂಗಳುಂ ಇಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಂಗಳೆಂದು ಮೂಱುತೆಱಂ: **ಆದಿಪು,** ೫. ೮೩ ವ); ಸೌಧರ್ಮೇಂದ್ರ ಮುಂತಾದವರ ವಿಮಾನಗಳಲ್ಲಿ ಒಂದು ಬಗೆ (ಅಲ್ಲಿ ಸ್ವರ್ಗಮೆಂಬಿನಂ ಸೌಧರ್ಮೇಶಾನಾದಿಗಳ ವರವಿಮಾನಂಗಳ್ ಇಂದ್ರಕ ಶ್ರೇಣಿಬದ್ಧ ಪ್ರಕೀರ್ಣತೆ ಗಳೆಂದು ಮೂದೆಱಂ: **ಚಂದ್ರಪ್ರಪು,** ೩. ೩೨ ವ)

**ಇಂದ್ರಕೇತು** – ಮಹಾಮಂಡಲೇಶ್ವರರ ಜಿನಪೂಜೆ (ಮಹಾಮಂಡಳೇಶ್ವರರ್ ಮಾಟ್ಪಿ ಇಂದ್ರಕೇತುವೆಂಬ ಪೂಜೆಯುಂ: **ಸುಕುಮಾಚ,** ೬. ೨೫ ವ)

**ಇಂದ್ರತ್ಯಾಗ** – ಅಧಿಕಾರತ್ಯಾಗ; ಪದವಿತ್ಯಾಗ; ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ದಾನಸುಖೋದಯ ಇಂದ್ರತ್ಯಾಗ ಅವತಾರಹಿರಣ್ಯಗರ್ಭೋತ್ತ ... ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಇಂದ್ರತ್ಯಾಗಕ್ರಿಯೆ** – ಸಾಮ್ರಾಜ್ಯವನ್ನು ತೊರೆಯುವುದು (ನಿಜಾಯುಷ್ಯಾವಸಾನದೊಳ್ ಸ್ವರ್ಗಾವತರಣಮನಱಿದು ದೇವರ್ಕಳಂತಃಪುರಂ ವಲ್ಲಭೆಯರುಮಂ ಕರೆದೆನ್ನೀ ಪರೋಕ್ಷದೊಳೆನ್ನ ಪದವಿಯೊಳ್ ನಿಂದಾತಂಗೆ ಬೆಸಕೆಯ್ದು ಬಾಳೆಮೆಂದವರ ಸಾಕ್ಷಿಯೊಳ್ ಸಾಮ್ರಾಜ್ಯಮಂ ತೊಱೆವುದಿಂದ್ರತ್ಯಾಗಕ್ರಿಯೆ: **ಚಾವುಂಡಜಯ,** ಪು ೧೮೫)

**ಇಂದ್ರಧ್ವಜ** – ಇಂದ್ರಾದಿಗಳು ಮಾಡುವ ಜಿನಪೂಜೆ (ಇಂದ್ರರ್ ಮಾಟ್ಪಿ ಇಂದ್ರಧ್ವಜಮುಮಂ: **ಆದಿಪು,** ೧೫. ೧೩ ವ)

**ಇಂದ್ರಾಂಗನೆ** – ಇಂದ್ರನ ಹೆಂಡತಿ, ಶಚೀದೇವಿ (ಹೇಮಪದ್ಮಮೆ ಗೆತ್ತಿಂದ್ರಾಂಗನೆ ನೋಡಿದಳಂಬಿಕೆಯಂಗೋಪಾಂತದ ಜಿನೇಂದ್ರದಾರಕ ರವಿಯಂ: **ಶಾಂತಿಪು,** ೧೦. ೬)

**ಇಂದ್ರಾಭಿಷೇಕ** – ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು, (ಇಂದ್ರಾಭಿಷೇಕ ಗುರುಪೂಜೋಪಲಂಭನ ಯೌವರಾಜ್ಯ ... ಎಂಬ ಅಯ್ವತ್ತಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಇಂದ್ರಾಭಿಷೇಕಕ್ರಿಯೆ** – ದೇವತೆಗಳಿಂದ ಪೂಜೆಗೊಳ್ಳುವುದು (ಅಂತಲ್ಲಿ ಪುಟ್ಟಿ ದಿವ್ಯಗೀತವಾದ್ಯನೃತ್ಯಂಗಳೆಸೆವಿನಮಭಿಷಿಕ್ತನಾಗಿದಿವ್ಯಕಿರೀಟಮಂ ತಾಳ್ದಿ ದಿವ್ಯವಿಷ್ವರಾರೂಢಂ ದೇವರ್ಕಳಿಂ ಪೂಜೆಯಿನೆಯ್ದುವುದಿಂದ್ರಾಭಿಷೇಕಕ್ರಿಯೆ: **ಚಾವುಂಡಜಯ,** ಪು ೧೮೫)

**ಇಂದ್ರೋಪಪಾದ** – ಒಂದು ಗರ್ಭಾನ್ವಯಕ್ರಿಯೆ, ಅವಧಿಜ್ಞಾನವನ್ನು ಹೊಂದಿ ತಾನೇ ಇಂದ್ರನೆಂಬ ಭಾವನೆಯುನ್ನು ತಾಳುವುದು (ಇಂದ್ರೋಪಪಾದ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಇಂದ್ರೋಪಪಾತಕ್ರಿಯೆ** – ಒಂದು ಗರ್ಭಾನ್ವಯಕ್ರಿಯೆ, ಅವಧಿಜ್ಞಾನದಿಂದ ತನ್ನ ಸ್ವರೂಪವನ್ನು ಅರಿಯುವುದು (ಪರಿಪೂರ್ಣ ಯೌವನನುಂ ಪರಮಾನಂದ ಪರೀತನುಂ ದಿವ್ಯತೇಜೋವಿರಾಜಿತನುಂ ಅಣಿಮಾದ್ಯಷ್ಟಗುಣ ಸಂಪನ್ನನುಂ ಸಹಜಾಂಬರ ಮಾಲಾಮಣಿಭೂಷಣಭೂಷಿತನುಂ ಆಗಿ ನಿಜಾವಧಿಯಿಂ ತನ್ನಂದಮನಱಿವುದು ಇಂದ್ರೋಪಪಾತಕ್ರಿಯೆ: **ಚಾವುಂಡಜಯ,** ಪು. ೧೮೫)

**ಇಕ್ಷ್ವಾಕುಕುಳತಿಳಕ** – ಸೂರ್ಯವಂಶದ ಆದಿನಾಥನು ಕಬ್ಬಿನ ರಸವನ್ನು ತೆಗೆದು ಸಂಗ್ರಹಿಸುವುದನ್ನು ಪ್ರಜೆಗಳಿಗೆ ತೋರಿಸಿದ್ದರಿಂದ ಇಕ್ಷ್ವಾಕುವಂಶತಿಳಕ ಎನ್ನಿಸಿಕೊಂಡ (ಅಂತಾದಿದೇವನಿಕ್ಷುರಸಸಂಗ್ರಹಣಸಮುಯಾಹೂತ ಭೂತಳನಪ್ಪುದಿಂದಂ ಇಕ್ಷ್ವಾಕುಕುಳತಿಳಕನುಂ: **ಆದಿಪು,** ೮. ೭೫ ವ)

**ಇಚ್ಛಾಗತ** – ಇಷ್ಟದಂತೆ ನಡೆಯುವವನು, ಹಿಮ್ಮಡಿಯ ಬದಿ ನಾಲ್ಕು ಬೆರಳಷ್ಟು ಮತ್ತು ಉಂಗುಷ್ಠದ ಬದಿ ಒಂದು ಗೇಣಿನಷ್ಟು ಎರಡು ಕಾಲುಗಳ ನಡುವೆ ಅವಕಾಶವಿರುವ ಹಾಗೆ ನಿಲ್ಲುವ ಒಂದು ಭಂಗಿ (ಮಡದೆಡೆ ನಾಲ್ವೆರಲ್ ಅಂಗುಟದೆಡೆಯೊಳ್ ಗೇಣಾಗೆ ನಿಲ್ವುದಿಚ್ಛಾಗತಂ ಅಂದೆಡೆಯೊಳ್ ವಾಚಂಯಮತೆಯೊಳ್ ಒಡಂಬಡಂ ಪಡೆದು ನಿಂದನಾದಿಬ್ರಹ್ಮಂ: **ಆದಿಪು,** ೯. ೮೪)

**ಇಜ್ಯೆ** – ಆರ್ಯ ಷಟ್ಕರ್ಮಗಳಲ್ಲಿ ಒಂದು, ಅರ್ಹಂತಪೂಜೆ (ಇಜ್ಯೆಯುಂ ವಾರ್ತೆಯುಂ ದತ್ತಿಯುಂ ಸ್ವಾಧ್ಯಾಯಮುಂ ಸಂಯಮಮುಂ ತಪಮುಮೆಂಬೀ ಆರ್ಯಷಟ್ಕರ್ಮಂಗಳುಂ ಶ್ರಾವಕಜನಕ್ಕೆ ಕುಲಧರ್ಮಂಗಳ್: **ಚಾವುಂಡಜಯ,** ಪು

**ಇಪ್ಪತ್ತೈದು ದೋಷ** – ನೋಡಿ, ಪಂಚವಿಂಶತಿಮಳ (ಶಂಕಾದ್ಯಷ್ಟಮಲಂಗಳುಂ ಎಂಟುಮದಂಗಳುಂ ಮೂಱು ಮೂಢಮುಂ ಆಱು ಅನಾಯತನ ಸೇವೆಗಳುಂ

ಎಂದಿಂತು ಇಪ್ಪತ್ತೈದು ದೋಷಂಗಳಿದಗಲ್ದ ಸಮ್ಯಕ್ತ್ವಮನೊಡೆಯನಾಗಿ: **ವಡ್ಡಾರಾ,** ಪು ೬, ಸಾ ೨೨)

**ಇಷ್ಟವಿಯೋಗ** – ಒಂದು ಆರ್ತಧ್ಯಾನ, ಪ್ರೀತಿಪಾತ್ರರನ್ನೋ ಪ್ರಿಯವಾದುದನ್ನೋ ಕಳೆದುಕೊಳ್ಳುವುದು (ಸಮನಿಸಿದನಿಷ್ಟಸಂಯೋಗಮನನಿಷ್ಟವಿಯೋಗಮಂ ಚತುರ್ಗತಿಗಳೊಳಂ ಭ್ರಮಿಯಿಸಿ ಕೈಕೊಳ್ಗುಂ ತಾನೆ ಮತ್ತೆ ನೆರಮಿಲ್ಲಂ ದೇಹಿಗಿಂತೇತಕ್ಕುಂ: **ಮಲ್ಲಿನಾಪು,** ೧೪. ೪೮)

## ಈ

**ಈರ್ಯಾಗೋಚರಂ** – ನಡೆಯುವಾಗ ಪ್ರಾಣಿಗಳಿಗೆ ನೋವಾಗದಂತೆ ನೋಡಿ ಕೊಳ್ಳುವುದು (ಕಯ್ಯಂ ಸುರೇಶ್ವರಶೈಳಂ ತಳರ್ವಂತೆವೊಲ್ ತಳರ್ದಂ ಈರ್ಯಾಗೋಚರಂ ಶುದ್ಧಿ ತಳ್ತಿರೆ ತನ್ನೊಳ್ ಧರೆಯಂ ಪದಾಂಬುಜಂಗಳ್ ನೀರಜಂ ಮಾಟ್ಪಿನಂ: **ಆದಿಪು,** ೯. ೧೨೪)

**ಈರ್ಯಾಪತ್ತಿ** – ನೆಲವನ್ನು ನಾಲ್ಕು ಮೊಳಗಳಷ್ಟು ಮುಂದೆ ನೋಡುತ್ತ ನಡೆಯುತ್ತ ಆಗಬಹುದಾದ ಜೀವಹಿಂಸೆಯನ್ನು ತಡೆಯುವುದು (ಕಾಲಂ ಕರ್ಚಿ ಒಳಗಂ ಪೊಕ್ಕು ಈರ್ಯಾಪತ್ತಿಯಂ ಬಿಡಿಸಿ ಗೋಚಾರನಿಯಮಂಗೆಯ್ದುದಂ: **ವಡ್ಡಾರಾ,** ಪು ೭೯, ಸಾ ೧)

**ಈರ್ಯಾಪಥಶುದ್ಧಿ** – ಈರ್ಯಾಪತ್ತಿ (ದಿಗವಲೋಕನಾದಿ ದೋಷವಿರಹಿತನುಮಪ್ಪ ಈರ್ಯಾಪಥಶುದ್ಧಿಯೊಳ್ ನೆಱೆದು ಯುಗಾಂತರದೃಷ್ಟಿಯಾಗಿ ಚರ್ಯಾಮಾರ್ಗದಿಂ: **ಅಜಿತಪು,** ೭. ೧ ವ)

**ಈರ್ಯಾಪದಶುದ್ಧಿ** – ಪ್ರಯಾಣ ಮಾಡುವಾಗ ಮುನಿಗಳು ಪ್ರಾಣಿಹಿಂಸೆಯಾಗದಂತೆ ಗಮನಿಸಬೇಕಾದ ವಿವರಗಳು (ನಾನಾವಿಧಾಯನಾಶ್ರಯಕೃತಾವಧಾನಜನಿತ ಪ್ರಯತ್ನಪರಿಹೃತ ಪ್ರಾಣಿಪೀಡೆಯುಂ ದ್ರುತವಿಲಂಬಿತ ಸಂಭ್ರಾಂತಾವಿಸ್ಮಿತ ಲೀಲಾವಿಕಾರಾದಿಗವಲೋಕಾದಿದೋಷವಿರಹಿತನುಮಪ್ಪ ಈರ್ಯಾಪದ ಶುದ್ಧಿಯೋಳ್ ನೆಱೆದು: **ಅಜಿತಪು,** ೭. ೧ ವ)

**ಈಶಾನ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಈಶಾನಕಲ್ಪ** – ಹದಿನಾರು ಸ್ವರ್ಗಗಳಲ್ಲಿ ಎರಡನೆಯದು (ಅಂತಾ ದೇವಂ ಈಶಾನಕಲ್ಪದಿಂದ ಅತಿಪ್ರೀತಿವರ್ಧನಕರಂ ಎಂಬ ಮದ್ವಿಮಾನಮಂ ಪ್ರೀತಿವರ್ಧನಕರಮಾಗೇಜೆಸಿಕೊಂಡು ಉಯ್ದು: **ಆದಿಪು,** ೩. ೫೮ ವ)

**ಈಶಾನೇಂದ್ರ** – ಈಶಾನಕಲ್ಪದ ಒಡೆಯ (ಚಂದ್ರಾಕೃತಿಯ ಕೊಡೆಯುಂ ಅತಿಶೋಭಾಕರಮುಂ ಪಿಡಿದಂ ಆಗಳ್ ಈಶಾನೇಂದ್ರಂ: **ಕರ್ಣನೇಮಿ,** ೮. ೧೧೯)

**ಈಷತ್ಪ್ರಾಗ್ಭಾರ** – ಅಷ್ಟಮಭೂಮಿ (ಈಷತ್ ಪ್ರಾಗ್ಭರಮೆಂಬ ಎಂಟನೆಯ ನೆಲನುಮಂ ದಾಂಟಿ ತೀರ್ಥೇಶ್ವರಂ: **ಶಾಂತಿಪು,** ೧೨. ೫೦)

# ಉ

**ಉಚ್ಛ್ವಾಸ** – ಕಾಲವನ್ನು ಅಳೆಯುವ ಒಂದು ಪ್ರಮಾಣ (ಅದು ಸಮ ಯಾವಳಿಕೋಚ್ಛ್ವಾಸಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸರ್ತ್ವಯ ಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬. ೪೮ ವ)

**ಉತ್ತಮತಪ** – ಶ್ರೇಷ್ಠ ತಪಸ್ಸು (ಉತ್ತಮ ತಪಂಗಳಿಂದತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ವರ್ಥತೆಯಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ: **ಆದಿಪು,** ೧. ೫೩)

**ಉತ್ತಮದಾನ** – ಶ್ರೇಷ್ಠ ದಾನ (ಪಂಚಾಶ್ಚರ್ಯಂಗಳ್ ಸುರರಿಂಚರದೊಡನೊಡ ನೆಗಬ್ದುವುತ್ತಮದಾನಂ ಸಂಚಿತ ಸುಕೃತಂಗಲ್ಲದಸಂಚಿತಸುಕೃತಂಗೆ ಬಯಸೆ ಸಮನಿಸಿದಪುದೇ: **ಶಾಂತಿಪು,** ೯. ೨೨)

**ಉತ್ತಮಪಾತ್ರ** – ದಾನವನ್ನು ಪಡೆಯುವವರಲ್ಲಿನ ಒಂದು ಬಗೆ, ಶ್ರೇಷ್ಠನಾದವನು (ದರ್ಶನವಿಶುದ್ಧನುಂ ಶೀಲಸಂಪನ್ನನುಂ ಅಪ್ಪ ಸಂಯತಂ ಉತ್ತಮಪಾತ್ರಂ: **ಆದಿಪು,** ೧೦. ೯ ವ)

**ಉತ್ತಮ ಭೋಗಭೂಮಿ** – ಉತ್ತಮ, ಮಧ್ಯಮ ಮತ್ತು ಜಘನ್ಯ ಎಂಬ ಮೂರು ಭೋಗಭೂಮಿಗಳಲ್ಲಿ ಶ್ರೇಷ್ಠವಾದದ್ದು (ಪುಣ್ಯಫಲದಿಂದಮೀ ಜಂಬೂದ್ವೀಪದ ಮಂದರಮಹೀಧರದುತ್ತರ ದಿಗ್ಭಾಗದೊಳಿರ್ದುತ್ತರಕುರುವೆಂಬುತ್ತಮ ಭೋಗಭೂಮಿಯೆ ಜನ್ಮಭೂಮಿಯಾದುದು; **ಆದಿಪು,** ೫. ೨೭ ವ)

**ಉತ್ತರಕುರು** – ವಿದೇಹಕ್ಷೇತ್ರದಲ್ಲಿ ಮೇರುಪರ್ವತದ ಉತ್ತರದ ಭೋಗಭೂಮಿ (ನೀನೆನ್ನಂ ನಿನ್ನ ಗಗನಗಾಮಿನೀವಿದ್ಯೆಯಿಂ ಉತ್ತರಕುರುವನೆಯ್ದಿಸು: **ಆದಿಪು,** ೨. ೧೪ ವ)

**ಉತ್ತರಗುಣ** – ದ್ವಾದಶ ತಪಸ್ಸು, ಷಡಾವಶ್ಯಕ, ದಶಧರ್ಮ, ಪಂಚಾಚಾರ, ತ್ರಿಗುಪ್ತಿ ಎಂಬ ಮೂಲೋತ್ತರ ಗುಣಗಳು; ಈ ಮೂಲಗುಣಗಳ ಆಚರಣೆಯನ್ನು ತಳಹದಿಯಾಗಿ ಪಡೆದ ಬಳಿಕ ಶ್ರಾವಕರು ಮತ್ತು ಮುನಿಗಳು ಆಚರಿಸಬೇಕಾದ ವ್ರತಾದಿ ಆಚರಣೆಗಳು (ಮತ್ತಮಿವು ಮೊದಲಾಗಿರ್ಪತ್ತೆಂಟು ಮೂಲ ಗುಣಂಗಳೊಳಮುತ್ತರ ಗುಣಂಗಳೊಳಮುತ್ತರೋತ್ತರಂ ನೆಗಬ್ದು; **ಆದಿಪು,**

೬. ೨೮ ವ)

**ಉತ್ತರತಪ** – ಹನ್ನೆರಡು ವಿಧವಾದ ತಪಸ್ಸುಗಳಲ್ಲಿ ಒಂದು (ಮತ್ತಂ ಉತ್ತರತಪದೊಳ್ ಉತ್ತರೋತ್ತರಂ ನೆಗೞ್ದು: **ಸುಕುಮಾಚ,** ೪. ೧೪ ವ)

**ಉತ್ತರಾರ್ಧ** – ಒಂದು ಪರ್ವತದ ಹೆಸರು (ವಿಜಯಾರ್ಧಜಯವಿದೆನಗಾವ ಜಯಂ ನೆಗೞ್ದ ಉತ್ತರಾರ್ಧಜಯಮೆ ಜಯಂ: **ಆದಿಪು,** ೧೩. ೧೯)

**ಉತ್ತಾನಶಯಿತ** – ಅಂಗತ್ತಲಾಗಿ ಮಲಗುವುದು (ಲಲಿತ ಉತ್ತಾನಶಯಿತ ದರಹಸಿತತರಂಗಿತ ಗತಿಸ್ಖಲಿತ ಮುಗ್ಧಜಲ್ಪಿತಾದಿ ಬಾಲ್ಯವಿಳಾಸಂಗಳಿಂದಂ: **ಆದಿಪು,** ೮. ೫೦ ವ)

**ಉತ್ತಾನಶಯ್ಯೆ** – ಉತ್ತಾನಶಯಿತ (ನಿಜಾಂಗುಳಿಜನಿತ ರಸಾಯನಾಸ್ವಾದದೊಳಂ ಉತ್ತಾನಶಯ್ಯೆಯೊಳಂ ಕಟಿಪಿ: **ಆದಿಪು,** ೫. ೪೧ ವ)

**ಉತ್ಪತ್ತಿಸ್ಥಾನ** – [ನರಕಗಳಲ್ಲಿ] ಹುಟ್ಟುವ ಸ್ಥಳ (ಅವಱ ಮೇಗಣ ಅಟ್ಟುಗಳೊಳ್ ಇಟ್ಟ ಜೇನಪುಟ್ಟಿಗಳನನುಕರಿಸುವ ಅತಿರೌದ್ರ ಬೀಭತ್ಸ ಕುತ್ಸಿತ ಉತ್ಪತ್ತಿ ಸ್ಥಾನಂಗಳೊಳ್: **ಆದಿಪು,** ೫. ೮೩ ವ)

**ಉತ್ಪತ್ಸ್ಯಮಾನ** – ಜನಿಸಲಿರುವ (ಭೂತಳೋದ್ದೇಶದೊಳ್ ಉತ್ಪತ್ಸ್ಯಮಾನ ಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು: **ಆದಿಪು,** ೬. ೮೮ ವ)

**ಉತ್ಸರ್ಗ** – ಆರು ಅಭ್ಯಂತರ ತಪಸ್ಸುಗಳಾದ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನ (ಉತ್ಸರ್ಗ) ವ್ಯುತ್ಸರ್ಗಗಳಲ್ಲಿ ಒಂದು (ನಡೆವ ನುಡಿವ ಉಣ್ಬ ಕೋಳ್ವ ಇಡುವ ಎಡೆಯೊಳಂ ಉತ್ಸರ್ಗದೆಡೆಯೊಳಂ ... ಪುಗುವ ಪಾಪರಜಮಂ ತೆಗೆಗುಂ: **ಜೀವಸಂ,** ೯. ೩)

**ಉತ್ಸರ್ಪಿಣಿ** – ಮನುಷ್ಯರ ಭೋಗ ಆಯುಸ್ಸು ಮುಂತಾದವು ಹೆಚ್ಚುವ ಕಾಲ (ಶರೀರ ಬಳ ಆಯುಃ ದೇಹಪ್ರಮಾಣೋಪಚಯ ಅಪಚಯಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ); ಇದರಲ್ಲಿ ಆರು ವಿಭಾಗಗಳು (ಉತ್ಸರ್ಪಿಣಿಯ ಕಾಲಮುಮತಿದುಷ್ಷಮೆಯುಂ ದುಷ್ಷಮೆಯುಂ ದುಷ್ಷಮಸುಷಮೆಯುಂ ಸುಷಮದುಷ್ಷಮೆಯುಂ ಸುಷಮೆಯುಂ ಸುಷಮಸುಷಮೆಯುಮೆಂದಿಂತು ಷಟ್ಪ್ರಕಾರಮಕ್ಕುಂ: **ಅಜಿತಪು,** ೩. ೧೫ ವ)

**ಉತ್ಸಾಹಶಕ್ತಿ** – ನಯಶಾಸ್ತ್ರದ ಒಂದು ವಿಭಾಗ, ಇದರಲ್ಲಿ ಉತ್ಸಾಹ, ಮಂತ್ರಿ ಮತ್ತು ಪ್ರಭು ಎಂದು ಮೂರು ಬಗೆ, ಪರಾಕ್ರಮದಿಂದ ಕೂಡಿದ ಬಲ (ಶಕ್ತಿ ಯೆಂಬುದುತ್ಸಾಹ ಮಂತ್ರಿ ಪ್ರಭುವಿಕಲ್ಪದಿಂ ತ್ರಿವಿಧಮಕ್ಕುಂ; ಅಲ್ಲಿ ವಿಕ್ರಮಬಳಮುತ್ಸಾಹಶಕ್ತಿ, ವಿವಿಧ ವಸ್ತುವಿಚಾರಣಾಸಾಮರ್ಥ್ಯಂ ಮಂತ್ರಶಕ್ತಿ, ಕೋಶದಂಡ ಸ್ವೀಕರಣಂ ಪ್ರಭುಶಕ್ತಿಯಕ್ಕುಂ: **ಚಾವುಂಡಜಯ,** ಪು. ೨೫೬)

**ಉದ್ದಿಷ್ಟವಿರತ** – ಶ್ರಾವಕನ ಅಂತಿಮ ಅಂದರೆ ಹನ್ನೊಂದನೆಯ ನೆಲೆ (ತನ್ನಂ ಕುಱುತ್ತು ಮಾಡಿರ್ದನ್ನಮನೌಷಧಮನೊಲ್ಲನುತ್ಸವದಿಂದಂ ಮುನ್ನಿನ ಗುಣದೊಳ್ಕೂಡಿರ್ಪನ್ನೆಱೆಯುದ್ದಿಷ್ಟವಿರತ ಪನ್ನೊಂದನೆಯಂ: **ಧರ್ಮಾಮೃತ,** ೫. ೯೯)

**ಉದ್ದಿಷ್ಟದೇಶವಿರತ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಕೊನೆಯ ವರ್ಗಕ್ಕೆ ಸೇರಿದವನು (ವಿಶದಯಶೋನಿಳಯಂ ವಿಮಳಶೀಳಸಂಪನ್ನನುಚಿತಭೈಕ್ಷಾನೀಕಂ ನಿಶಿತಮತಿಯುಕ್ತನೇಕಾದಶಸ್ಥನುದ್ದಿಷ್ಟದೇಶವಿರತಂ: **ಸುಕುಮಾಚ,** ೬. ೩೬)

**ಉಪಗೂಹನ** – ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಒಂದು (ಉಪಗೂಹನಮುಂ ಸದ್ಧರ್ಮಪಥಚ್ಯುತಭವ್ಯಸಂಹತಿಸ್ಥಾಪನಮುಂ ವಿಪುಳಗುಣವತ್ಸಳ ಮುಮುಪಗತಮಳ ಜೈನಶಾಸನೋದ್ಭಾಸಮುಂ: **ಆದಿಪು.** ೫. ೫೮)

**ಉಪದೇಶರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಉಪದೇಶರುಚಿಯೆಂಬುದು ತೀರ್ಥಕರ ಹಲಧರಾದಿ ಕಾರಣಪುರುಷರ ಶುಭಚರಿತೋಪದೇಶಜನಿತ ಶ್ರದ್ಧಾನಂ: **ಚಾವುಂಡಜಯ,** ಪು. ೩೩೬)

**ಉಪನಯನ** – ಜೈನಾಗಮಗಳ ಅಭ್ಯಾಸಕ್ಕೆ ಹುಡುಗನನ್ನು ಗುರುವಿನ ಬಳಿ ಕಳಿಸುವ ಸಂಸ್ಕಾರ (ನಿಜಾನ್ವಯಲೀಲಾಲಲಾಮಂಗೆ ಲೋಕಯಾತ್ರಾಪ್ರವರ್ತನ ನಿಮಿತ್ತಮಾದಿಬ್ರಹ್ಮನನ್ನಪ್ರಾಶನ ಚೌಲೋಪನಯನಾದಿ ಕ್ರಿಯೆಗಳನನುಕ್ರಮದಿಂ ತಾನೆ ಮಾಡಿ: **ಆದಿಪು,** ೮. ೪೧ ವ); ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಕೇಶಾವಾಪ ಲಿಪಿಸಂಖ್ಯಾನ ಸಂಗ್ರಹೋಪನಯನ ಬ್ರತಚರ್ಯಾವ್ರತಾವತರಣ ವಿವಾಹವರ್ಣಲಾಭ ಕುಲಚರ್ಯಾ ... ತ್ಯಾಗಾಗ್ರನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು.,** ೧೫. ೧೪ ವ)

**ಉಪನಯನ ಬ್ರಹ್ಮಚಾರಿ** – ಬ್ರಹ್ಮಚಾರಿಯ ಐದು ಪ್ರಭೇದಗಳಲ್ಲಿ ಒಂದು, ಯಜ್ಞೋಪವೀತಧಾರಿಯಾಗಿ ಆಗಮಾಭ್ಯಾಸದಲ್ಲಿ ತೊಡಗುವವನು (ಉಪನಯನ ಬ್ರಹ್ಮಚಾರಿಯೆಂಬೊಂ ಯಜ್ಞೋಪವೀತಧಾರಿಯಾಗಿ ಸಮುಸ್ತಾಗಮ ಗೃಹಾನುಷ್ಠಾನದೊಳ್ ನೆಗಟ್ಬೊಂ: **ಚಾವುಂಡಜಯ,** ಪು ೧೯೩)

**ಉಪನೀತಿಕ್ರಿಯೆ**– ಉಪನಯನ ವಿಧಿ (ಗರ್ಭಾಷ್ಟಮವರುಷದೊಳರ್ಹತ್ಪೂಜೆಯಂ ಮಾಡಿ ಗುರುಸಾಕ್ಷಿಯೊಳ್ ವ್ರತಾರ್ಪಣಪೂರ್ವಕಂ ಮುಂಜಿಗಟ್ಟು ತಲೆಗಿಱಿದು ಚೆಂಡಿಕೆಯನಿಱಿಸಿ ಕೌಪೀನಸಹಿತಂ ಧವಳವಸ್ತ್ರಮನುಡಿಸಿ ವ್ರತಚಿಹ್ನಂಗಳೆಸೆಯೆ ಬ್ರಹ್ಮಚಾರಿವೆಸರಾಗೆ ಭಿಕ್ಷಾವೃತ್ತಿಯೊಳಧಿಕ ವಿಭವಮಪ್ಪರಸನ ಮನೆಯೊಳೊಕ್ಕಂತಃ ಪುರದೊಳಗೆ ಪೋಗಿ ಪಾತ್ರೆಯೊಳ್ ಪಡೆದುದನಗ್ರಮಂ ದೇವರ್ಗೆ ಚರುಗೆದೋಱಿ ಮಿಕ್ಕಾಹಾರಮಂ ಕೊಳ್ವುದು ಉಪನೀತಿಕ್ರಿಯೆ: **ಚಾವುಂಡಜಯ,** ಪು. ೧೮೨)

**ಉಪಪಾದಜ** – ಉಪಪಾದವೆಂದರೆ ಗರ್ಭವಾಸವಿಲ್ಲದೆ ಇದ್ದಕ್ಕಿದ್ದಂತೆ ಹುಟ್ಟುವುದು; ಉಪಪಾದಕಲ್ಪದಲ್ಲಿ ಜನಿಸಿದವನು (ಮಾತೇಂ ಜರಾಯುಜಾಂಡಜಪೋತಂಗಳ್ ಗರ್ಭಸಂಭವಂ ದ್ವೌನಿರಯೋದ್ಭೂತಮುಪಪಾದಜಂ ವಿಖ್ಯಾತಂ ಸಮ್ಮೂರ್ಛಿತಂ ಗಳುಟಿದುವಶೇಷಂ: **ಸುಕುಮಾಚ,** ೮. ೯)

**ಉಪಪಾದಜನ್ಮ** – ಗರ್ಭವಾಸವಿಲ್ಲದೆ ಇದ್ದಕ್ಕಿದ್ದಂತೆ ಹುಟ್ಟುವುದು (ನಾಲ್ಕುಂ ಪಾಸಿನ ಪೊರೆಯೊಳುಪಪಾದಜನ್ಮದಿಂ ಮೂವತ್ತಾಱುಸಾಗರೋಪಮಕಾಲಂಬರಂ: **ಧರ್ಮಬಾಹು,** ೫. ೮೮ ವ)

**ಉಪಪಾದತಳ್ಪತಳ** – ಕಲ್ಪದಲ್ಲಿ ದೇವತೆಗಳು ಹುಟ್ಟುವ ಹಾಸಿಗೆ (ಶ್ರೀಪ್ರಭವ ವಿಮಾನದೊಳ್ ಉಪಪಾದತಳ್ಪತಳದ ಪೊರೆಯೊಳಂ ಜೈನಧರ್ಮಮಂ ಪತ್ತುವಿಡದೆ ನಡೆದು ಕಡೆಯೊಳಯ್ದನೆಯ ಕಲ್ಪದುಪಾತತಲ್ಪದೊಳ್ ದೇವನಾದೈ: **ಪಂಪರಾ,** ೬. ೫೭ ವ)

**ಉಪಪಾದಶಯನ** – ಉಪಪಾದತಳ್ಪತಳ (ಅದಱ ಪರಾರ್ಥ್ಯರತ್ನರಚನಾವಿಚಿತ್ರ ಉಪಪಾದಶಯನದೊಳ್ ಅಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು: **ಆದಿಪು,** ೬. ೩೭ ವ)

**ಉಪಯೋಗತ್ವ** – ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯ ಉಪಯೋಗತ್ವಮೆಂಬ ಎಂಟುಂಬೆರಸು ... ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆ ಗಳುಮಂ: **ಆದಿಪು** ೧೫.. ೧೬ ವ)

**ಉಪಶಾಂತಗುಣಸ್ಥಾನ** – ಕರ್ಮಗಳ ಉದಯಾದಿ ಅವಸ್ಥೆಗಳಲ್ಲುಂಟಾಗುವ ಆತ್ಮ ಪರಿಣಾಮವೇ ಗುಣಸ್ಥಾನ, ಇವುಗಳಲ್ಲಿನ ಹದಿನಾಲ್ಕು ನೆಲೆಗಳಲ್ಲಿ ಇದು ಹನ್ನೊಂದನೆಯದು (ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತಂ ಉಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು: **ಆದಿಪು,** ೬. ೩೪ ವ)

**ಉಪಶಾಂತಿಕ್ರಿಯೆ** – ಮಗನನ್ನು ಪಡೆದು ಅವನಿಗೆ ಗೃಹಸ್ಥಧರ್ಮವನ್ನು ವಹಿಸಿ ತಾನು ಸ್ವಾಧ್ಯಾಯಶೀಲನಾಗುವುದು (ಮಗನಂ ಪಡೆದು ಗೃಹಸ್ಥ ಧರ್ಮಮನಾತಂಗಪ್ಪಯ್ಸಿ ವಿಷಯಂಗಳೊಳ್ ತೊಡರದುಪಶಮಭಾವನೆಯಿಂ ಸ್ವಾಧ್ಯಾಯಶೀಲನಾಗಿ ನಾನಾವಿಧೋಪವಾಸದೊಳೆ ನೆಗಟ್ವುದುಪಶಾಂತಿಕ್ರಿಯೆ: **ಚಾವುಂಡಜಯ,** ಪು. ೧೮೩)

**ಉಪಸರ್ಗ** – ಮುನಿಗಳ ತಪಸ್ಸಿಗೆ ಉಂಟಾಗುವ ತೊಂದರೆ (ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗಮಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮುಮಂ: **ವಡ್ಡಾರಾ,** ಪು. ೧. ಸಾ೫)

**ಉಪಸರ್ಗಭಾವ** – ದೇಹಪೀಡೆ ಆಗದಿರುವುದು (ಮಿತನಖಕೇಶಶೋಭಿತ ತನುತ್ವಂ ಅಭುಕ್ತ್ಯುಪಸರ್ಗಭಾವಂ ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ: **ಆದಿಪು,** ೧೦. ೪೩)

**ಉಪಸ್ಥಾಪನೆ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಹತ್ತಿರದಲ್ಲಿ ಇರಿಸುವುದು (ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಉಪಾದೇಯ** – ತತ್ತ್ವದ ಎರಡು ಬಗೆಗಳಲ್ಲಿ ಒಂದು, ಮುಕ್ತಿಕಾರಣವಾದುದು (ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ ಸಂಸಾರಕಾರಣಂಗಳ್ ಹೇಯಂಗಳ್ ಮುಕ್ತಿಕಾರಣಂಗಳ್ ಉಪಾದೇಯಂಗಳ್: **ಆದಿಪು,** ೧೦. ೬೩ ವ)

**ಉಪಾದ್ಯ** – ಮೊದಲನೆಯದಕ್ಕೆ ಹತ್ತಿರದವನಾದ ಎರಡನೆಯ (ಉಪಾದ್ಯ ಜಿನತೀರ್ಥೇಶಂಗೆ ಪಾದ್ಯಂಬೊಲೊಪ್ಪಿದುದು ಆದ್ಯಾಮರ ರಾಜವಮೌಳಿ ಮಣಿಗುಚ್ಛಾಚೋಚ್ಚರೋಚಿರ್ಜಲಂ: **ಅಜಿತಪು,** ೪. ೧೨)

**ಉಪಾಧ್ಯಾಯ** – ಪಂಚಪರಮೇಷ್ಠಿಗಳಲ್ಲಿ ಒಬ್ಬ, ಮಹಾವ್ರತಗಳನ್ನಾಚರಿಸುತ್ತ, ಭವ್ಯರಿಗೆ ಧರ್ಮೋಪದೇಶ ಹಾಗೂ ಶಾಸ್ತ್ರಜ್ಞಾನ ಮಾಡಿಕೊಡುವವನು (ಉಪಾಧ್ಯಾಯರ್ ಓದಿಸಿ ಕೆಯ್ಗನ್ನಡಿಯಂದದಿಂ ಬೆಳಗುಗೆ ಅಂದಂದಿಗೆ ಮಚ್ಚಿತ್ತಮಂ : **ನೇಮಿನಾಪು,** ೧. ೫)

**ಉಪಾಧ್ಯಾಯರಹಸ್ಯ** – ಉಪಾಧ್ಯಾಯನು ಶಿಷ್ಯನಿಗೆ ಉಪದೇಶಿಸುವ ರಹಸ್ಯ (ಅಲ್ಲಿಯೇನಾನುಂ ಉಪಾಧ್ಯಾಯರಹಸ್ಯಮಕ್ಕುಂ ಅದುವುಂ ಸೂಚನಾ ಮಾತ್ರದೊಳ್ ವಿದಿತಮಕ್ಕುಂ: **ಸುಕುಮಾಚ,** ೩. ೨೨ ವ)

**ಉಪಾಯ** – ನಯಶಾಸ್ತ್ರದ ಒಂದು ವಿಭಾಗ, ಇದರಲ್ಲಿ ಸಾಮ ಉಪಪ್ರದ ಭೇದ ಮತ್ತು ದಂಡ ಎಂಬ ನಾಲ್ಕು ಬಗೆ (ಉಪಾಯಮೆಂಬುದು ಸಾಮೋಪಪ್ರದಾಭೇದ ದಂಡವಿಕಲ್ಪದಿಂ ಚತುರ್ವಿಧಮಕ್ಕುಂ; ಅದಱೊಳ್ ಪ್ರಿಯ ಹಿತವಚನಮುಂ ಗಾಢಾಲಿಂಗನಮುಂ ಸಾಮಂ, ಹಸ್ತ್ಯಶ್ವವಿಷಯಮಣಿಕಟಕಾದಿ ವಿತರಣ ಮುಪಪ್ರದಾಂ, ಭಯೋಪದೇಶದಿನಕ್ಕೆ ಹಿತೋಪದೇಶದಿನಕ್ಕೆ ರಿಪುನೃಪಪ್ರಧಾನಪುರುಷರ ಚಿತ್ತಮುಂ ತಮಗೆ ಮಾಱ್ಪುದು ಭೇದಂ, ರಿಪುವಿಷಯದಹನವಿಲೋಪನಮುಂ ಸುಗ್ರಾಮಾದಿಕಮುಂ ದಂಡಮಕ್ಕುಂ: **ಚಾವುಂಡಜಯ,** ಪು. ೨೫೬)

**ಉಪಾಸಕ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಒಂಬತ್ತನೆಯ ವರ್ಗಕ್ಕೆ ಸೇರಿದವನು (ಧನಧಾನ್ಯಾದಿ ಪರಿಗ್ರಹಮನಾವಗಂ ತೊಱೆದು ನೆಗಱ್ದುಪಾಸಕನೊಂಬತ್ತನೆಯ ಪರಿಮಿತಪರಿಗ್ರಹವಿನಿವೃತ್ತನುದಾತ್ತಧರ್ಮನಿರ್ಮಳಚಿತ್ತಂ: **ಸುಕುಮಾಚ,** ೬. ३೪)

**ಉಪಾಸಕಗುಣಸ್ಥಾನ** – ಉಪಾಸಕನ ಹನ್ನೊಂದು ನೆಲೆಗಳು (ಉಪಾಸಕಸ್ಥಾನಂಗಳ್ – ಸಮ್ಯಕ್ತ್ವಂ ಸದ್ವ್ರತೌಘಂ ಸಮತೆ ಶಮಯುತಂ ಪ್ರೋಷಧಂ ಗುಲ್ಮವಲ್ಲೀ ಸಾಮ್ಯೋರ್ವೀಜಪ್ರಘಾತಂ ರಜನಿಸುರತರಾಗಂ ಮಹದ್ಬ್ರಹ್ಮಚರ್ಯಂ ಕಾಮಾರಂ ಭೋಪಹಾರಂ ಪರಿಷ್ಕೃತಸಕಲಗ್ರಂಥಮುಸ್ತಾವೋದಂ ಭೂಮ್ಯುದ್ದಿಷ್ಟ ಪ್ರದೇಶತ್ಯಜನಮಱೆವುದೇಕಾದಶಂ: **ಶಾಂತಿಪು,** ೬. ೪೯ ವ–೫೦)

**ಉಪಾಸಕವ್ರತ** – ಜೈನ ಗೃಹಸ್ಥನ ಹನ್ನೆರಡು ವ್ರತಗಳು: ಐದು ಅಣುವ್ರತಗಳೊಡನೆ ದಿಗ್ವ್ರತ, ದೇಶವ್ರತ, ದಂಡವಿರತಿವ್ರತ, ಎಂಬ ಮೂರು ಸಾಮಯಿಕ ವ್ರತಗಳು ಹಾಗೂ ಸಾಮಾಯಿಕವ್ರತ, ಪ್ರೋಷಧವ್ರತ, ಅತಿಥಿಸಂಗ್ರಹ, ಸಲ್ಲೇಖನಾ, ಎಂಬ ನಾಲ್ಕು ಶಿಕ್ಷಾವ್ರತಗಳು (ಗೃಹೀತ ಉಪಾಸಕವ್ರತಂ ಅನಶನಂ ಅವಮೋದರ್ಯಾದ್ಯಾಚರಣ ಪರಿಣತಂ ಯಥೋವಿಧಿಯಿಂದಾಯುರವ ಸಾನದೊಳ್: **ಆದಿಪು,** ೨. ೧೯ ವ)

**ಉಪಾಸಕಾಧ್ಯಯನ** – ಶ್ರಾವಕರ ಕರ್ತವ್ಯ ತಿಳಿಸುವ ಶಾಸ್ತ್ರ (ಅರ್ಹದರ್ಚನಾಶೇಷ ಘೃತತಿಳಾಜ್ಯಾಹುತಿಗಳಿಂ ಉಪಾಸಕಾಧ್ಯಯನಗದಿತ ಸಮಸ್ತಪ್ರಕಾರ ಪಿಪೀಲಿಕಾಜಾತ್ಯಾದಿ ಮಂತ್ರಂಗಳಿಂ ಕ್ರಿಯಾಯುಕ್ತಮಾಗೆ ಪೇೞ್ದು: **ಆದಿಪು,** ೧೫. ೧೬ ವ)

**ಉಪಾಸ್ತಿ** – ಧರ್ಮಬುದ್ಧಿ, ಆರಾಧನೆ (ಉಪಶಮದಿಂ ಆಸ್ತಿಕ್ಯದಿಂ ಉಪಾಸ್ತಿ ಸಂಯೋಗದಿಂ ದಯಾಳುತೆಯಿಂದಂ ... ಸಮ್ಯಕ್ತ್ವಂ: **ವರ್ಧಮಾಪು,** ೬. ೩೫)

**ಉಷ್ಣವೇತಾಳಿ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚನಿ ಪ್ರಹರಣಾವರಣಿ ಭ್ರಾಮರಿ ಆಭೋಗಿ ಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

## ಊ

**ಊರ್ಧ್ವಲೋಕ** – ಮೇಲುಗಡೆಯ ಸ್ವರ್ಗಗಳಲ್ಲಿ ಕೊನೆಯದು (ಮಧ್ಯಲೋಕ ಮೆಸೆದಿರ್ದಾ ಚೂಳಿಕಾಭಾಗದಾದಲೆಯೊಳ್ ನಿಂದಪುದು ಊರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದಂಗುದಲೆಯಾಗಿರ್ದುದು: **ಆದಿಪು,** ೧. ೫೦)

## ಋ

**ಋಜುಮತಿ** – ಮನಃಪರ್ಯಯಜ್ಞಾನದ ಭೇದಗಳಲ್ಲಿ ಒಂದು; ಋಜು ಬುದ್ಧಿ (ಕ್ರಮದಿಂ ಋಜುಮತಿಯುಂ ವಿಪುಲಮತಿಯುಂ ಎಂಬದಱ ಭೇದಂ ಇರ್ತೆಱನಕ್ಕುಂ: **ಚಂದ್ರಪ್ರಪು,** ೧೪. ೫೭)

**ಋಜುಸೂತ್ರ** – ಸಪ್ತನಯಗಳಲ್ಲಿ ಒಂದು: ವರ್ತಮಾನ ಕಾಲದ ವಿಷಯವನ್ನು ಗ್ರಹಿಸುವುದು (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದಸಮಭಿರೂಢೈವಮೆಂಭೂತಾದಿ ನಯವಿಭೇದದಿಂ: **ಸುಕುಮಾಚ,** ೩. ೩೯ ವ)

**ಋತುವಿಮಾನ** – ಅರವತ್ತಮೂರು ಇಂದ್ರಕಗಳಲ್ಲಿ ಮೊದಲನೆಯದು (ಇದು ಋತುವಿಮಾನಮೋ ಮೇಣಿದು ಅಹೀಂದ್ರನ ರುಂದ್ರರಮ್ಯಹರ್ಮ್ಯಮೋ: **ಕರ್ಣನೇಮಿ,** ೧೧. ೪)

**ಋದ್ಧಿ** – ತಪಸ್ಸಿನಿಂದ ಪ್ರಾಪ್ತವಾಗುವ ಮಹಿಮೆ: ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧಿ, ರಸ, ಅಕ್ಷೀಣ ಎಂಬ ಋದ್ಧಿಗಳು (ಸಪ್ತ ಋದ್ಧಿ ಸಮನ್ವಿತಂ ವ್ರತನಿಯಮಯುಕ್ತ್ವಗಭಸ್ಥೀಭೂತಂ: **ಶಾಂತಿಪು,** ೯. ೧೧೨)

**ಋದ್ಧಿಪ್ರಾಪ್ತ** – ಋದ್ಧಿಯನ್ನು ಹೊಂದಿದವನು (ಧರಣೀಪಾಲಕ ಮುನಿಪರ್ ಪಂಚಮಕಾಲದೊಳಣಂ ಆಗರಲ್ತೆ ಋದ್ಧಿಪ್ರಾಪ್ತರ್: **ಆದಿಪು,** ೧೫. ೪೧)

**ಋಷಿನಿವೇದಕ** – ಮಹರ್ಷಿಗಳ ಆಗಮನವನ್ನು ಸಾರುವ ದೂತ (ಋಷಿನಿವೇದಕಂ ಇಂತೆಂದು ಬಿನ್ನಪಂಗೆಯ್ದಂ: **ಶಾಂತಿಪು,** ೮. ೧೫೩ ವ)

## ಎ

**ಎಂಟನೆಯ ಭೂಮಿ** – ಈಷತ್ಪ್ರಾಗ್ಭಾರ, ಅನುತ್ತರ ವಿಮಾನಗಳ ಮೇಲುಗಡೆಯಿರುವ ಸಿದ್ಧಕ್ಷೇತ್ರ (ಎಂಟನೆಯ ಭೂಮಿಯಾಗಿರ್ದೀಷತ್ಪ್ರಾಗ್ಭಾರಭೂಮಿ: **ಶಾಂತಿಪು,** ೧೨. ೯ ವ)

**ಎಂಟುಂ ಕಿಲ್ಬಿಷಂಗಳ್** – ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ ಎಂಬ ನಾಲ್ಕು ಘಾತಿಕರ್ಮಗಳು ಹಾಗೂ ವೇದನೀಯ, ಆಯು, ನಾಮ, ಗೋತ್ರ ಎಂಬ ನಾಲ್ಕು ಅಘಾತಿಕರ್ಮಗಳು (ಪೆಣೆದೆಂಟುಂ ಕಿಲ್ಬಿಷಂಗಳ್ ಕಿಡೆ ಕಿಡದ ಗುಣಂ ಪೊರ್ದೆ ಬಂದು ಎಂಟುಂ: **ಆದಿಪು,** ೧. ೨)

**ಎಂಟುಂ ಕೂಟಂಗಳ್** – ರುಚಕಾಚಳದ ಉತ್ತರ ದಿಕ್ಕಿನ ಎಂಟು ಶಿಖರಗಳು (ತದ್ಗಿರೀಂದ್ರೋತ್ತರ ಕಕುದ್ದೇಶದ ಸ್ಫಟಿಕ ಅಂಜನ ಕಾಂಚನ ರಜತ ರುಚಕ ಕುಂಡಳ ರುಚಿರ ಸುದರ್ಶನಂಗಳೆಂಬ ಎಂಟು ಕೂಟಂಗಳೊಳ್: **ಆದಿಪು,** ೭. ೩ ವ)

**ಎಂಟುಂ ತೆಱದ ಪೂಜೆ** – ಇಜ್ಯೆಗಳು, ಕಲ್ಪದ್ರುಮ, ಚತುರ್ಮುಖ, ಸರ್ವತೋಭದ್ರ, ಐಂದ್ರಧ್ವಜ, ಅಷ್ಟಾಹ್ನಿಕ, ಬಲಿ, ಸವನ, ತ್ರಿಸಂಧ್ಯಾಸೇವೆ ಎಂಬ ಎಂಟು ಬಗೆಯ ಪೂಜೆಗಳು (ಎಂಟುಂ ತೆಱದ ಪೂಜೆಯುಮಂ ಅರ್ಕಪೂಜೆಯುಮಂ ಮನ್ನಿಸಿ: **ಆದಿಪು,** ೧೫. ೧೩ ವ)

**ಎಂಟು ಮದ** – ಎಂಟು ವಿಧವಾದ ಮದಗಳು (ಜ್ಞಾನೈಶ್ವರ್ಯ ಪೂಜಾ ಕುಲ ಬಲ ತಪ ರೂಪ ಜಾತಿಯೆಂಬೆಂಟು ಮದಂಗಳೊಳ್: **ಧರ್ಮಾಮೃತ,** ೫. ೮೩ ವ)

**ಎಣ್ಬತ್ತುನಾಲ್ವರ್** – ಋಷಭದೇವನ ಗಣಧರರಾದ ಎಂಬತ್ತನಾಲ್ಕು ಮಂದಿ (ಎಂಬ ಎಣ್ಬತ್ತುನಾಲ್ವರ್ ಗಣಧರದೇವರುಂ ನಾಲ್ಸಾಸಿಱದೇೞ್ನೂಱಯ್ವದಿಂಬರ್ ಸಕಳಪೂರ್ವದೇವರುಂ: **ಆದಿಪು,** ೧೬. ೪೦ ವ)

**ಎರಡುಂ ಕಾಲ** – ಮಧ್ಯಮಖಂಡದಲ್ಲಿನ ಮುಖ್ಯ ಮತ್ತು ವ್ಯವಹಾರ ಎಂಬ ಎರಡು ಬಗೆಯ ಕಾಲಗಣನೆ (ಭರತಕ್ಷೇತ್ರಮಧ್ಯ ಮಧ್ಯಮಖಂಡದೊಳ್ ಮುಖ್ಯ ವ್ಯವಹಾರಮೆಂಬೆರಡು ಕಾಲದೊಳಗೆ ಆದಿಮಧ್ಯಾವಸಾನ ವಿರಹಿತಮುಂ: **ಆದಿಪು,** ೬. ೪೮ ವ)

**ಎರಡುವರೆ ದ್ವೀಪ** – ಜಂಬು, ಧಾತಕಿ, ಮತ್ತು ಪುಷ್ಕರಾರ್ಧ ಎಂಬ ದ್ವೀಪಗಳಲ್ಲಿ ಮಾತ್ರ ಮಾನವರು ಜೀವಿಸುತ್ತಾರೆ (ಎರಡುವರೆದ್ವೀಪಂ ವ್ಯಂತರ ಮಾನವ ತಿರ್ಯಗಾಲಯಂ ತತ್ಪ್ರಮಿತಂ ವರಸಿದ್ಧಕ್ಷೇತ್ರಂ; **ಶಾಂತಿಪು,** ೧೨. ೧೦)

## ಐ

**ಏಕತ್ವ** – ಷೋಡಶಭಾವನೆಗಳಲ್ಲಿ ಒಂದು (ಮಮತ್ವಮಂ ಬಿಸುಟು ನೀನೇಕತ್ವಮಂ ಭವ್ಯ ಭಾವಿಸು ನಿನ್ನೀ ತನುವಂ ತಪೋವನವನಕ್ರೀಡಾಸುಖಕ್ಕೊಡ್ಡು: **ಆದಿಪು,** ೨. ೪೭)

**ಏಕತ್ವವಿತರ್ಕವಿಚಾರ** – ಎರಡನೆಯ ಶುಕ್ಲಧ್ಯಾನ, ಮೋಹಕರ್ಮಸಹಿತವಾಗಿ ಜ್ಞಾನಾವರಣೀಯ, ದರ್ಶನಾವರಣೀಯ ಮತ್ತು ಅಂತರಾಯ ಎಂಬ ಮೂರು ಕರ್ಮಗಳ ನಾಶವಾಗಿ ಕೇವಲಜ್ಞಾನಪ್ರಾಪ್ತಿಗೆ ಎಡೆಮಾಡಿಕೊಡುವಂಥದು (ವೀತರಾಗದ್ವೇಷಭಾವನಾಭಾವಿತ ಯಥಾಖ್ಯಾನಚಾರಿತ್ರಕ್ಷೀಣ ಕಷಾಯ ವೀತರಾಗಚ್ಛದ್ಮ ಗುಣಸ್ಥಾನಂ ಏಕತ್ವವಿತರ್ಕವಿಚಾರಾಭಿಧಾನಧ್ಯಾನಪರಿಣತಂ: **ಆದಿಪು,** ೧೦. ೧೪ ವ)

**ಏಕತ್ವ (ಅನುಪ್ರೇಕ್ಷೆ)** – ದ್ವಾದಶಾನುಪ್ರೇಕ್ಷೆಗಳಲ್ಲಿ ನಾಲ್ಕನೆಯದು (ಏಕತ್ವಾನ್ಯತ್ವಾಶುಚಿತಾಸ್ರವ ಸಂವರ ನಿರ್ಜರ ಲೋಕಬೋಧಿ ದುರ್ಲಭ ಧರ್ಮವೆಂಬೀ ದ್ವಾದಶಾನುಪ್ರೇಕ್ಷೆಗೆಯ್ಯುತ್ತುಂ: **ಸುಕುಮಾಚ,** ೩. ೩೯ ವ)

**ಏಕಭುಕ್ತಂ** – ಅಂತಃಕರಣ ಶುದ್ಧಿಗಾಗಿ ಧ್ಯಾನಾದಿಗಳಲ್ಲಿ ತೊಡಗಿ ಒಂದೇ ಊಟವನ್ನು ಮಾಡುವುದು, ಮುನಿಗಳ ಮೂಲಗುಣಗಳಲ್ಲಿ ಒಂದು (ಏಕಭುಕ್ತಂ ಮಾೞ್ಪುದರಿಂದೋ ಪಲವು ಸೂಟುಂಬುದೋ: **ಧರ್ಮಾಮೃತ,** ೭. ೪೬ ವ)

**ಏಕವಿಹಾರಿ** – ಒಂಟಿಯಾಗಿ ಸಂಚರಿಸುವುದು (ಪನ್ನೆರಡು ತಪದೊಳ್ ನೆಜೆದಿರ್ಪ‌ತ್ತೆರಡು ಪರೀಷಹಂಗಳಂ ಗೆಲ್ದು ಗಣಧರಗಣಮಂ ಬಿಟ್ಟು ಏಕವಿಹಾರಿಯಾಗಿ: **ಆದಿಪು,** ೬. ೩೩ ವ)

**ಏಕಾದಶನಿಳಯ** – ಶ್ರಾವಕರ ಹನ್ನೊಂದು ನೆಲೆಗಳು: ಸಮ್ಯಗ್ದರ್ಶನ, ಅಣುವ್ರತ, ಸಮತ್ವೀಭಾವ, ಪ್ರೋಷಧೋಪವಾಸ, ಹಸಿಯ ಹಣ್ಣು ಹೂ ಮುಂತಾದವನ್ನು ಸ್ವೀಕರಿಸದಿರುವುದು [ಸಚಿತ್ತವಸ್ತುತ್ಯಾಗ], ಹಗಲು ಸ್ತ್ರೀಸಂಗವರ್ಜನೆ, ಬ್ರಹ್ಮಚರ್ಯ, ಆರಂಭತ್ಯಾಗ, ಪರಿಗ್ರಹತ್ಯಾಗ, ಅನುಮತಿತ್ಯಾಗ ಮತ್ತು ಉದಯತ್ಯಾಗ [ಉದ್ದಿಷ್ಟತ್ಯಾಗ] (ಭೂಭುವನದೊಳಂ ಪರೆದ ಏಕಾದಶನಿಳಯಂ ಅರಸಂ ಅನುಕ್ರಮದಿನಿನಿತುಮಮಂ ಕೈಕೊಂಡಂ: **ಆದಿಪು,** ೬. ೧೧)

**ಏಕಾದಶಸ್ಥಾನ** – ಶ್ರಾವಕರ ಹನ್ನೊಂದು ನೆಲೆಗಳು (ಇಂತೀ ಆರ್ಯಕರ್ಮಂಗಳಂ ನೆಗಟ್ವಿ ಗೃಹಸ್ಥಾಶ್ರಮವ್ರತಿಗನುಕ್ರಮದಿನನುಪಮಾನ ಗುಣಪ್ರವರ್ಧ ಮಾನಮಪ್ಪೇಕಾದಶ ಸ್ಥಾನಂಗಳಕ್ಕುಂ: **ಸುಕುಮಾಚ,** ೬. ೨೫ ವ)

**ಏಕಾದ್ಯೇಕೋತ್ತರದಶಾಂತಂಬರಂ** – ಒಂದರಿಂದ ಹನ್ನೊಂದರವರೆಗೆ (ಪದ್ಮನಿಧಿಯೆಂಬ ನಿಧಿಯಂ ತರಿಸಿ ತಪನೀಯಸೂತ್ರದೊಳ್ ಏಕಾದ್ಯೇಕೋತ್ತರ ದಶಾಂತಂಬರಂ ... ಯಜ್ಞೋಪವೀತದಿಂ ಪವಿತ್ರಗಾತ್ರಮಾಡಿ: **ಆದಿಪು,** ೧೫. ೧೧ ವ)

**ಏವಂಭೂತ** – ಸಪ್ತನಯಗಳಲ್ಲಿ ಒಂದು, ಬೇರೆ ಬೇರೆ ಕ್ರಿಯೆಗಳನ್ನು ಸೂಚಿಸುವ ಬೇರೆ ಬೇರೆ ಶಬ್ದಗಳನ್ನು ಯಥೋಚಿತವಾಗಿ ಬಳಸುವುದು (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದಸಮಭಿರೂಢೈವಮೆಂಭೂತಾದಿ ನಯವಿಭೇದದಿಂ: **ಸುಕುಮಾಚ,** ೩. ೩೯ ವ)

**ಏಷಣಾಸಮಿತಿ** – ಪಂಚಸಮಿತಿಗಳಲ್ಲಿ ಒಂದು; ಅಶನ, ಪಾನ, ಖಾದ್ಯ ಮತ್ತು ಸ್ವಾದ್ಯಗಳಿಗೆ ಏಷಣಾ ಎಂಬ ಹೆಸರು; ಸಾಧಕನು ರತ್ನತ್ರಯಭಾವನೆಯಿಂದ ಪ್ರಾಸುಕಾಹಾರವನ್ನು ತೊರೆದು ಸಮಚಿತ್ತದಿಂದ ಊಟಮಾಡುವುದು (ಭಟಾರರಜಿದೆ ಕಿತ್ತಯ್ಯಂಗಳ್ಗೆ ಏಷಣಾಸಮಿತಿ ಮೊದಲಾಗೊಡೆಯ ಬ್ರತಂಗಳಂ ಮತ್ತಂ ಸಂಕ್ಷೇಪದಿಂ ಪೇೞ್ದು: **ವಡ್ಡಾರಾ,** ಪು, ೭೯, ಸಾ. ೨೬)

**ಏೞುಂಗುಣಂಗಳು** – ಸಮ್ಯಗ್ದರ್ಶನಶುದ್ಧ, ಅಕದವದಕರ್ಮ (ದೋಷವಿಲ್ಲದ ಕರ್ಮ), ಸುಶೀಲ ಗುಣನಿಲಯ, ಉಜ್ಜುಗತ್ತ (ಉದ್ಯೋಗಾರ್ತ), ಗುರುಭತ್ತ (ಗುರುಭಕ್ತ), ಪವಯಣಕುಶಲ (ಪ್ರವಚನ ಕುಶಲ) ಮತ್ತು ಮದಿಪ್ಪಗಬ್ಭೋಯ (ಬುದ್ಧಿಯಲ್ಲಿ ಪ್ರೌಢಿಮೆ) ಎಂಬ ಗುಣಗಳು (ಅಧಿಗಮ ಸಮ್ಯಕ್ ದೃಷ್ಟಿಯಪ್ಪನೇೞು ಗುಣಂಗಳಿಂದಂ ಕೂಡಿದೊನ್: **ವಡ್ಡಾರಾ,** ಪು. ೩೨, ಸಾ೧೫)

**ಏೞುಂ ಪರಮಸ್ಥಾನ** – ಸಜ್ಜಾತಿತ್ವ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಅರ್ಹಂತ್ಯ, ನಿರ್ವಾಣ ಎಂಬ ಮೋಕ್ಷಪದವಿಯ ಏಳು ಹಂತಗಳು (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನ: **ಆದಿಪು,** ೧೫. ೧೬ ವ)

# ಐ

**ಐದಾಚಾರ** – ದರ್ಶನ, ಜ್ಞಾನ, ಚಾರಿತ್ರ, ತಪ ಮತ್ತು ವೀರ್ಯಗಳೆಂಬ ಆಚಾರಗಳು (ದಶಧರ್ಮಮಮಂ ತಳೆದನೈದಾಚಾರಮಂ ತಾಳ್ದಿದಂ: **ಧರ್ಮಬಾಹು,** ೧೨. ೧೬೬)

**ಐದುಮಾಚಾರ** – ಐದಾಚಾರ (ಸಂದೈದುಮಾಚಾರದೊಳ್ಸದ್ಭಾವಂ ಕೈಗಣ್ಮೆ: **ಆದಿಪು,** ೧. ೩)

**ಐರಾವತ** – ಇಂದ್ರನ ಆನೆ (ಮದಶ್ರೀಯುತೈರಾವತಸ್ಕಂಧಗತಂ ನಾನಾತ ಪತ್ರಸ್ಥಗಿತದಶದಿಶಾಮಂಡಲಂ ... ವಿಳಾಸಂ ಮಿಗೆ ಸೌಧರ್ಮೇಂದ್ರನಂದಾ ಶಚಿವೆರಸು ಮಹೋತ್ಸಾಹದಿಂ ಬಂದನಾಗಳ್: **ಆದಿಪು**. ೭. ೪೩); ಜಘನ್ಯ ಭೋಗಭೂಮಿಯ ಏಳರಲ್ಲಿ ಒಂದು ಜನಪದದ ಹೆಸರು (ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತೈರಾವತಗಳೆಂಬೇಱು ಜನಪದಂಗಳಿಂದಂ: **ಆದಿಪು,** ೧. ೪೮ ವ)

# ಒ

**ಒಂಬತ್ತು ನಿಧಿ** – ಚಕ್ರವರ್ತಿಯ ಬಳಿಯ ನವನಿಧಿಗಳು (ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ ಸರ್ಪರತ್ನಂಗಳೆಂಬೊಂಬತ್ತು ನಿಧಿಗಳುಮಂ ಅನುಕ್ರಮದೊಳರ್ಚಿಸಿ: **ಚಂದ್ರಪ್ರಪು,** ೬. ೧೦೨ ವ)

# ಔ

**ಔದಯಿಕಭಾವ** – ಆತ್ಮನ ಐದು ಭಾವಗಳಲ್ಲಿ ಒಂದು, ಉದಯಸಿದ ಭಾವ (ಭಾವೋಪಲಕ್ಷಕಂ ಜೀವಮೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕ ಭಾವಮೆಂದಿಂತು ಭಾವಮಯ್ದು ತೆಱನಕ್ಕುಂ: **ಸುಕುಮಾಚ,** ೮. ೪ ವ)

**ಔದಾರಿಕ** – ಜೀವರುಗಳಿಗಿರುವ ಐದು ವಿಧವಾದ ಶರೀರಗಳಲ್ಲಿ ಒಂದು, ಇಂದ್ರಿಯಗೋಚರ ಶರೀರ (ಅನುಕ್ರಮದಿಂ ಅಯ್ದುಭೇದದಿನೌದಾರಿಕ ವೈಕ್ರಿಯಕಮಾಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ: **ಸುಕುಮಾಚ,** ೮. ೧೦)

**ಔದಾರಿಕಶರೀರ** – ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ ಮತ್ತು ಕಾರ್ಮಣ ಎಂಬ ಐದು ಶರೀರಗಳಲ್ಲಿ ಒಂದು, ಇದರಲ್ಲಿ ವಿಕ್ರಿಯಾತ್ಮಕ ಮತ್ತು ಅವಿಕ್ರಿಯಾತ್ಮಕ ಎಂದು ಎರಡು ಬಗೆ, ಔದಾರಿಕಶರೀರವು ಗರ್ಭ ಮತ್ತು ಸಮ್ಮೂರ್ಛನಜನ್ಮದಲ್ಲಿ

ಉಂಟಾಗುತ್ತದೆ (ಚರಾಚರೋಪಾಸ್ಯನುಮಷ್ಟಾದಶದೋಷದೂರನುಂ ಪರಮೌದಾರಿಕಶರೀರನುಂ ... ಆಗಿ: **ಶಾಂತಿಪು,** ೧೨, ೧ ವ)

**ಔಪಶಮಿಕಭಾವ** – ಆತ್ಮನ ಐದು ಭಾವಗಳಲ್ಲಿ ಒಂದು, ಕರ್ಮಗಳ ಉಪಶಮನ ಅಂದರೆ ಉದಯಕ್ಕೆ ಬಾರದಿರುವ ಅವಸ್ಥೆಯಲ್ಲಿ ಉಂಟಾಗುವ ಭಾವ (ಭಾವೋಪಲಕ್ಷಕಂ ಜೀವಮೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕ ಭಾವಮೆಂದಿಂತು ಭಾವಮಯ್ದು ತೆಱನಕ್ಕುಂ: **ಸುಕುಮಾಚ,** ೮. ೪ ವ)

**ಔಷಧಋದ್ಧಿ** – ನಾನಾ ಬಗೆಯ ಔಷಧಜ್ಞಾನದ ಋದ್ಧಿ, ಇದರಲ್ಲಿ ಎಂಟು ಬಗೆ (ಆಮರ್ಷಂ ಕ್ಷ್ವೇಳಂ ಜಿಲ್ಲಮಲಂ ವಿಔಷಧಿ ಸರ್ವೌಷಧಿ ಆಶ್ಯಾವಿಷ ದೃಷ್ಟಿವಿಷಮೆಂದಷ್ಟವಿಧಮದೌಷಧಋದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

# ಕ

**ಕಂತಿ** – ಜೈನ ಸನ್ಯಾಸಿನಿ (ಗುಣಧರ ಭಟಾರರೆ ಗುರುಗಳಾಗೆ ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು, **ವಡ್ಡಾರಾ,** ೧೩೨, ಸಾ. ೨)

**ಕಂತಿಕೆ** – ಕಂತಿ (ತಾನುಂ ಪದ್ಮಾವತಿ ಕಂತಿಕೆಯರ ಪಕ್ಕದಾಚಾಮ್ಲವರ್ಧನಮೆಂಬ ನೋಂಪಿಯಂ ನೋಂತು, **ಚಾವುಂಡಜಯ,** ಪು. ೩೦೭)

**ಕಥೆ** – ದ್ರವ್ಯ ಕ್ಷೇತ್ರ ಕಾಲ ಭಾವ ಮತ್ತು ಪ್ರಕೃತಿ ಎಂಬ ಸಪ್ತಾಂಗಗಳುಳ್ಳ ನಿರೂಪಣೆ (ಕಥೆಯೆಂಬುದು ದ್ರವ್ಯಮುಂ ಕ್ಷೇತ್ರಮುಂ ಕಾಲಮುಂ ಭಾವಮುಂ ಪ್ರಕೃತಿಯುಂ ಫಲಮುಮೆಂದು ಸಪ್ತಾಂಗಮುಮಕ್ಕುಂ: **ಚಾವುಂಡಜಯ,** ಪು. ೬)

**ಕದಳೀಘಾತ** – ಒಮ್ಮೆಲೇ ಬೀಳುವಂತೆ ಬಾಳೆಮರಕ್ಕೆ ಹೊಡೆದ ಏಟು, ಅಕಾಲಮರಣ, ಆಹಾರ ನೀರು ಬಿಡುವುದರಿಂದ ಆಗುವ ಆಯುಸ್ಸಿನ ಕಡಿತ (ಕದಳೀಘಾತಂ ಜೀವಕ್ಕೆ ದುರಿತದಿಂದಕ್ಕುಂ ಎಂಬುದರ್ಹನ್ಮತಂ ಅಂತದು ಮಾಣ್ದಿರೆ ಬೇರ್ವೆರಸಾದುದು ಜಿನನೀಘಾತಿಗಳ್ಗೆ ಕದಳೀಘಾತಂ: **ಶಾಂತಿಪು,** ೧೧. ೧೧೨)

**ಕನಕಾವಳಿ** – ಒಂದು ವರ್ಷದಲ್ಲಿ ಎಂಬತ್ತಮೂರು ಬಾರಿ ಉಪವಾಸವಿರುವ ವ್ರತ (ಜಿನದತ್ತೆಯರೆಂಬ ವಿರತಿಯರಂ ಪೊರ್ದಿ ದೀಕ್ಷೆಯಂ ತಳೆದು ಕನಕಾವಳಿ ನೋಂಪಿಯ ನೋಂತು: **ಕರ್ಣನೇಮಿ,** ೧೪. ೨೨ ವ)

**ಕಪಿಕೇತು** – ಬಾವುಟದಲ್ಲಿ ಕಪಿ ಲಾಂಛನವುಳ್ಳ ಸುಗ್ರೀವಾದಿಗಳು (ಕಪಿಕೇತುವುದಾತ್ತಂ ಬಂದಂ ನಡೆವ ವರ್ಷಧರಶೈಲಮೆಂಬಿನಂ ಸುಗ್ರೀವಂ: **ಪಂಪರಾ,** ೧೦. ೩)

**ಕಪೋತಲೇಶ್ಯೆ** – ಕರ್ಮಸಂಬಂಧವಾದ ಬೂದುಬಣ್ಣ, ಆರು ಲೇಶ್ಯೆಗಳಲ್ಲಿ ಒಂದು (ಮಹಾಬೀಭತ್ಸುಕಯತ್ತಿತೋತ್ಪತ್ತಿಸ್ಥಾನಂಗಳೊಳುತ್ಕೃಷ್ಟ ಕೃಷ್ಣ ನೀಲ ಕಪೋತ ಲೇಶ್ಯಾನುಬಂಧ ರೌದ್ರಪರಿಣಾಮ ಪರಿಣತರುಂ: **ಸುಕುಮಾಚ,** ೧೧. ೪೧ ವ)

**ಕರಣಗ್ರಂಥ** – ಕರಣಾನುಯೋಗದ ಗ್ರಂಥ (ಲೋಗಾಣಿ ಸಂಗಾಣಿ ಮೊದಲಾಗೊಡೆಯ ಕರಣಗ್ರಂಥಂಗಳುಮನಿವೆಲ್ಲಮಂ ಕಲ್ತೊಡಲ್ಲದೆ ಪೇೞಲಾಗದು: **ವಡ್ಡಾರಾ,** ಪು. ೬. ಸಾ ೮)

**ಕರಣತತಿ** – ಇಂದ್ರಿಯ ಸಮೂಹ (ಕರಣತತಿ ವಾಯುವಿನೊಳ್ ಕುನಿದಿರೆ ಪದ್ಮಾಸನದೊಳ್ ತನುವಿರೆ ಯೋಗೀಂದ್ರಂ ಆತ್ಮಚಿಂತೆಯೊಳಿರ್ದಂ: **ಯಶೋಧಚ,** ೪. ೧೩)

**ಕರಣತ್ರಯ** – ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣ ಎಂಬ ಮೂರು ತತ್ವಗಳು (ಮುನ್ನಂ ಅಧಃಪ್ರವೃತ್ತಮಪೂರ್ವಮೆಂಬ ಕರಣತ್ರಯದಿಂ: **ಮಲ್ಲಿನಾಪು,** ೧೪. ೫೭ ವ)

**ಕರಣಲಬ್ಧಿ** – ಐದು ಲಬ್ಧಿಗಳಲ್ಲಿ ಒಂದು, ಕರಣ ಪರಿಣಾಮಗಳ ಪ್ರಾಪ್ತಿ (ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ: **ಸುಕುಮಾಚ,** ೩. ೩೯ ವ)

**ಕರಣಾನುಯೋಗ** – ನಾಲ್ಕು ಅನುಯೋಗಗಳಲ್ಲಿ ಒಂದು, ಲೋಕದ ಪರಿಮಾಣ ಇತ್ಯಾದಿಗಳನ್ನು ಹೇಳುವುದು (ಕರಣಾನುಯೋಗಮೆಂಬುದು ಗಣಿತಕೌಶಲರಿದ್ದು ಲೋಕ ದ್ವೀಪ ಸಮುದ್ರ ಪೂರ್ವ ಕ್ಷೇತ್ರ ಕಾಲ ಸಂಖ್ಯಾ ಪರಿಮಾಣ ಪ್ರಖ್ಯಾಪನಂಗೆಯ್ವುದು: **ಚಾವುಂಡಜಯ,** ಪು. ೩೨೫)

**ಕರ್ಣಜಾಪ್ಯಮಂತ್ರ** – ಮಂತ್ರಗಳಲ್ಲಿನ ಐದು ಬಗೆಗಳಲ್ಲಿ ಒಂದು, ಶಿವಗತಿಗೆ ಕಾರಣವಾಗುವುದು (ಕ್ರಿಯಾಮಂತ್ರಂ ಸಪ್ತಪರಮ ಸ್ಥಾನಾರ್ಹಂತ್ಯಮುಂ ಮಾೞ್ಕುಂ; ಅಗ್ನಿಹೋತ್ರಮಂತ್ರಂ ಸಿದ್ಧಸೇವೆಗೆ ಹೇತು; ಯಜ್ಞಮಂತ್ರ ಪರಮೇಷ್ಠಿಸೇವಗೆ ಹೇತು; ಸಂಯಮ ಮಂತ್ರ ಸಕಲ ವೃತ್ತಿಗೆ ಹೇತು, ಕರ್ಣಜಾಪ್ಯಮಂತ್ರಂ ಶಿವಗತಿಗೆ ಕಾರಣಂ, ಇವಯ್ದು ನಿರವದ್ಯ ಮಂತ್ರಂಗಳ್: **ಚಾವುಂಡಜಯ,** ಪು. ೧೮೮)

**ಕರ್ತ್ರನ್ವಯಕ್ರಿಯೆ** – ಭವ್ಯಜೀವನಿಗೆ ಪ್ರಾಪ್ರವಾಗುವ ಏಳು ಕ್ರಿಯೆಗಳು (ಸಜ್ಜಾತಿ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಪರಮಾರ್ಹಂತ್ಯ, ಪರಿನಿರ್ವಾಣಮೆಂಬೇೞುಂ ಪರಮಸ್ಥಾನನಾಮಕರ್ತ್ರನ್ವಯ ಕ್ರಿಯೆಗಳಂ: **ಆದಿಪು,** ೧೫. ೧೬ ವ)

**ಕರ್ಮ** – ಜೀವವನ್ನು ಪರತಂತ್ರಗೊಳಿಸುವ ಪಾಪ–ಪುಣ್ಯಗಳು (ಅನಂತನಾಮಂ ಉದ್ದಾಮ ಅನಂತ ಕರ್ಮಜಯದಿಂ ದೊರೆವೆತ್ತುದು: **ಅನಂತಪು,** ೧. ೧)

**ಕರ್ಮಕ್ಷಪಣ** – ಕರ್ಮವನ್ನು ಕ್ಷೀಣಗೊಳಿಸಲು ಆಚರಿಸುವ ಒಂದು ವ್ರತ (ಸಕಲ ಶ್ರಾವಕವ್ರತಂಗಳಂ ಕೈಕೊಂಡು ನೂಱ ನಾಲ್ವತ್ತು ದಿವಸಂ ನೆಱೆವ ಕರ್ಮಕ್ಷಪಣಮೆಂಬ ನೋಂಪಿಯಂ ನೋಂತು: **ಚಾವುಂಡಜಯ,** ಪು. ೨೧)

**ಕರ್ಮಕ್ಷಯ** – ಇರುವ ಕರ್ಮಗಳನ್ನು ನಾಶಗೊಳಿಸುವುದು ಮತ್ತು ಬರುವ ಕರ್ಮಗಳನ್ನು ನಿವಾರಿಸುವುದು (ಪ್ರಾಯೋಪಗಮನದಿಂ ಸಂನ್ಯಸನಂ ಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆವೋದ: **ವಡ್ಡಾರಾ,** ಪು. ೧. ಸಾ. ೧೦)

**ಕರ್ಮನಿರ್ಜರೆ** – ಕರ್ಮಕ್ಷಯ (ತಚ್ಚರಿತಮಂ ಕಾವ್ಯಂಗಳೊಳ್ಕೂಡೆ ಬಣ್ಣಿಸಿ ಪೇಲ್ವಾತನ ಕರ್ಮನಿರ್ಜರೆಯನಂತಿತಿಂತೆನಲ್ ಬರ್ಕುಮೇ: **ಆದಿಪು,** ೧. ೩೭)

**ಕರ್ಮಪಾಕ** – ಪೂರ್ವಜನ್ಮದ ಕರ್ಮಗಳ ಫಲ (ಸ್ಥಾವರನಾಮ ಕರ್ಮಪಾಕಾಧೀನಂಗಳ್ ಸ್ಥವರಂಗಳ್: **ಆದಿಪು,** ೧೦. ೬೧ ವ)

**ಕರ್ಮಭೂಮಿ** – ಅವಸರ್ಪಿಣಿ ಕಾಲದ ಐದು–ಆರನೆಯ ವಿಭಾಗಗಳಿಗೆ ಸಂಬಂಧಿಸಿದ ಭೂಮಿ, ಭಾರತ ಮತ್ತು ಐರಾವತ ಕ್ಷೇತ್ರಗಳೊಳಗಿನ ಆರ್ಯಖಂಡ (ಇದು ಕರ್ಮಭೂಮಿಯಂದಂ ಪೊದಳ್ದು ತೋಜಿದುದು ಭೋಗಭೂಮಿಸ್ಥಿತಿ ಕುಂದಿದುದು: **ಆದಿಪು,** ೬. ೬೩)

**ಕರ್ಮವಿಪಾಕ** – ಪೂರ್ವಾರ್ಜಿತ ಕರ್ಮದ ಫಲ (ನಾನಾವಿಧ ಕರ್ಮವಿಪಾಕ ವಿಚಯಮುಮಂ ಊರ್ಧ್ವ ಅಧೋ ಮಧ್ಯಗತಾಸಮಸ್ಥಿತಿಯ ಲೋಕಸ್ಥಿತಿ ಸ್ಮರಣ ಪರಿಣತ ಸಂಸ್ಥಾನವಿಚಯಮುಮಂ; **ಶಾಂತಿಪು,** ೯. ೧೧೮ ವ)

**ಕರ್ಮಾಯತ್ತ** – ಕರ್ಮವಶ, ಕರ್ಮಕ್ಕೆ ಅಧೀನವಾಗಿರುವುದು (ಪುರಾತನ ಕರ್ಮಾಯತ್ತಮಲ್ತೆ ದೇಹಿಗಳೆಸಕಂ: **ಪಂಪರಾ,** ೯. ೯೬)

**ಕರ್ಮಾಷ್ಟಕ** – ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃಕರ್ಮ, ನಾಮಕರ್ಮ, ಗೋತ್ರಕರ್ಮ, ವೇದನೀಯ ಕರ್ಮ ಎಂಬ ಜೀವದ ಎಂಟು ಕಿಲ್ಬಿಷಗಳು (ಖಳಕರ್ಮಾಷ್ಟಕಮಂ ಪಡಲ್ವಡಿಸಿ ಸಂಸಾರಾಬ್ಧಿಯಂ ದಾಂಟಿ ನಿಶ್ಚಲಸೌಖ್ಯಾಸ್ಪದಮಂ ತ್ವದೀಯಜನಕಂ ಕೈಕೊಂಡೊಡೆ: **ಆದಿಪು,** ೧೬. ೫೫)

**ಕಲ್ನೆಲೆ** – ಬೇಸಗೆಯಲ್ಲಿ ಕಲ್ಲ ಮೇಲೆ ನಿಂತು ಮಾಡುವ ತಪಸ್ಸು (ಪೊತ್ತ ನೆಲಂ ನೆಲದೊಡನಡೆಯೊತ್ತಿದಪುದು ಸೆಲೆಯ ಮೇಲೆ ಸೂರ್ಯಾಂಶುಗಳಬ್ಬುತ್ತುಮಿರೆ ನಿಯಮನಿಶ್ಚಲಚಿತ್ತಂ ಬೇಸಗೆಯೊಳಂದು ಕಲ್‌ನೆಲೆ ನಿಂದಂ: **ಅಜಿತಪು,** ೧೨. ೪)

**ಕಲ್ನೆಲೆನಿಲ್** – 'ಕಲ್ನೆಲೆ' ತಪಸ್ಸಿಗೆ ನಿಲ್ಲು (ನಿಂದುರಿವ ನಿದಾಘದೊಳ್ ಋಷಿಯರಂದದೆ ಕಲ್ನೆಲೆನಿಲ್ವನಾವವಂ: **ಸಮಯಪ,** ೭. ೩)

**ಕಲ್ಪ** – ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಅರುಣ, ಅಚ್ಯುತ ಎಂಬ ಹದಿನಾರು ಬಗೆಗಳ ಸ್ವರ್ಗ (ಅನ್ನೆಗಮಿತ್ತ ನಾಲ್ಕನೆಯ ಕಲ್ಪದ ಅನಲ್ಪಮೆನಿಪ್ಪ ಸೌಖ್ಯಮಂ ... ಪೀರ್ದು: **ಕರ್ಣನೇಮಿ,** ೨. ೨); ಉತ್ಸರ್ಪಿಣಿ ಅವಸರ್ಪಿಣಿಗಳ ಒಟ್ಟು ಕಾಲಾವಧಿ (ಉತ್ಸರ್ಪಿಣಿಯುಂ ಅವಸರ್ಪಿಣಿಯುಂ ... ಅವೆರಡುಂ ಕೂಡಿದೊಡೆ ಕಲ್ಪಮೆಂಬುದಕ್ಕುಂ: **ಅಜಿತಪು,** ೩. ೧೫ ವ)

**ಕಲ್ಪಕುಜ** – ಕಲ್ಪವೃಕ್ಷ, ಬೇಕಾದ್ದನ್ನು ಕೊಡುವ ಹತ್ತು ಬಗೆಯ ಕಲ್ಪವೃಕ್ಷಗಳು (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ ನೀಡಿದ ಬೇಟ್ಪಿರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨); ನೋಡಿ, **'ಅಂಗಕಲ್ಪಕುಜ'**

**ಕಲ್ಪಜ** – ಸ್ವರ್ಗದಲ್ಲಿ ಹುಟ್ಟಿದವನು (ಅಜಿತೇಂದ್ರನನಿತರರ್ ಕಲ್ಪಜೇಂದ್ರರಿಕ್ಕೆಲದೊಳೆಸೆದು ವೇಷ್ಟಿಸಿ ವರೆ: **ಅಜಿತಪು,** ೪. ೨೫); ಸ್ವರ್ಗದಲ್ಲಿ ಹುಟ್ಟಿದುದು (ಕಲ್ಪಜಮಣಿಮಯ ಭೂಷಾಕದಂಬಂಗಳಿಂ ಕಲ್ಪಜವಸ್ತ್ರಾನೀಕದಿಂದರ್ಚಿಸಿದನೊಸೆದು ಸೌಧರ್ಮಕಲ್ಪಾಮರೇಂದ್ರಂ: **ಮಲ್ಲಿನಾಪು,** ೧೩. ೧೬)

**ಕಲ್ಪಜಪತಿ** – ದೇವೇಂದ್ರ (ನಿಜಕುಸುಮಸ್ರಜಂ ಕೊರಗಿದತ್ತು ಮೊಗಂ ಕೊರಗಿತ್ತೆ ... ಮನಂ ನಡುಗಿತ್ತೆ ಕಲ್ಪಜಪತಿಗೆಂದು ತಮ್ಮೊಳುಲಿದರ್ ಸುರರ್: **ಚಂದ್ರಪ್ರಪು,** ೯. ೫೭)

**ಕಲ್ಪಪಾದಪ** – ಕಲ್ಪವೃಕ್ಷ (ಕ್ರೀಡೆಯೊಳಾದ ಪರಿಶ್ರಮಮಂ ತನ್ಮುನಿಪಾದ ಕಲ್ಪಪಾದಪ ಚ್ಛಾಯೆಯೊಳ್ ಕಳೆಯಲ್ಬರ್ಪಂತೆ ಬಂದು: **ಶಾಂತಿಪು,** ೬. ೬೬ ವ)

**ಕಲ್ಪಭೂರುಹ** – ಕಲ್ಪವೃಕ್ಷ (ನೀವೆ ಶರಣೆಂ ಶರಣಾಗತಕಲ್ಪಭೂರುಹಾ, **ಸುಕುಮಾಚ,** ೩. ೨೭)

**ಕಲ್ಪಮಹೀಜ** – ಕಲ್ಪಕುಜ (ಕಲ್ಪಮಹೀಜದ ಪಕ್ಕದಿರ್ಕೆಲಂ ಬಿಡಿದು ಮಡಲ್ತು ತೋಱುವ ಲತಾವಳಿಗಳೆಗೆಣೆಯಾಯ್ತು: **ಆದಿಪು,** ೨. ೪)

**ಕಲ್ಪವಾಸಿಗ** – ಸ್ವರ್ಗವಾಸಿ, ದೇವತೆ (ನವಗ್ರಹಮಂಡಲಮಲ್ತು ಕಲ್ಪವಾಸಿಗರ ವಿಮಾನಮಲ್ತು ಜನಕಂ ಬರುತಿರ್ದಪಂ: **ಪಂಪರಾ,** ೫. ೨೭)

**ಕಲ್ಪವೃಕ್ಷ** – ಚಕ್ರವರ್ತಿಗಳು ಮಾಡುವ ಒಂದು ಪೂಜೆ (ಯಾಚಕ ವಾಚಕ ನರ್ತನ ಕಥಕ ಪುಣ್ಯಪಾಠಕಪ್ರಭೃತಿ ಸಮಸ್ತ ಜನಕ್ಕಂ ಬೇಡಿದುದಂ ಕೊಟ್ಟು ಚಕ್ರವರ್ತಿಗಳ್ ಮಾಟ್ಪ ಕಲ್ಪವೃಕ್ಷಮೆಂಬ ಪೂಜೆಯುಂ: **ಸುಕುಮಾಚ,** ೬. ೨೫ ವ); ಮದ್ಯಾಂಗ, ಭೂಷಣ, ವಸ್ತ್ರ, ತೂರ್ಯ, ಮಾಲ್ಯ, ಗೃಹ, ಭಾಜನ, ಭೋಜನ, ಜ್ಯೋತಿರ್, ದೀಪ ಎಂಬ ಹತ್ತು ವಿಧವಾದ ಕಲ್ಪವೃಕ್ಷಗಳಲ್ಲಿ ಒಂದು, ದೀಪಗಳನ್ನು ಒದಗಿಸುವ ಕಲ್ಪವೃಕ್ಷ; (ಜಗಜ್ಜನಜಂಗಮ ಕಲ್ಪವೃಕ್ಷಂ ಕಲ್ಪವೃಕ್ಷಮೆಂಬ ಮಹಾಮಹಿಮೆಯಂ ಪಹಾಪೂತ ಜಿನಾಲಯದೊಳ್ ಮುನ್ನಂ ಮಾಡಿ: **ಆದಿಪು,** ೩. ೩೦ ವ)

**ಕಲ್ಪಾಮರ** – ಕಲ್ಪಗಳಲ್ಲಿರುವ ದೇವತೆ (ಅದೇಂ ನಲಿದನೋ ಕಲ್ಪಾಮರಂ ಕಲ್ಪದೊಳ್: **ಸುಕುಮಾಚ,** ೯. ೩೫)

**ಕಲ್ಪಾವನಿಜ** – [ಕಲ್ಪ+ಅವನಿಜ] ಕಲ್ಪವೃಕ್ಷ (ತೇಜೋಬಳ ಆಯುರಾರೋಗ್ಯ ಸಮೇತಮಂ ಅಮೃತಾನ್ನಮನೊಲ್ದೀಗುಂ ಆಗಳುಂ ಭೋಜನಾಂಗ ಕಲ್ಪಾವನಿಜಂ: **ಆದಿಪು,** ೫. ೩೯)

**ಕಲ್ಪೇಶ್ವರ** – ಸ್ವರ್ಗಲೋಕವನ್ನಾಳುವ ಇಂದ್ರ (ಕಲ್ಪೇಶ್ವರನನುರಾಗದಿನೊಡನೊಡನೆ ಸುರಿಯೆ ಪಾಲ್ಗಡಲೊಂದುಂಟಾಗದೆ ಮೇರುವ ತುದಿಯೊಳಂ; **ಆದಿಪು.** ೭. ೮೭)

**ಕಲ್ಯಾಣದ್ವಯ** – ಗರ್ಭಾವತರಣ ಮತ್ತು ಜನನಕಲ್ಯಾಣಗಳು (ಬಗೆದಂತಾಗೆ ಸುರೇಂದ್ರರಿಂ ಕ್ರಮದೆ ಕಲ್ಯಾಣದ್ವಯಂ ಜೀನದೀಕ್ಷೆಗೆ ಪೂಣ್ದು: **ಆದಿಪು,** ೩. ೮೦)

**ಕಲ್ಯಾಣಪರಿಮಿತ** – ಮದುವೆಯ ನಿರ್ಬಂಧ (ಮುಕ್ತಿಸಾಮ್ರಾಜ್ಯದೊಳ್ ಅತಿಪ್ರಾಜ್ಯ ಸಂಜನಿತನಿಸ್ಪೃಹನಂ ಅನವರತ ಕಲ್ಯಾಣಪರಿಮಿತದೊಳ್ ... ನಿಜೆಸುವುದುಂ: **ಆದಿಪು,** ೮. ೮ ವ)

**ಕವಾಟಕ್ರಿಯೆ** – ಕೇವಲಿಯ ಆತ್ಮವು ಮೂಲಶರೀರದಿಂದ ಮೂರರಷ್ಟು ದಪ್ಪವೂ ಏಳು ರಜ್ಜು ಅಗಲವಾಗಿಯೂ ವ್ಯಾಪಿಸುವುದು (ದಂಡಕ್ರಿಯಾ ನಂತರಸಮಯದೊಳ್ ಪೂರ್ವೋಕ್ತ ಬಾಹುಲ್ಯದಿಂ ಲೋಕಾಕಾಶವ್ಯಾಪಕ ಕವಾಟಕ್ರಿಯೆಯಂ ನೆಱಪಿ: **ಆದಿಪು,** ೧೬. ೪೯ ವ)

**ಕಷಾಯ** – ಸುಖದುಃಖಗಳನ್ನುಂಟುಮಾಡುವ ನಾಲ್ಕು ಬಗೆಯ ದೋಷ: ಕ್ರೋಧ, ಮಾನ, ಮಾಯಾ, ಲೋಭಗಳು (ಕಷಾಯಭಟರಂ ಬೆನ್ನಟ್ಟಲೊಪ್ಪಿ ಮಹಾವ್ಯವಸಾಯಂ ತಮಗಾಗೆ ಭವ್ಯಕಜನಕೆಲ್ಲಂ ಶಾಂತಿಮಿಚ್ಛಂತಿ ಸಾಧವ ಎಂಬುತ್ತಮ ಸಾಧುವರ್ಗಮೆ ನೆರಂ ಸ್ವರ್ಗಾಪವರ್ಗಂಬರಂ: **ಅಜಿತಪು,** ೧. ೫)

**ಕಷಾಯಚತುಷ್ಟಯ** – ಸುಖದುಃಖಗಳನ್ನುಂಟುಮಾಡುವ ನಾಲ್ಕು ಬಗೆಯ ದೋಷ: ಕ್ರೋಧ, ಮಾನ, ಮಾಯಾ, ಲೋಭಗಳು (ಕಷ್ಟತರಮಂ ಕಷಾಯಚತುಷ್ಟಯ ದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ ಇನ್ನನಂತ ಚತುಷ್ಟಯಮಂ ಪೊರ್ದುರ್ ಪೊರ್ದದಿರು ಸಂಸೃತಿಯಂ: **ಅಜಿತಪು,** ೬. ೭೩)

**ಕಬ್ಬಪ್ಪು** – [**ಕಟವಪ್ರ**] ಶ್ರವಣಬೆಳುಗೊಳ (ಕಬ್ಬಪ್ಪು ನಾಡದನೆಯ್ದಿ ಪೋಗುತ್ತಂ ಭದ್ರಬಾಹು ಭಟ್ಟಾರರ್ ತಮ್ಮಾಯುಷ್ಯಪ್ರಮಾಣಂ ಅಜೆದಾಮಿಲ್ಲಿ ಸಂನ್ಯಸನಂ ಗೆಯ್ದಪ್ಪೆವು ... ಎಂದು: **ವಡ್ಡಾರಾ,** ಪು ೮೮, ಸಾ ೧೭)

**ಕಾಂತಾರಚರ್ಯೆ** – ಕಾಡಿನಲ್ಲಿ ಭಿಕ್ಷೆಗಾಗಿ ಸಂಚರಿಸುವುದು (ಮಾಸೋಪವಾಸದ ಪಾರಣೆಯೊಳ್ ಕಾಂತಾರಚರ್ಯೆಗೆ ಬರ್ಪುದುಂ: **ಪಂಪರಾ,** ೮. ೭೭)

**ಕಾಂತಾರಭಿಕ್ಷೆ** – ಕಾಂತಾರಚರ್ಯೆ (ಯೋಗ್ಯಫಲಾಪೇಕ್ಷೆಯಿಂ ಕಾಂತಾರಭಿಕ್ಷೆಗೆ ಬರುತಿರೆ: **ಪಂಪರಾ,** ೨. ೫೨ ವ)

**ಕಾಕಿಣೀಮಣಿ** – ಕಾಕಿಣೀರತ್ನ (ಚಮೂಪತಿ ಕಾಕಿಣೀಮಣಿಸ್ಯಂದನದಿಂದಂ ಇರ್ದಸೆಯ ಕೇಗ್ರ್ಗಳೊಳಂ ಬರೆದು: **ಶಾಂತಿಪು,** ೧೧. ೪೬)

**ಕಾಕಿಣೀರತ್ನ** – ಒಂದು ಜೀವರತ್ನ, ಉಜ್ಜಿದರೆ ಬೆಳಕು ಬೀರುವ ರತ್ನ (ಚಿಂತಾಜನನಿಯೆಂಬ ಕಾಕಿಣೀರತ್ನಮುಂ ... ಎಂದಿಂತು ಜೀವಾಜೀವರತ್ನಂ: **ಆದಿಪು,** ೧೧. ೩ ವ)

**ಕಾಪಿಷ್ಠ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಕಾಮಕಥೆ** – ಧರ್ಮಕಥೆಗಳಲ್ಲಿನ ಒಂದು ವಿಧ; ಗಂಡುಹೆಣ್ಣುಗಳ ಆಕರ್ಷಣೆಯನ್ನು ನಿರೂಪಿಸುವ ಕತೆ (ಅರ್ಥಕಥೆಯೆಂದುಂ ಕಾಮಕಥೆಯೆಂದುಂ ಧರ್ಮಕಥೆಯೆಂದುಂ ವ್ಯಾಮಿಶ್ರಕಥೆಯೆಂದುಂ ಚತುರ್ವಿಧಮಕ್ಕುಂ ... ಕಾಮಕಥೆ ಯೆಂಬುದು ಸ್ತ್ರೀಪುರುಷ ಸ್ನಿಗ್ಧನಯನ ದೂತಸಂಪ್ರೇಷಣಲಳಿತ ಹಸಿತ ಮನೋಹರ ಸಂಭಾಷಣ ಪರಸ್ಪರ ಭಾವಪರೀಕ್ಷಣ ವಿಜೃಂಭಣಾಲಿಂಗನವಿಮರ್ದನಾದಿ ಗೋಚರಮಪ್ಪುದು. **ಚಾವುಂಡಜಯ,** ಪು. ೩೨೬)

**ಕಾಮನಿರ್ಜರೆ** – ಕಾಮನಾಶವಾಗುವುದು (ತರದಿಂದೆ ಕಾಮನಿರ್ಜರೆ ಸರಾಗ ಸಂಯಮಗುಣಂ ಸ್ವಭಾವಮೃದುತ್ವಂ ...ಆಸ್ರವಮಕ್ಕುಂ: **ಸುಕುಮಾಚ,** ೮. ೨೧)

**ಕಾಮಬ್ರಹ್ಮವ್ರತ** – ಒಂದು ಬಗೆಯ ವ್ರತ, ಬ್ರಹ್ಮಚರ್ಯದಲ್ಲಿದ್ದಾಗ ಮೂಗು ಕಿವಿ ಕಣ್ಣು ಎಂಬ ಭೋಗೇಂದ್ರಿಯಗಳಿಂದ ಗಂಧ ರೂಪ ಶಬ್ದಗಳ ಅನುಭವವನ್ನು ಮಾತ್ರ ಮಾಡತಕ್ಕದ್ದು, ಗೃಹಸ್ಥಾಶ್ರಮಕ್ಕೆ ಬಂದ ಮೇಲೆ ಕಾಮಬ್ರಹ್ಮವ್ರತ ಅಂದರೆ ರಸ ಸ್ಪರ್ಶ ಇವುಗಳನ್ನು ಅನುಭವಿಸತಕ್ಕದ್ದು (ಭೋಗಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನುತ್ತರಕ್ರಿಯೆಯರ್ಪಿನೆಗಂ ನಡಯಿಸುವುದು ವ್ರತಾವತರಣಕ್ರಿಯೆ: **ಚಾವುಂಡಜಯ,** ಪು. ೧೮೨)

**ಕಾಮವೃಷ್ಟಿ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲೊಂದಾದ ಗೃಹಪತಿರತ್ನದ ಹೆಸರು (ನಾಮಗ್ರಹಣಮಾತ್ರದಿಂದಮೆ ಸಮಸ್ತವಸ್ತು ವಿಸ್ತಾರಾಂತರ್ನಿಹಿತ ವಸ್ತುಸಮರ್ಪಣ ಪರಾಯಣನಪ್ಪ ಕಾಮವೃಷ್ಟಿಯೆಂಬ ಗೃಹಪತಿರತ್ನಮುಂ: **ಆದಿಪು,** ೧೧. ೩ ವ)

**ಕಾಯಕ್ಲೇಶ** – ಅನಶನ, ಅವಮೌದಾರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತ ಶಯನಾಸನ, ಕಾಯಕ್ಲೇಷ ಎಂಬ ಬಾಹ್ಯತಪಸ್ಸುಗಳಲ್ಲಿ ಆರನೆಯದು (ಕಾಯಕ್ಲೇಷಮೆಂಬ ಆಱನೆಯ ತಪಮನೆತ್ತಿಕೊಂಡು: **ಆದಿಪು,** ೬. ೩೦ ವ)

**ಕಾಯಗುಪ್ತಿ** – ಮೂರು ಗುಪ್ತಿಗಳಲ್ಲಿ ಒಂದು, ದೇಹವನ್ನು ಲೌಕಿಕ ವಿಷಯಗಳಲ್ಲಿ ತೊಡಗಿಸದಂತೆ ನಿಗ್ರಹಿಸುವುದು (ಮನೋವಾಕ್ಕಾಯಗುಪ್ತಿತ್ರಯಂ ಘನಮಾಗಿರ್ದೊಡೆ ಬಾರವಲ್ಲದೊಡವಂ ತಾಂಗಲ್ ಸಮರ್ಥರ್ಕಳಾರ್: **ಜೀವಸಂ,** ೧೫೭. ೪)

**ಕಾಯಪ್ರವೀಚಾರ** – ಮನುಷ್ಯರಂತೆ ದೇಹಸುಖ ಪಡೆಯಬಲ್ಲ ದೇವತೆ, ಸುರತಾಸಕ್ತ ದೇವತೆ; ಈಶಾನಕಲ್ಪದವರೆಗೆ ಅಮರರು ದೈಹಿಕವಾಗಿ ಮೈಥುನ ಸುಖವನ್ನುಭವಿಸುವರು, ಆ ಮೇಲಣ ಲೋಕಗಳವರು ಮನಃಪ್ರವೀಚಾರ – ಮನಸ್ಸಿನಿಂದ ಮೈಥುನಸುಖ – ಅನುಭವಿಸುವರು (ಸುರಭಿ ನಿಶ್ವಾಸನುಂ

ಕಾಯಪ್ರವೀಚಾರನುಂ ಅಪರಿವ್ಲಾನ ದಿವಿಜಕುಸುಮಶೇಖರನುಮಾಗಿ: **ಕರ್ಣನೇಮಿ,** ೧. ೧೦೪ ವ)

**ಕಾಯಶುದ್ಧಿ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾ ಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ಕಾಯಸ್ಥಿತಿ** – ದೇಹ ಕಾಪಾಡಲು ಮಾಡಬೇಕಾದ ಆಹಾರಸೇವನೆ (ಪತಿವಿಗಮದೊಳ್ ಅಸಿಧಾರಾವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂತತಿಯಂ ಕಾಯುತೆ ಕಾಯಸ್ಥಿತಿಯಂ ತಾನತ್ತಿಮಬ್ಬೆ ಮಾಣ್ಬಳೆ ಮಾಣಳ್: **ಅಜಿತಪು,** ೧. ೫೦)

**ಕಾಯೋತ್ಸರ್ಗ** – ಕೈ ಇಳಿಬಿಟ್ಟುಕೊಂಡು ನೇರವಾಗಿ ಮತ್ತು ನಿಶ್ಚಲವಾಗಿ ನಿಂತಿರುವುದು (ಭರತಂ ಕಾಯೋತ್ಸರ್ಗದೊಳಿರೆ ಚಿತ್ತನಿರೋಧದಿಂ ಸಡಿಲ್ದೊಡೆ ತನು: **ಆದಿಪು,** ೧೬. ೩೭)

**ಕಾರ್ಮಣ** – ಜೀವರುಗಳಿಗಿರುವ ಐದು ವಿಧವಾದ ಶರೀರಗಳಲ್ಲಿ ಒಂದು, ಜೀವಪ್ರದೇಶದೊಂದಿಗೆ ಬೆರೆತಿರುವ ಅಷ್ಟಕರ್ಮಗಳ ಸೂಕ್ಷ್ಮಪುದ್ಗಲಸ್ಕಂದರೂಪಿ ಶರೀರ (ಅನುಕ್ರಮದಿಂ ಅಯ್ದುಭೇದದಿನೌದಾರಿಕವೈಕ್ರಿಯಕಮಾಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ: **ಸುಕುಮಾಚ,** ೮. ೧೦)

**ಕಾಲ** – ಇರದಲ್ಲಿ ಅತೀತ ಅನಾಗತ ವರ್ತಮಾನ ಎಂಬ ಮೂರು ವಿಧಗಳು (ಕಾಲಮೆಂಬುದು ಅತೀತಾನಾಗತ ವರ್ತಮಾನಾತ್ಮಕ ತ್ರಿಭೇದಮುಂ: **ಚಾವುಂಡಜಯ,** ಪು.. ೬)

**ಕಾಲತ್ರಯ** – ಭೂತ, ವರ್ತಮಾನ, ಭವಿಷ್ಯತ್ ಕಾಲಗಳು (ಅಪಗತಕಾಲತ್ರಯಂ ಅನಾಪ್ತಗತಗುಪ್ತಿತ್ರಯಂ: **ಪುಷ್ಪದಂಪು,** ೧೪. ೧೫); ಮೂರು ಹೊತ್ತು (ಕಾಲತ್ರಯ ಋತುಷಟ್ಕ ಉಚಿತಂಗಳಪ್ಪ ಫಲಪ್ರಸವಂಗಳೇಕ ಸಮಯ ಪ್ರಸವ ಮೆಂತಾದುದೆಂದು ವಿಸ್ಮಯಂಬಟ್ಟು: **ಚಂದ್ರಪ್ರಪು,** ೨. ೭೮)

**ಕಾಲದ್ರವ್ಯ** – ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಜೀವ ಪುದ್ಗಲ ಧರ್ಮ ಅಧರ್ಮ ಕಾಲ ಮತ್ತು ಆಕಾಶವೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು, (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಂ: **ಸುಕುಮಾಚ,** ೩. ೩೯ ವ)

**ಕಾಲಪರಾವರ್ತನ** – ಅನಂತಸಮಯಗಳನ್ನೂ ಒಳಗೊಂಡಂತೆ ಬೇರೆ ಬೇರೆ ಕಾಲಗಳಲ್ಲಿ ಹುಟ್ಟುವುದು (ಒರ್ಮೆಯೊಂದು ಸಮಯದ ಕಾಲದೊಳ್ ಪುಟ್ಟಿ ಸತ್ತು ತೊಟಲ್ದು ಬಂದಾ ಸಮಯದ ಕೆಲದ ಸಮಯದೊಳ್ ಅನಂತಕಾಲ ಸಮಯಂ ಗಳೆನಿತೊಳವನಿತುಮಂ ಕೂಡಿ ಪುಟ್ಟಿದೊಡದೊಂದು ಕಾಲ ಪರಾವರ್ತನಂ: **ಜೀವಸಂ,** ೫. ೨ ವ)

**ಕಾಲಪರಿವರ್ತನ –** ಉತ್ಸರ್ಪಿಣೀ – ಅವಸರ್ಪಿಣೀ ಕಾಲಗಳ ಎರಡು ಆವೃತ್ತಿಗಳಲ್ಲೂ ಮೊದಲಿಂದ ಕಡೆತನಕ ಜನನಮರಣಗಳನ್ನನುಭವಿಸುವುದು (ಪರಿವರ್ತಿಸುವ ಉತ್ಸರ್ಪಿಣಿ ಅವಸರ್ಪಿಣೀಕಾಲಂಗಳೊಳ್ ... ಸಮಯೋತ್ತರ ವೃದ್ಧಿಯಿಂ ಪರಿಸಮಾಪ್ತಮಾಗೆ ನೆಱಿಮೆಯ್ದಿಸುವುದು ಕಾಲಪರಿವರ್ತನಮೆಂಬುದು: **ಸುಕುಮಾಚ,** ೯. ೬ ವ)

**ಕಾಲಲಬ್ಧಿ –** ಲಬ್ಧಿಪಂಚಕಗಳಲ್ಲಿ ಒಂದು; ಆಧ್ಯಾತ್ಮಿಕ ಜೀವನದ ಆರಂಭಕ್ಕೆ ಪಕ್ವವಾದ ಕಾಲ ಬರುವುದು (ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರಳ್ದಿನಿತುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ: **ಆದಿಪು,** ೨. ೨೨)

**ಕಾಲಸಂಸಾರ –** ಪಂಚ ಸಂಸಾರಗಳಲ್ಲಿ ಒಂದು, ಉತ್ಸರ್ಪಿಣಿಯಯಲ್ಲಿ ಹುಟ್ಟಿ ಸತ್ತು ಜನ್ಮಾಂತರಗಳಲ್ಲಿ ತೊಳಲಿ ಕ್ರಮವಾಗಿ ಅವಸರ್ಪಿಣಿಯಲ್ಲಿ ಹುಟ್ಟುವುದು (ಉತ್ಸರ್ಪಿಣಿಯ ಪ್ರಥಮಸಮಯದೊಳ್ ಪುಟ್ಟಿ ಸತ್ತು ಮತ್ತೊಂದವಸರ್ಪಿಣಿಯ ಸಮಯದೊಳ್ ಪುಟ್ಟಿ ಇಂತುತ್ಸರ್ಪಿಣಿ ಸಮಯಂಗಳೊಳೆನಿತೊಳವನಿತಱೊಳಂ ತೊಟಿಲ್ದು ಕ್ರಮದೊಳೆ ಪುಟ್ಟಿ ಕುಂದೆಯುಂ ಪೆರ್ಚೆಯುಂ ಪುಟ್ಟಿದುದಲ್ಲದೆ ಮತ್ತಂ ಅವಸರ್ಪಿಣಿಯ ಪ್ರಥಮಸಮಯದೊಳ್ ಪುಟ್ಟಿದದು ಕಾಲಸಂಸಾರಂ: **ಚಾವುಂಡಜಯ,** ಪು. ೨೩೧)

**ಕಾಳೋದಕವಾರ್ಧಿ –** ಧಾತಕೀ–ಪುಷ್ಕರ ದ್ವೀಪಗಳ ನಡುವಣ ಪ್ರಳಯಕಾಲದಲ್ಲಿ ಉಕ್ಕಿಬರುವ ಸಮುದ್ರ; ಜಂಬೂದ್ವೀಪದ ಸುತ್ತ ಇರುವುದು ಲವಣಸಮುದ್ರ; ಆ ಸಮುದ್ರ ಸುತ್ತ ಮಂಡಲಾಕೃತಿಯಾಗಿರುವುದು ಧಾತಕೀದ್ವೀಪ: ಆ ದ್ವೀಪದ ಸುತ್ತ ಇರುವ ಸಮುದ್ರಕ್ಕೆ ಕಾಳೋದಕಸಮುದ್ರವೆಂಬ ಹೆಸರು (ಆಗಟಾ ಭಾಗಂ ಲವಣಾಬ್ಧಿಗೆ ಗುಣ್ಪಿನ ತಿಣ್ಪು ನೆಗಟ್ಟೆ ಕಾಳೋದಕವಾರ್ಧಿಗೆ ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ ಸರಿ ಪೋಲ್ವೆಯೆಂಬೆನಱಿಯಲ್ ಪೊಗಟಲ್: **ಶಾಂತಿಪು,** ೩. ೫)

**ಕಾಳೋದಕಸಮುದ್ರ –** ಕಾಳೋದಕವಾರ್ಧಿ (ಘಾತಕೀ ಷಂಡದ್ವೀಪಮದನೆಂಟು ಲಕ್ಷಯೋಜನದಗಲದಿಂ ಸುತ್ತಿರ್ದುದು ಕಾಳೋದಕಸಮುದ್ರಂ: **ಸುಕುಮಾಚ,** ೧೧. ೫೦ ವ)

**ಕಿಲ್ಬಿಷಿಕ –** ದೇವತೆಗಳಲ್ಲಿ ಒಂದು ವರ್ಗ, ಧೀರರಾಗಿರುವವರು, ಅಂತ್ಯವಾಸಸ್ಥಾನೀಯರು (ಆತ್ಮರಕ್ಷಕ ಲೋಕಪಾಲಾಭಿಯೋಗ್ಯ ಕಿಲ್ಬಿಷಕ ಪ್ರಯುಕ್ತರಾಗಿ: **ಕರ್ಣನೇಮಿ,** ೮. ೧೦೯ ವ)

**ಕೀರ್ತಿ –** ಜಿನಜನನಿಯನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

**ಕೀರ್ತಿಮತಿ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಕುಂಚಣಿಗೆ** – ಜೈನ ಮುನಿಗಳ ಕೈಯಲ್ಲಿರುವ ನವಿಲುಗರಿಯ ಕುಂಚ (ಮುನಿಗಳ ಕೆಯ್ಯ ಕುಂಚಣಿಗೆ ಚಾಂದ್ರಮಸೀದಳಕುಂಡಿಕಾಳಿ ತಜ್ಜಿನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿಗಟ್ಟಿದತ್ತೆನಿಸಿತು: **ಅನಂತಪು,** ೩. ೩೧)

**ಕುಬೇರಕಾಂತ** – ಚಕ್ರವರ್ತಿಯ ಬಳಿಯ ಅಕ್ಷಯ ಭಂಡಾರ (ಕುಬೇರಕಾಂತಮೆಂಬ ತವದ ಭಂಡಾರಮುಮಂ: **ಆದಿಪು,** ೧೫. ೩ ವ);

**ಕುಬೇರಾದ್ರೀಂದ್ರ** – ಕುಬೇರನ ಆಧಿಪತ್ಯದ ಬೆಟ್ಟ; ಕೈಲಾಸಪರ್ವತ (ಕೇವಲಿ ಕುಬೇರಾಂದ್ರೀಂದ್ರಮಂ ಮುಟ್ಟಿದಂ; **ಪಂಪರಾ,** ೧೬. ೭೮)

**ಕುಮುದ** – ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ಕುಮುದಾಂಗ** – ಒಂದು ಕಾಲಗಣನೆ (ಅನೇಕ ಸಂವತ್ಸರಸಹಸ್ರ ಅತಿಕ್ರಮದೊಳ್ ಪಂಚವಿಂಶತ್ಯಧಿಕ ಧನುರುತ್ಸೇಧನುಂ ಕುಮುದಾಂಗಸಂಖ್ಯಾತ ವರ್ಷಾಯುಷ್ಯನುಮಾಗಿ: **ಆದಿಪು,** ೬. ೬೦ ವ)

**ಕುರು** – ಭರತಕ್ಷೇತ್ರದ ಆರ್ಯಖಂಡದ ಒಂದು ದೇಶ (ಕುರುಭೂಮಿಗಳೊಪ್ಪಿದುವರ್ಧ ಚಂದ್ರನಾಕಾರದಿನುಚಿತದಶಾಂಗಕಲ್ಪಕುಜನಿಳಯಂಗಳ್: **ಆದಿಪು,** ೨. ೨೯)

**ಕುಲಕರ** – ಕುಲಧರ, ಮನು (ಕುಳಧರನುಂ ಕುಳಕರನುಂ ಕುಳತಿಳಕನುಮೆನಿಪ ನಾಭಿರಾಜಂಗೆ: **ಆದಿಪು,** ೬. ೭೯)

**ಕುಲಚರ್ಯಾ** – ಒಂದು ಗರ್ಭಾನ್ವಯಕ್ರಿಯೆ, ಕುಲಾಚಾರ (ಕುಲಚರ್ಯಾ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಕುಲಧರ** – ಒಬ್ಬ ಮನುವಿನ ಹೆಸರು (ಆತನಿಂ ಬೞಿಯಂ ಮೂಱನೆಯ ಕುಲಧರಂ ಕ್ಷೇಮಂಕರನೆಂಬಂ:

**ಕುಲಧರಕುಲ** – ಮನುಗಳ ವಂಶ (ತಿರಿತಿರಿದು ಮಾಡಿದಂ ಕುಲಧರಕುಲದೊಳ್ ಪಿರಿದು ಮಹಿಮೆಯಂ ನಿಮ್ಮರಸಂ: **ಆದಿಪು,** ೧೪. ೬೯)

**ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆ** – ಕುಲ ಮತ್ತು ಜಾತಿಗಳಿಗೆ ಅನುಗುಣವಾಗಿ ಸಾಧಿಸಿಕೊಳ್ಳಬೇಕಾದ ವಿದ್ಯೆ (ಪ್ರಜ್ಞಪ್ತಿ ಕಾಮರೂಪಿಣಿ ಅಗ್ನಿಸ್ತಂಭಿನಿ ಉದಕಸ್ತಂಭಿನಿ ವಿಶ್ವಪ್ರವೇಶಿನಿ ಅಪ್ರತಿಘಾತಗಾಮಿನಿ ಆಕಾಶಗಾಮಿನಿ ಉತ್ಪಾಟಿನಿ ವಶೀಕಾರಿಣಿ

ಆವೇಶಿನಿ ಪ್ರಸ್ಥಾಪನಿ ಪಮೋಹಿನಿ ಪ್ರಹರಣಿ ಸಂಕ್ರಮಣಿ ಆವರ್ತಿನಿ ಸಂಗ್ರಹಿಣಿ ಭಂಜಿನಿ ವಿಘಟನಿ ಪ್ರಹಾಪಣಿ ಪ್ರಭಾವತಿ ಪ್ರಳಾಪನಿ ನಿಃಕ್ಷೇಪಿಣಿ ಶಬರಿ ಚಂಡಾಳಿ ಮಾತಂಗಿ ಗೌರಿ ಭಟ್ಟಾಂಗಿ ಮುದ್ಗಿ ತಸಂಕುಳಿ ಕುಂಭಾಡಿ ವೀರದಳವೇಗಿ ಮನೋವೇಗಿ ಚಂಡವೇಗಿ ಚಪಳವೇಗಿ ಮಹಾವೇಗಿ ಪರ್ಣಲಘಿ ಲಘುಕರಿ ವೇಗಾವತಿ ಶೀತವೇತಾಳಿ ಸರ್ವ ವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚಿನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪))

**ಕುಲಿಶಾಸ್ತ್ರ** – ದೇವೇಂದ್ರ (ಸಿಂಹಾಸಂದಿಯೊಳ್ ಬಾಲನಂ ಕುಳಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೇಂ ಸಂತಸಂಬಟ್ಟನೋ: **ಆದಿಪು,** ೭. ೧೧೦)

**ಕುಳಚರ್ಯಾಕ್ರಿಯೆ** – ಷಟ್ಕರ್ಮಗಳನ್ನು ಆಚರಿಸುತ್ತ ಗೃಹಸ್ಥಧರ್ಮವನ್ನು ಅನುಸರಿಸುವುದು (ಪೂಜಾದತ್ತಿವಾರ್ತಾದಿ ಲಕ್ಷಣಮಪ್ಪಾರ್ಯ ಷಟ್ಕರ್ಮವರ್ತನದಿಂ ಗೃಹಸ್ಥಕುಳಧರ್ಮದೊಳ್ ನೆಗಳ್ವುದು ಕುಳಚರ್ಯಾಕ್ರಿಯೆ: **ಚಾವುಂಡಜಯ,** ಪು. ೧೮೩)

**ಕುಳಧರ** – ಕುಲಧರ, ಮನುಗಳು: ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತ್ ಮತ್ತು ನಾಭಿರಾಜ (ಪಶ್ಚಿಮ ಕುಳಧರನೆನೆ ನೆಗಟ್ದಿ ನಾಭಿಯಲ್ಲಿಗೆ ವಂದರ್: **ಆದಿಪು,** ೬. ೭೩)

**ಕೂಟಾಷ್ಟಕ** – ರುಚಿಕಾಚಳದ ದಕ್ಷಿಣಭಾಗದ ಅಮೋಘ ಸುಪ್ರಬುದ್ಧ ಮಂದಿರ ವಿಮಳ ರುಚಕ ರುಚಕೋತ್ತರ ಚಂದ್ರ ಸುಪ್ರತಿಷ್ಠ ಎಂಬ ಶಿಖರಗಳು (ತತ್ಕುಳದ ಅರಿಷ್ಟ ಪ್ರಾಗ್ದಿಗ್ದೇಶದ ... ಎಂಬ ಕೂಟಾಷ್ಟಕಂಗಳೊಳ್: **ಆದಿಪು,** ೭. ೩ ವ)

**ಕೂಷ್ಮಾಂಡಿ** – ಒಬ್ಬ ಯಕ್ಷಿ (ಕೂಷ್ಮಾಂಡಿಯಂಬಿಕೆ ಯಕ್ಷೇಶ್ವರಿ ಕೂರ್ತು ರಕ್ಷಿಸುಗೆ: **ಸುಕುಮಾಚ,** ೧. ೮)

**ಕೃತಯುಗ** – ಚತುರ್ಯುಗಗಳಲ್ಲಿ ಮೊದಲನೆಯದು, ಇದನ್ನು ಆದಿಜಿನನೇ ಮಾಡಿದ (ಭಗವತ್ಕೃತಯುಗಮಾದುದಱಿಂದಂ ಕೃತಯುಗಮೆಂಬರ್: **ಆದಿಪು,** ೮. ೬೬)

**ಕೃಷ್ಟಿಕ್ರಿಯೆ** – ನರಕದ ದುಃಖವನ್ನು ನಿವಾರಣೆ ಮಾಡುವ ಕ್ರಿಯೆ (?) (ಬೞಿಯುಮುಚಿತ ಕೃಷ್ಟಿಕ್ರಿಯೆಯಿಂ ಪೂರ್ವಸ್ಪರ್ಧಕಾನುಭಾಗಮನನಂತಗುಣಹಾನಿರೂಪದಿಂ ಕುಂದಿಸುತ್ತುಂ ದ್ವಾದಶಕೃಷ್ಟಿ ಕ್ರಿಯಾಂತರ್ಮುಹೂರ್ತದಿಂ ಚತುಷ್ಕಷಾಯಂಗಳ ಸಮಸ್ತಾನುಭಾಗಮಂ ಕೃಷ್ಟಿಪ್ರವಿಷ್ಟಂ ಮಾಡಿ ಸಮನಂತರಂ ಪ್ರತ್ಯೇಕತ್ರಿವಿಧ ಕ್ರೋಧಮಾನ ಮಾಯಾಸಂಜ್ವಳನ ಕೃಷ್ಟಿಗಳನನುಕ್ರಮದಿಂ ಬೇಱಿಬೇಱಿ ಕಿಡಿಸಿ: **ಅನಂತಪು,** ೯. ೧೧೭ ವ)

**ಕೃಷ್ಟಿಗತಾನುಭಾಗ** – ಕೃಷ್ಟಿಯ ಉಳಿದ ಭಾಗ (?) (ಲೋಭಸಂಜ್ವಳನಮನನಂತರಂ ಪ್ರಥಮಕೃಷ್ಟಗತಾನುಭಾಗದಿಂ ಭಂಗಿಸಿ ಬೞಿಯುಮೆರಡನೆಯು

ಕೃಷ್ಟಿಗತಾನುಭಾಗಮಂ ಭಂಗಿಸುತ್ತುಂ ಬಾದರಸಾಂರಾಯಕೃಷ್ಟ್ಯನುಭಾಗಮನಂತ ಗುಣಹಾನಿರೂಪದಿಂ ಕುಂದಿಸಿ ಸೂಕ್ಷ್ಮಸಾಂಪರಾಂಯುಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತದಿಂ ಬಾದರಲೋಭ ಸಂಜ್ವಳನಮಂ ಕಿಡಿಸಿ: **ಅನಂತಪು,** ೯. ೧೧೭ ವ)

**ಕೃಷ್ಣಲೇಶ್ಯಾ[ಶ್ಯೆ]** – ಆರು ವಿಧವಾದ ಲೇಶ್ಯೆಗಳಲ್ಲೊಂದು, ಕ್ರೋಧ ವೈರ ಜಗಳ ಅಧರ್ಮ ಹಾಗೂ ಕ್ರೂರತೆಗಳಿಂದ ಕೂಡಿರುವುದು (ನಾಗಶ್ರೀಯಂತು ಪೋಗಿ ಕೃಷ್ಣಲೇಶ್ಯಾಪರಿಣಾಮದಿಂ ಸತ್ತು: **ಕರ್ಣನೇಮಿ,** ೧೪. ೧೨೫ ವ)

**ಕೇವಲಜ್ಞಾನ** – ಸರ್ವಜ್ಞತ್ವ; ಲೋಕಾಲೋಕಗಳಲ್ಲಿಯ ಹಾಗೂ ತ್ರಿಕಾಲಗಳಲ್ಲಿಯ ಸರ್ವವಸ್ತುಗಳ ಸಮಗ್ರ ಜ್ಞಾನ (ಕೇವಲಜ್ಞಾನ ದೀಪಿಕೆಯೊಳ್ ... ಅಂತರ್ಧ್ವಾಂತವಿಚ್ಛಿತ್ತಿಗೆ ಉತ್ಸುಕನೆಂ: **ನೇಮಿನಾಪು,** ೧. ೧೧)

**ಕೇವಲದರ್ಶನಾವರಣೀಯ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾ ವರಣೀಯಗಳಲ್ಲಿ ಒಂದು, ಕೇವಲದರ್ಶನಕ್ಕೆ ಆವರಣವನ್ನುಂಟುಮಾಡುವ ಕರ್ಮ (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ಕೇವಲಬುದ್ಧಿ** – ಕೇವಲಜ್ಞಾನ (ಆರುಹಂತರ ಕೇವಲಬುದ್ಧಿ ಸಿದ್ಧರ ಆತ್ಮಾಯತ ಬೋಧಸಿದ್ಧಿ ... ಪ್ರಕರ್ಷಮೆಮಗೀಗೆ ಸಮಸ್ತಮತಿಪ್ರಕಾಶಮಂ: **ನೇಮಿನಾಪು,** ೧. ೭)

**ಕೇವಲಬೋಧ** – ಕೇವಲಜ್ಞಾನ (ಕೇವಲಬೋಧಮೆಂಬೀ ವಿಭವಂಬೆತ್ತು ಸಕಲರೂಪ ವ್ಯಾಪಾರಾವಗಮ ಸಂಪದಂ ಸರ್ವಾವಧಿ ಪುಟ್ಟಿತ್ತು ರಾಘವ ವ್ರತಪತಿಗಳ್: **ಪಂಪರಾ,** ೧೬. ೬೨)

**ಕೇವಲಲಬ್ಧಿ** – ಪಂಚ ಪರಮೇಷ್ಠಿಗಳ ಒಂಬತ್ತು ಲಬ್ಧಿಗಳಲ್ಲಿ ಒಂದು (ಅನಂತಜ್ಞಾನಾದಿ ನವಕೇವಲಲಬ್ಧಿವಡೆವುದುಂ: **ಪಂಪರಾ,** ೮. ೬೯ ವ)

**ಕೇವಲವಿಭೂತಿ** – ಕೇವಲಜ್ಞಾನ (ಘಾತಿಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು: **ಸುಕುಮಾಚ,** ४. ೨ ವ)

**ಕೇವಲಾವಗಮ** – ಕೇವಲಜ್ಞಾನ (ಸುತ್ತಟಿಯೆ ಕರ್ಮಧ್ಯಾನಬಂಧಂ ಕ್ರಮಕ್ರಮ ದಿಂದಾದುದು ಕೇವಲಾವಗಮದಿಂ ತ್ರೈಲೋಕ್ಯವಿಕ್ಷೋಭಣಂ: **ಶಾಂತಿಪು,** ೯. ೨೩)

**ಕೇವಲಿ** – ಕೇವಲಜ್ಞಾನಿ (ಶ್ರುತಕೇವಲಿ ವಿಷ್ಣುವ್ರತಿಪತಿ ಚರಣಂ ನಂದಿ ಪರಮಮುನಿ ಪದಂ ಅಪರಾಜಿತ ಪಾದಂ ಗೋವರ್ಧನಯತಿ ಕ್ರಮಂ ಭದ್ರಬಾಹು ಚರಣಂ ಶರಣಂ: **ಪಂಪರಾ,** ೧. ೮)

**ಕೇವಳಜ್ಞಾನ** – ಲೋಕಾಲೋಕಗಳಲ್ಲಿಯ ತ್ರಿಕಾಲಗಳಲ್ಲಿಯ ಸರ್ವವಸ್ತುಗಳ ಸಮಗ್ರ ಜ್ಞಾನ (ನಿಶಾವಸಾನಸಮುಂದೊಳ್ ತತ್ಪುರ ಬಹಿರ್ಭಾಗಸ್ಥಿತ ಮನೋಹರೋದ್ಯಾನಾಸೀನ ಯಶೋಧರ ಗುರುಗಳ ಕೇವಳ ಜ್ಞಾನೋತ್ಪತ್ತಿಯೊಸಗೆಗೆ: **ಆದಿಪು,** ೩. ೨೧ ವ)

**ಕೇವಳಜ್ಞಾನಿ** – ಕೇವಲಜ್ಞಾನವುಳ್ಳವನು (ಒಂಬೈಸಾಸಿರ್ವರವಧಿಜ್ಞಾನಿಗಳುಂ ಇರ್ಪತ್ತುಸಾಸಿರ್ವರ್ಕೇವಳಜ್ಞಾನಿಗಳುಂ: **ಆದಿಪು,** ೧೬. ೧೪ ವ)

**ಕೇವಳಲೋಚನ** – ಕೇವಲಜ್ಞಾನವನ್ನು ಪಡೆದವನು (ಕರ್ಮರಿಪು ವಿಜಯ ದೊಳಾಸಾದಿತ ಕೇವಳಲೋಚನನಾ ದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ: **ಶಾಂತಿಪು,** ೭ ೫೨)

**ಕೇವಳಿಪೂಜೆ** – ಕೇವಲಜ್ಞಾನವನ್ನು ಪಡೆದವನಿಗೆ ಮಾಡುವ ಪೂಜೆ (ಶುಕ್ಲಧ್ಯಾನದಿಂ ಘಾತಿಗಳಂ ಕಿಡಿಸೆ ಕೇವಳಜ್ಞಾನೋತ್ಪತ್ತಿಯಾಗೆ ಕೇವಳಿಪೂಜೆಯಂ ಮಾಡಲ್ಬರ್ಪ ದೇವನಿಕಾಯಮಂ ಕಂಡು: **ಚಾವುಂಡಜಯ,** ಪು. ೧೭೨)

**ಕೇವಳಾಗಮ** – ಕೇವಲಜ್ಞಾನ (ಕೇವಳಾಗಮ ಸುಲೋಚನನಾದೊನನೆಯ್ದೆ ಕಂಡನಶ್ರಮಗತಿವರ್ತಿ ಕೀರ್ತಿಧರ ಕೇವಳಿಯಂ ಹಳಿ ದೇವದೇವನಂ: **ಶಾಂತಿಪು,** ೪. ೬೩)

**ಕೇವಳಿ** – ಕೇವಲಜ್ಞಾನಿ (ಕೇವಳಿ ಪ್ರಾಜ್ಯ ಪೂಜಾ ಪರಮೋತ್ಸವಮಂ ಮಾಡಲ್ಬರ್ಪ ಪುರುಹೂತನ ... ದುಂದುಭಿಧ್ವಾನಾಹೂತನಾಗಿ: **ನೇಮಿನಾಪು,** ೪. ೧೧೧ ವ)

**ಕೇಶವ** – ಪ್ರತಿಶತ್ರು ಅಥವಾ ಪ್ರತಿವಾಸುದೇವನೆಂಬುವವನನ್ನು ಸಂಹರಿಸಿ ಅರ್ಧ ಚಕ್ರವರ್ತಿ ಪದವಿಯನ್ನು ಪಡೆಯುವ ಶಲಾಕಪುರುಷ, ತ್ರಿಪೃಷ್ಟ ದ್ವಿಪೃಷ್ಟ ಸ್ವಯಂಭು ಪುರುಷೋತ್ತಮ ನರಸಿಂಹ ಪುಂಡರೀಕ ದತ್ತದೇವ ಲಕ್ಷ್ಮಣ ಮತ್ತು ಕೃಷ್ಣ ಎಂದು ಕ್ರಮವಾಗಿ ಒಂಬತ್ತು ಜನ ಕೇಶವರು (ಪೌದನಪುರಮನಾಳ್ವ ಬಾಹುಬಲಿಯ ಸಂತತಿಯೊಳ್ ಪುಟ್ಟಿದ ಪ್ರಜಾಪತಿ ಮಹಾರಾಜಂಗಂ ಮೃಗಯಾವತಿಗಂ ತ್ರಿಪೃಷ್ಟನೆಂಬೊಂ ಮಗನಾಗಿ ಪ್ರಥಮ ಕೇಶವನಕ್ಕುಂ: **ಚಾವುಂಡಜಯ,** ಪು ೧೫೧)

**ಕೇಶವಪನ** – ಒಂದು ಗರ್ಭಾನ್ವಯಕ್ರಿಯೆ, ಚೌಲ (ಅನ್ನಪ್ರಾಶನಮುಂ ವ್ಯುಷ್ಟಿಯುಂ ಕೇಶವಪನಮುಂ ... ನಿರ್ವಾಣಪರ್ಯಂತಮಪ್ಪ ಅಯ್ವತ್ತಮೂಱು ಗರ್ಭಾನ್ವಯಕ್ರಿಯೆಯೊಳ್: **ಚಾವುಂಡಜಯ,** ಪು. ೧೭೯–೮೦)

**ಕೇಶವ್ರತಿಲಿಂಗ** – ಮುನಿಗಳ ಯೋಗಸಾಧನೆಯ ಒಂದು ವಿಧ, ಸನ್ಮಾರ್ಗಸಾಧನ (ಸ್ತ್ರೀಲಿಂಗಂ ಸರಸ್ವತಿಲಿಂಗಮೆಂಬುದುಂ ಪ್ರತಿವ್ರತಾಲಿಂಗಮೆಂಬುದುಂ ಕೇಶವ್ರತಿಲಿಂಗಮೆಂಬುದುಂ ಅರಿಂಜಯಲಿಂಗಮೆಂಬುದುಂ ಚತುರ್ವಿಧಮಕ್ಕುಂ. ಅದಱೊಳ್ ಸರಸ್ವತಿಲಿಂಗಮಧ್ಯಯನಕಾರಣಂ ಪತಿರತಾಲಿಂಗಂ ವಿಕಲ್ಪಯೋಗಸಾಧನಂ ಕೇಶವ್ರತಿಲಿಂಗಂ ಸನ್ಮಾರ್ಗಸಾಧನಂ ಅರಿಂಜಯಲಿಂಗಂ ತೃಪ್ತಿ ಲಕ್ಷಣಂ. ಇವು ನಿರ್ವಾಣಸಾಧನಲಿಂಗಂ; **ಚಾವುಂಡಜಯ,** ಪು ೧೮೯)

**ಕೇಶಾವಾಪ** – ಐವತ್ತೂಮ್ರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಕೇಶಾವಾಪ ... ಎಂಬ ಅಯ್ವತ್ತಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಅಯ್ವತ್ತಮೂಱು ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಕೇಶಾವಾಪನಕ್ರಿಯೆ** – ಕೇಶಾವಾಪ (ಕ್ಷೌರಕರ್ಮಂಗೈಸಿ ಮತ್ತಂ ಮೀಯಲೆಱೆದನುಲೇಪನಭೂಷಣಾನ್ವಿತನಂ ಮುನಿಗಳ್ಗೆ ಪೊಡಮಡಿಸಿ ಬಂಧುಗಳ್ವೆರಸೆ ಪುಣ್ಯಾಹಂ ಬಾಜಿಸೆ ಬಾಳಕ್ರಿಯಂ ಮಾಡ್ವುದು ಕೇಶಾವಾಪನಕ್ರಿಯೆ, **ಚಾವುಂಡಜಯ,** ಪು. ೧೮೧)

**ಕೇಶೋತ್ಪಾಟನ** – ಕೇಶಾವಾಪ, ಲೋಚುಗೊಳ್ಳುವುದು (ಕೇಶೋತ್ಪಾಟನದಂದು ಭಾವಿಸೆ ನಮಸ್ಸಿದ್ಧೇಭ್ಯ ಎಂದಾದಿ ತೀರ್ಥೇಶರ್ ವಂದಿಸಿ ದೀಕ್ಷೆಗೈದರ್: **ಶಾಂತಿಪು,** ೧. ೨)

**ಕೈವಲ್ಯಬೋಧೋತ್ಸವ** – ತೀರ್ಥಂಕರನ ಕೇವಲಜ್ಞಾನಕಲ್ಯಾಣ (ಸುರಲೋಕಾವತರೋತ್ಸವಂ ಜನ್ಮಾಭಿಷೇಕೋತ್ಸವಂ ಪರಿನಿಷ್ಕ್ರಾಂತಿ ಮಹೋತ್ಸವಂ ಪ್ರವಿಮಲಂಕೈವಲ್ಯಬೋಧೋತ್ಸವಂ ಪರಿನಿರ್ವಾಣ ಮಹೋತ್ಸವಂ ಜಿನಮಹಾಕಲ್ಯಾಣಮೈದುಂ ಸವಿಸ್ತರದಿಂದಿರ್ಪುವು ವರ್ಣಗಂಗಳಿವಱಿಂ ಭವ್ಯಾಂಗಮೇನೊಪ್ಪದೇ: **ಅಜಿತಪು,** ೧. ೯೫)

**ಕೋಟಿಕಶಿಲೆ** – ಸಿದ್ಧಶಿಲೆ (ವಟ್ಟಂದೆತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಿಂಗೆನಿಪ್ಪ ಕೋಟಿಕಶಿಲೆಯುಂ ಬಟ್ಟಾಡಿದ ಬಾಹಾಬಲಂ ಇಟ್ಟಳವು ಎಂಟನೆಯ ಕೇಶವಂಗಿದಿರುಂಟೇ: **ಪಂಪರಾ,** ೧೨. ೬೮)

**ಕ್ರಿಯಾಋದ್ಧಿ** – ಅಷ್ಟವಿಧಸಿದ್ಧಿಗಳಲ್ಲಿ ಒಂದು, ಇದರಲ್ಲಿ ಎರಡು ವಿಧ: ಚಾರಣತ್ವ ಮತ್ತು ಆಕಾಶಗಾಮಿತ್ವ, ಆಲಚಾರಣತ್ವ ಜಂಘಾಚಾರಣತ್ವ ತಂತುಚಾರಣತ್ವ ಪುಷ್ಪಚಾರಣತ್ವ ಫಳಚಾರಣತ್ವ ಎಂಬಿವೇ ಮೊದಲಾದವು ಚಾರಣತ್ವ ಋದ್ಧಿಯಾದರೆ, ನಡಿಗೆಯಿಲ್ಲದೆಯೇ ಆಕಾಶದಲ್ಲಿ ತೇಲಿಹೋಗುವುದು ಆಕಾಶಗಾಮಿತ್ವ (ಪರ್ಯಂಕಾಸನಾದಿ ಯೋಗಾಸ್ತಿಕ ಸ್ವರೂಪ ಚಾರಣತ್ವಮುಂ ... ಆಕಾಶಗಾಮಿತ್ವಮೆಂದಿರ್ತೆಱನಪ್ಪ ಕ್ರಿಯಾಋದ್ಧಿಯೊಳಂ, **ಚಂದ್ರಪ್ರಪು,** ೧೪. ೩೦ ವ)

**ಕ್ರಿಯಾದೇವತಾ:** – ಶ್ರಾವಕರು ಸಾಧಿಸಬೇಕಾದ ಆಧ್ಯಾತ್ಮಿಕೋನ್ನತಿಯ ಕ್ರಮವಾದ ಮೆಟ್ಟಿಲು; ಇದರಲ್ಲಿ ನಾಲ್ಕು ಬಗೆ (ಕ್ರಿಯಾದೇವತಾಯೆಂಬುದು ಛತ್ರತ್ರಯರತ್ನತ್ರಯಮುಂ ಅಗ್ನಿತ್ರಯಮುಂ ಪ್ರತಿಮೆಯುಂ ಎಂದಿಂತು ಚತುರ್ವಿಧಮಕ್ಕುಂ. ಇವು ಶಾಂತಿಹೇತುಗಳ್ ಉಪಾದೇಯಂಗಳ್: **ಚಾವುಂಡಜಯ;** ಪು. ೧೮೮)

**ಕ್ರಿಯಾಮಂತ್ರ** – ಐದು ಬಗೆಯ ಮಂತ್ರಗಳಲ್ಲಿ ಒಂದು (ಕ್ರಿಯಾಮಂತ್ರಂಗಳಿಂದಂ ಆತ್ಮಸಮಾನ ಶ್ರಾವಕಾಗ್ರಣಿಗಳ್ಗೆ ಕನ್ಯಾ ಭೂಮಿ ಸುವರ್ಣ ಹಸ್ತಿ ಅಶ್ವ ರಥ ರತ್ನಾದಿಗಳಂ ಕುಡುವ ಸಮದತ್ತಿಯುಂ: **ಆದಿಪು,** ೧೫. ೧೩ ವ); ಕ್ರಿಯಾಮಂತ್ರ

ಅಗ್ನಿಹೋತ್ರಮಂತ್ರ ಯಜ್ಞಮಂತ್ರ ಸಂಯಮಮಂತ್ರ ಮತ್ತು ಕರ್ಣಜಾಪ್ಯಮಂತ್ರ ಎಂಬ ಮಂತ್ರದ ಐದು ಬಗೆಗಳಲ್ಲಿ ಒಂದು, ಕ್ರಿಯಾಮಂತ್ರವೆಂಬುದು ಸಪ್ತಪರಮ ಸ್ಥಾನಾರ್ಹಂತ್ಯನ್ನು ಮಾಡುವಂಥದು (ಕ್ರಿಯಾಮಂತ್ರಂ ಸಪ್ತಪರಮ ಸ್ಥಾನಾರ್ಹಂತ್ಯಮುಂ ಮಾಳ್ಕುಂ; ಅಗ್ನಿಹೋತ್ರಮಂತ್ರಂ ಸಿದ್ಧಸೇವೆಗೆ ಹೇತು; ಯಜ್ಞಮಂತ್ರ ಪರಮೇಷ್ಠಿಸೇವಗೆ ಹೇತು; ಸಂಯಮ ಮಂತ್ರಂ ಸಕಲ ವೃತ್ತಿಗೆ ಹೇತು, ಕರ್ಣಜಾಪ್ಯಮಂತ್ರಂ ಶಿವಗತಿಗೆ ಕಾರಣಂ, ಇವಯ್ದು ನಿರವದ್ಯಮಂತ್ರಂಗಳ್ **ಚಾವುಂಡಜಯ,** ಪು. ೧೮೮)

**ಕ್ಷಪಕ** – [ಸಂಸಾರವನ್ನು] ಕ್ಷೀಣಗೊಳಿಸಿಕೊಳ್ಳುವವನು, ನಿವಾರಿಸಿಕೊಳ್ಳುವವನು (ಆಯುರವಸಾನದೊಳೆ ಸಂಸಾರ ಕ್ಷಪಕನಾಗಿ ಸಮಾಧಾನಪುರಸ್ಸರಂ ಸನ್ಯಸನವಿಧಿಯಿಂ ಪರಿತ್ಯಕ್ತಜೀವಿತಂ: **ಆದಿಪು,** ೨. ೧೯ ವ)

**ಕ್ಷಪಕಶ್ರೇಣಿ** – ಕರ್ಮಕ್ಷಯಮಾಡಿ ಉತ್ತಮಗತಿಗೆ ಹೋಗುವ ಒಂದು ಮಾರ್ಗ (ಸಹಸ್ರ ಕ್ಷಪಕಶ್ರೇಣಿ ಪ್ರಾಯೋಗ್ಯಾಧಃಪ್ರವೃತ್ತ ಕರಣ ಕ್ಷಪಕನಾಗಿ: **ಶಾಂತಿಪು,** ೧೧. ೧೧೧ ವ)

**ಕ್ಷಪಣಕ** – ಕ್ಷಪಣ (ಮಗಳೆ ಉಟಿದ ಬ್ರತಂಗಳೆಲ್ಲಮಂ ಪೋಗಿಂಬಾ ಕ್ಷಪಣಕಂಗೊಪ್ಪಿಸುವಂ, **ವಡ್ಡಾರಾ,** ೧೪. ೧೪)

**ಕ್ಷಮಾ** – ಹತ್ತು ಕುಲಧರ್ಮಗಳಲ್ಲಿ ಒಂದು, ಉತ್ತಮಕ್ಷಮೆ (ಎಂಬಿನ ಮುತ್ತಮಕ್ಷಮಾಮಾರ್ದ ವಾರ್ಜವಸತ್ಯ ಶೌಚಸಂಯಮ ತಪಸ್ತ್ಯಾಗಾಕಿಂ ಚನ್ಯಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ಕ್ಷಯೋಪಶಮ** – ಆತ್ಮನ ಐದು ಭಾವಗಳಲ್ಲಿ ಒಂದು, ಕರ್ಮದ ಕೆಲವು ಅಂಶಗಳು ನಾಶವಾಗುವುದು (ಜಾತಿಸ್ಮರನಾದಂ ಕ್ಷಯೋಪಶಮದಿಂದಂ: **ಸುಕುಮಾಚ,** ೧೦. ೨೮)

**ಕ್ಷಯೋಪಶಮಲಬ್ಧಿ** – ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿ ಎಂಬ ಲಬ್ಧಿಯ ಐದು ಬಗೆಗಳಲ್ಲಿ ಒಂದು, ಜ್ಞಾನಾವರಣಾದಿ ಕರ್ಮಗಳು ಕಡಿಮೆಯಾಗಲು ಮೊದಲಾಗುವ ಕಾಲ (ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ: **ಸುಕುಮಾಚ,** ೩. ೩೯ ವ)

**ಕ್ಷಾಯಿಕ** – ಆತ್ಮನ ಐದು ಭಾವಗಳಲ್ಲಿ ಒಂದು, ಕರ್ಮದಿಂದ ಪೂರ್ಣ ಬಿಡುಗಡೆ ಹೊಂದಿದ ಸ್ಥಿತಿ (ತಪ್ಪದೆ ನಿನ್ನ ಹೃದಯದೊಳ್ ನೆಲಸಿದೊಡಕ್ಕುಂ ಕ್ಷಾಯಿಕಂ ಸುದರ್ಶನರತ್ನಂ: **ಪಾರ್ಶ್ವನಾಪು,** ೫. ೪೭)

**ಕ್ಷಾಯಿಕದೃಷ್ಟಿ** – ಕ್ಷಾಯಿಕಸಮ್ಯಕ್ತ್ವ, ದರ್ಶನ ಮೋಹನೀಯದ ಏಳು ಪ್ರಕೃತಿಗಳ ಸಂಪೂರ್ಣ ವಿನಾಶದಿಂದ ಜೀವವು ಕ್ಷಾಯಿಕಸಮ್ಯಗ್ದೃಷ್ಟಿ ಎನಿಸಿಕೊಳ್ಳುತ್ತವೆ

(ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನ ವಚೋಮೃತಂ ಮುಖಶ್ರೀಯ ಪೊದಟ್ಕೆಯಿಂ ಬೆಳಗೆ: **ಶಾಂತಿಪು,** ೧. ೪)

**ಕ್ಷಾಯಿಕಭಾವ** – ಆತ್ಮನ ಐದು ಭಾವಗಳಲ್ಲಿ ಒಂದು (ಭಾವೋಪಲಕ್ಷಕಂ ಜೀವಮೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಮಯ್ದು ತೆಱನಕ್ಕುಂ: **ಸುಕುಮಾಚ,** ೮. ೪ ವ)

**ಕ್ಷಾಯಿಕಸಮ್ಯಕ್ತ್ವ** – ದರ್ಶನ ಮೋಹನೀಯ ಕರ್ಮವು ಕ್ಷೀಣವಾದ ಮೇಲೆ ನಿರ್ಮಳಶ್ರದ್ಧೆಯುಂಟಾಗುತ್ತದೆ; ಇದಕ್ಕೆ ಕ್ಷಾಯಿಕಸಮ್ಯಕ್ತ್ವ ಎನ್ನುತ್ತಾರೆ (ಕ್ಷಾಯಿಕಸಮ್ಯಕ್ತ್ವಮುಮನಂತಜ್ಞಾನಮುಮನಂತದರ್ಶನಮುಮನಂತ ವೀರ್ಯಮುಂ ... ಅವ್ಯಾಬಾಧಂಗಳೆಂಟುಂ ಗುಣಂಗಳಾತ್ಮಾಯತ್ತಮಾಗೆ: **ಶಾಂತಿಪು,** ೧೨. ೫೧ ವ)

**ಕ್ಷಾಯಿಕಸಮ್ಯಗ್ದರ್ಶನ** – ಕ್ಷಾಯಿಕಸಮ್ಯಕ್ತ (ಮಿಥ್ಯಾತ್ವ ಸಮ್ಯಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನ ಮೋಹನೀಯಮಂ ನಿರ್ಮೂಲಿಸಿ ಕ್ಷಾಯಿಕಸಮ್ಯಗ್ದ ರ್ಶನಮನವಗಯ್ಸಿ: **ಶಾಂತಿಪು,** ೧೨. ೫೧ ವ)

**ಕ್ಷಾಯಿಕಸಮ್ಯಗ್ದೃಷ್ಟಿ** – ಕ್ಷಾಯಿಕಸಮ್ಯಕ್ತವನ್ನು ಹೊಂದಿದವನು (ದರ್ಶನ ಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ: **ಆದಿಪು,** ೧೦. ೧೪ ವ)

**ಕ್ಷಾಯೋಪಶಮಿಕಭಾವ** – ಆತ್ಮನ ಐದು ಭಾವಗಳಲ್ಲಿ ಒಂದು (ಭಾವೋಪಲಕ್ಷಕಂ ಜೀವಮೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಮಯ್ದು ತೆಱನಕ್ಕುಂ: **ಸುಕುಮಾಚ,** ೮. ೪ ವ)

**ಕ್ಷೀಣಕಷಾಯ** – ಕಷಾಯಗಳನ್ನು ಕ್ಷಯಗೊಳಿಸಿದವನು (ಬೞಿಯಮೇಕತ್ವವಿತರ್ಕ (ವೀಚಾರಮೆಂಬೆರಡನೆಯ ಶುಕ್ಲಧ್ಯಾನಮಂ ಕ್ಷೀಣಕಷಾಯನಾಗಿ ಜಾನಿಸಿ: **ವಡ್ಡಾರಾ,** ೧೫೪. ೧೪)

**ಕ್ಷೀರಗೌರತ್ವಜ** – ಹಾಲಿನಂತೆ ಬಿಳುಪಾದ ರಕ್ತವುಳ್ಳವನು, ತೀರ್ಥಂಕರ (ಅಂತು ನಿಸ್ವೇದ ನಿರ್ಮಲ ಕ್ಷೀರಗೌರತ್ವಜ ಸಮಚತುರಸ್ರ ಸಂಸ್ಥಾನ ವಜ್ರವೃಷಭ ನಾರಾಚಸಂಹನನುಂ: **ಆದಿಪು,** ೮. ೪ ವ)

**ಕ್ಷೀರಗೌರತ್ವ** – ತೀರ್ಥಂಕರರ ೩೪ ಅತಿಶಯಗಳಲ್ಲಿನ ಹತ್ತು ಹುಟ್ಟುಗುಣಗಳಲ್ಲಿ (ಸ್ವಭಾವ ಅತಿಶಯಗಳು) ಒಂದು, ರಕ್ತವು ಹಾಲಿನಂತೆ ಬೆಳ್ಳಗಿರುವುದು (ನಿಸ್ವೇದತ್ವಮುಂ ನಿರ್ಮಲತ್ವಮುಂ ಕ್ಷೀರಗೌರತ್ವಮುಂ ... ಎಂಬ ದಶವಿಧಸ್ವಭಾವಾತಿಶಯಸಂಪನ್ನನುಂ: **ಅಜಿತಪು,** ೫. ೯೬ ವ)

**ಕ್ಷುಲ್ಲಕ** – ಉದ್ದಿಷ್ಟ ಪ್ರತಿಮಾಧಾರಿಯಾದ ಶ್ರಾವಕ ಆಗಮಾಭ್ಯಾಸ ಮಾಡಿ ಮನೆಯಲ್ಲಿ ನಿಲ್ಲುವ ಬ್ರಹ್ಮಚಾರಿ (ಕ್ಷುಲ್ಲಕನ ರೂಪದಿಂದಾಗವಾಭ್ಯಾಸಂಗೆಯ್ದು ಗೃಹವಾಸದೊಳ್ನಿಲ್ವೊಂ: **ಚಾವುಂಡಜಯ,** ಪು. ೧೯೩)

**ಕ್ಷೇತ್ರ** – ಕಥೆಯ ಸಪ್ತಾಂಗಗಳಲ್ಲಿ ಒಂದು, ಇದರಲ್ಲಿ ಮೂರು ಲೋಕಗಳೂ ಸೇರುತ್ತವೆ (ನಾಲ್ಕನೆಯ ಕಥೆಯೆಂಬುದು ದ್ರವ್ಯಮುಂ ಕ್ಷೇತ್ರಮುಂ ಕಾಲಮುಂ ಭಾವಮುಂ ಪ್ರಕೃತಿಯುಂ ಫಲಮುಮೆಂದು ಸಪ್ತಾಂಗಮಕ್ಕುಂ ... ಕ್ಷೇತ್ರಮೆಂಬುದು ತ್ರೈಲೋಕ್ಯಂ: **ಚಾವುಂಡಜಯ,** ಪು.. ೬)

**ಕ್ಷೇತ್ರಪರಾವರ್ತನ** – ಸಂಸಾರದಲ್ಲಿ ಪರಿಭ್ರಮಣ ಮಾಡುವ ಜೀವಗಳಿಗೆ ಉಂಟಾಗುವುದೆಂದು ಹೇಳಲಾಗುವ ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವಗಳೆಂಬ ಐದು ರೀತಿಯ ಪರಿವರ್ತನೆಗಳಲ್ಲಿ ಒಂದು (ಜಗತ್ತ್ರಯ ಮಧ್ಯಪ್ರದೇಶದೊಳ್ ಪಲವುಂ ಸೂಟ್ ಲಘುಜನ್ಮಾವಗಾಹದಿಂ ಪುಟ್ಟಿ ಸತ್ತು ತದನಂತರಮಾಯೆಡೆ ಗತ್ತಲೇಕೈಕ ಪ್ರದೇಶೋತ್ತರವಾಗೆ ಮೂಱುಂ ಲೋಕದ ಸರ್ವಕ್ಷೇತ್ರಂ ಗಳನಿತಱೊಳಮಾ ಮಾರ್ಗದಿಂದೆಡೆಯುಡುಗದೆ ಕೂಡಿ ಪುಟ್ಟುವುದು ಕ್ಷೇತ್ರಪರಾವರ್ತನಮೆಂಬುದು: **ಸುಕುಮಾಚ,** ೬. ೬ ವ); (ಒಂದೆಡೆಯೊಳ್ ಪುಟ್ಟಿಪೊಂದಿದ ಜೀವಮೆನಿತಾನುಂ ಭವಂಗಳಂ ತೊಟಲ್ದು ಬಂದಾ ಮುನ್ನಿನ ಪುಟ್ಟಿದೆಡೆಯ ಕೆಲದೊಳ್ ಪುಟ್ಟಿಂತಾ ಕ್ರಮದಿಂ ಚತುರ್ಗತಿಗಳೊಳಾದ ಕ್ಷೇತ್ರಮೆನಿನನಿತಱೊಳಂ ಕೂಡಿ ಪುಟ್ಟೊದೊಡೊಂದು ಕ್ಷೇತ್ರಪರಾವರ್ತನಂ: **ಜೀವಸಂ,** ೫. ೨ ವ)

**ಕ್ಷೇತ್ರಸಂಸಾರ** – ಪಂಚಸಂಸಾರಗಳಲ್ಲಿ ಒಂದು, ಮೇರುಪರ್ವತ ಪ್ರದೇಶದಲ್ಲಿ ಹುಟ್ಟುವಂತಾಗುವುದು (ಲೋಕಾಕಾಶಪ್ರದೇಶಂಗಳೊಳಗೆಲ್ಲಿಯುಂ ಪುಟ್ಟೆ ಕ್ಷೇತ್ರಮುಂ ಶರೀರಾವಗಾಹನೆಂಬೊಳ್ ಮೇರುಪರ್ವತಮಧ್ಯಪ್ರದೇಶದೊಳ್ ಪುಟ್ಟಿದೊಡಿದೊಂದು ಕ್ಷೇತ್ರಸಂಸಾರಂ: **ಚಾವುಂಡಜಯ,** ಪು. ೨೩೧)

**ಕ್ಷೇಮಂಕರ** – ಹದಿನಾಲ್ಕು ಮಂದಿ ಮನುಗಳಲ್ಲಿ ಮೂರನೆಯವನು; ಸುತ್ತಲೂ ತುಂಬಿಕೊಂಡಿದ್ದ ಪ್ರಾಣಿಸಮೂಹವು ಒಟ್ಟಿಗೇ ಹಿಂಸಿಸತೊಡಗಿದಾಗ ಭಯಗ್ರಸ್ತರಾದ ಆರ್ಯಜನರಿಗೆ ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವ ರೀತಿಯನ್ನು ಆ ಮಹಾತ್ಮನು ಹೇಳಿಕೊಟ್ಟದ್ದರಿಂದ ಅವನಿಗೆ ಈ ಹೆಸರು (ಎಳಸಿ ಬಳಸಿರ್ಪ ಮೃಗಸಂಕುಳಗಳಂದನಿತುಮೊಡನೆ ಕೋಳ್ಮಸಗಿದೊಡಾಕುಳರಾದಾರ್ಯ ಜನಕ್ಕವನಳವಡಿಸುವ ಬಗೆಯನಾ ಮಹಾತ್ಮಂ ಪೇೞ್ದಂ; ಅದಱಿಂದಾತನಂ ಕ್ಷೇಮಂಕರನೆಂದು ಪೆಸರನಿಟ್ಟರ್; **ಆದಿಪು.** ೬ ೫೬ ಮತ್ತು ವ)

# ಖ

**ಖಗನಗ** – ಖೇಚರರು ವಾಸಿಸುವ ಪರ್ವತ, ವಿಜಯಾರ್ಧಪರ್ವತ (ಕಲ್ಲೆನ್ನದೆ ಬೆಳೆದ ಪಸುರ್ವುಲ್ಲೆಂದು ಆಸೆಯೊಳ್ ಸಾರ್ದು ಮರಕತದ ಒಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತುಮಿರ್ಪುವು ಆ ಖಗನಗದೊಳ್: **ಅಜಿತಪು,** ೯. ೨೩)

**ಖಗರಾಜೇಂದ್ರ** – ಖೇಚರರ ಒಡೆಯ (ಖಗರಾಜೇಂದ್ರ ರುಂದ್ರ ಘಟೆಗಂದೆಚ್ಚಂಬುಗಳ್: **ಶಾಂತಿಪು,** ೪. ೨೧)

**ಖಚರ** – ಆಕಾಶಗಾಮಿನಿ ವಿದ್ಯೆಯನ್ನು ಬಲ್ಲ ವಿಜಯಾರ್ಧಪರ್ವತದ ವಿದ್ಯಾಧರರು (ಅಖಿಳಖಚರಪತಿಮಕುಟಮಣಿಗಣಕಿರಣ ರಾಗರಂಜಿತಚರಣನಳಿನಯುಗಳಂ: **ಆದಿಪು,** ೧. ೭೧ ವ)

**ಖಡ್ಗರತ್ನ** – ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ಏಳು ಜೀವರತ್ನಗಳಲ್ಲಿ ಒಂದು (ಜವನ ನಾಲಗೆಯ ಪೋಲ್ವೆಯಾದ ಸೌಗಂಧಕಮೆಂಬ ಖಡ್ಗರತ್ನಮುಂ: **ಚಂದ್ರಪ್ರಪು,** ೬. ೧೦೧ ವ)

**ಖರ** – ಮೊದಲ ಅಧೋಲೋಕವಾದ ರತ್ನಪ್ರಭೆಯ ಭಾಗವಾದ ಪೃಥ್ವಿಯ ಒಂದು ಭಾಗ, (ಅತಿಸಹಸ್ರೋತ್ತರಲಕ್ಷ ಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕ್ಕುಮಾ ಪೃಥ್ವಿ ವಜ್ರಖರ ಪಂಕ ಜಲಬಹುಳಭಾಗದಿಂ ತ್ರಿವಿಧಮಕ್ಕುಂ; ಅಲ್ಲಿ ಖರಭಾಗಂ ಪದಿನಾಱುಸಾಸಿರಯೋಜನಂ ... ಅಕ್ಕುಂ **ಸುಕುಮಾಚ,** ೧೧. ೪೧ ವ)

**ಖಳಕರ್ಮಾಷ್ಟಕ** – ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃ, ನಾಮ, ಗೋತ್ರ, ವೇದನೀಯ ಎಂಬ ಎಂಟು ಬಗೆಯ ದುಷ್ಟಕರ್ಮಗಳು (ಖಳಕರ್ಮಾಷ್ಟಕಮಂ ಪಡಲ್ವಡಿಸಿ: **ಆದಿಪು,** ೧೬. ೫೫)

**ಖೇಚರ** – ಖಚರ (ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ: **ಆದಿಪು,** ೨. ೮)

**ಖೇಳೋಷಧಿ** – ಯತಿಯ ಎಂಜಲಿನಿಂದ ರೋಗ ವಾಸಿಯಾಗುವ ಔಷಧರ್ಧಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

# ಗ

**ಗಂತಿ** – ಕಂತಿ, ಜೈನ ಸನ್ಯಾಸಿನಿ (ಶೀಲವತೀ ಮಹಾದೇವಿಯುಂ ಸುವ್ರತಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು: **ಧರ್ಮಾಮೃ**, ೪.೧೬೦ ವ)

**ಗಂಧಕುಟಿ** – ಸಮವಸರಣದ ಒಂದು ಭಾಗ; ತೀರ್ಥಂಕರನಾಗುವವನಿಗಾಗಿ ಕುಬೇರನು ನಿರ್ಮಿಸಿದ ಗಂಧದ ಕುಟೀರ (ತ್ರಿಃಪ್ರದಕ್ಷಿಣಂಗೆಯ್ದು ಮಹೀಪತಿ ಗಂಧಕುಟಿಯನಾ ಜಿನಪತಿಯಿದಿರೊಳ್ ನಿಂದು ವಿನಯವಿನಮಿತಮಕುಟಂ: **ಶಾಂತಿಪು**, ೮. ೧೫೭)

**ಗಗನಗಾಮಿನಿ** – ಒಂದು ವಿದ್ಯೆ, ಆಗಸದಲ್ಲಿ ತೇಲಿಕೊಂಡು ಹೋಗುವುದು (ಗಗನಗಾಮಿನಿಯೆಂಬ ವಿದ್ಯೆಯೆನಗೆ ಬಂದ ವೃತ್ತಾಂತಮಂ ಕಿಱಿದಿನೊಳೆ ಪೇಳ್ವೆನ್: **ಧರ್ಮಾಮೃತ:** ೨. ೧೦೧ ವ)

**ಗಗನಚರಾಧೀಶ** – ಖೇಚರರರಾಜ (ಇದಿರೆದ್ದು ಭಕ್ತಿಪುರಸ್ಸರಂ ಮನದೆಱಕದಿನೆಱಗಿದ ಗಗನಚರಾಧೀಶನಂ ಯತಿ ಪರಸಿ: **ಶಾಂತಿಪು**, ೨. ೨೧)

**ಗಗನಚರಿ** – ಆಕಾಶದಲ್ಲಿ ಸಂಚರಿಸುವವಳು, ಖೇಚರಿ (ಅದಂ ಕೇಳ್ದು ಗಗನಚರಿಯೊರ್ವಳ್ ಬಂದು ಅರಸಂಗೆಱಗಿ ಪೊಡೆವಟ್ಟು ಎನಗೆ ಭರ್ತೃಭೈಕ್ಷಮಂ ದೇವರ್ ಇಕ್ಕಲೆವೇಳ್ಕುಂ ಎಂಬುದುಂ: **ಶಾಂತಿಪು**, ೯. ೮೨ ವ)

**ಗಗನಚಾರಣ** – ಆಕಾಶದಲ್ಲಿ ಸಂಚರಿಸುವ ಋಷಿ (ಧರ್ಮವರ ಸಾಗರಸೇನರೆಂಬ ಗಗನಚಾರಣರ್ ಕಾಂತಾರಚರ್ಯಾ ಮಾರ್ಗದೊಳ್ ತಮ್ಮ ವಾಸಕ್ಕೆ ಬರ್ಪರಂ ಶ್ರೀಮತಿಯುಂ ತಾನುಂ ಕಂಡು: **ಆದಿಪು**, ೪. ೯೫ ವ)

**ಗಗನಪ್ರಚಾರ** – ಆಕಾಶ ಸಂಚಾರ (ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ ಅಪಕ್ಷ್ಮತಾಸಂ ಆಯತಗಗನಪ್ರಚಾರಂ ಅಪಜೀವವಧಂ ಪರಿವೀತ ದೇಹಬಿಂಬತೆ: **ಆದಿಪು**, ೧೦. ೪೩)

**ಗಜರತ್ನ** – ವಿಜಯಾರ್ಧಪರ್ವತದಲ್ಲಿ ಹುಟ್ಟಿದ ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲಿ ಒಂದು, (ವಿಜಯಾರ್ಧಪರ್ವತದೊಳ್ ಪುಟ್ಟಿದ ಗಜಾಶ್ವಸ್ತ್ರೀರತ್ನಂಗಳುಂ ಸಾಕೇತನಗರದೊಳ್ ಪುಟ್ಟಿದ ಸೇನಾನಾಯಕ ಪುರೋಹಿತ ಗೃಹಪತಿ ತಕ್ಷಕರತ್ನಂಗಳುಂ: **ಆದಿಪು**, ೧೫. ೩ ವ)

**ಗಣಗ್ರಹಣ** – ಎಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು (ಮತ್ತಮವತಾರವೃತ್ತಿ ಲಾಭಸ್ಥಾನಗಣಗ್ರಹಣ ಪೂಜಾರಾಧ್ಯ ಪುಣ್ಯ ... ಎಂಬೆಂಟುಂಬೆರಸು: **ಆದಿಪು**, ೧೫. ೧೬ ವ)

**ಗಣಧರ** – ತೀರ್ಥಂಕರನ ಶಿಷ್ಯ, ಮುಖ್ಯ ಶಿಷ್ಯರಲ್ಲಿ ಒಬ್ಬ (ಗಣಧರಗಣಮಂ ಬಿಟ್ಟು ಏಕವಿಹಾರಿಯಾಗಿ: **ಆದಿಪು**, ೬. ೩೩ ವ)

**ಗಣಧರದೇವ** – ತೀರ್ಥಂಕರನ ಮುಖ್ಯ ಶಿಷ್ಯರಲ್ಲಿ ಒಬ್ಬ (ಎಣ್ಬತ್ತುನಾಲ್ವರ್ ಗಣಧರದೇವರುಂ ನಾಲ್ಸಾಸಿರದೇಳ್ನೂಱಯ್ವದಿಂಬರ್ ಸಕಳಪೂರ್ವದೇವರುಂ: **ಆದಿಪು,** ೧೬. ೪೦ ವ)

**ಗಣನಾಯಕ** – ಗಣಧರ (ನೆಱವಂ ತಾಳ್ದಿದಪಾಸ್ತ ದುರ್ನಯ ತಮೋಬಂಧಂ ಶ್ರುತಸ್ಕಂಧವಾದ ಅಱವಿಂದಂ ಗಣನಾಯಕರ್ಸಮಱ[3] ಭವ್ಯಶ್ರೇಣಿಗೆ ಅವ್ಯಾಜದಿಂದೆ: **ಆದಿಪು,** ೧. ೩೯)

**ಗಣಭೃತ್** – ಗಣಧರ (ಪುರುದೇವಾದಿಜಿನೇಂದ್ರಮಾಳೆ ಗಣಭೃತ್ಸಂತಾನಮೆಂದೀ ಪರಂಪರೆಯಿಂ ವಿಶ್ರುತ ವೀರಸೇನಾಚಾರ್ಯಪರ್ಯಂತವಾಗಿರೆ: **ಆದಿಪು,** ೧. ೩೫)

**ಗಣಾಗ್ರಣಿ** – ಗಣಧರರಲ್ಲಿ ಮೊದಲಿಗನಾದ ವೃಷಭಸ್ವಾಮಿ (ಆ ವೃಷಭಗಣಾಗ್ರಣಿ ಪೇೞ್ದುದಂ ಸವಿಸ್ತರದೊಳೆ ವರ್ಧಮಾನಜಿನಸನ್ನಿಧಿಯೊಳ್ ವಿಪುಳಾದ್ರಿಯೊಳ್: **ಆದಿಪು,** ೧. ೪೧)

**ಗಣಾಧಿಪ** – ಗಣಧರ, ತೀರ್ಥಂಕರನ ಶಿಷ್ಯರ ಗುಂಪಿನ ಮುಂದಾಳು (ಕೇಳ್ದೆವಾವಿದಂ ತಿಳಿಯೆ ಗಣಾಧಿಪರ್ ಬೆಸಸೆ ರುಂದ್ರಜಿನೇಂದ್ರ ಸಭಾಂತರಾಳದೊಳ್: **ಆದಿಪು,** ೧೫. ೧೧)

**ಗಣಿನೀ** – ಬ್ರಹ್ಮಚಾರಿಣಿ, ಆರ್ಯಿಕೆ (ಸುಪ್ರಭೆಯುಂ ಸುದರ್ಶನ ನಾಮ ಗಣಿನೀಸಮಕ್ಷದೊಳ್ ರತ್ನಾವಳಿಯಂ ನೋಂತು ಅಚ್ಯುತಕಲ್ಪದೊಳ್ ದೇವನಾಗಿ ಪುಟ್ಟಿದಳ್: **ಆದಿಪು,** ೩. ೬೫ ವ)

**ಗಣೋಪಗ್ರಹಣ** – ಒಂದು ಗರ್ಭಾನ್ವಯಕ್ರಿಯೆ, ಗಣವನ್ನು ಸೇರುವುದು (ಗಣೋಪಗ್ರಹಣ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗಣೋಪಗ್ರಹಣಕ್ರಿಯೆ** – ಗಣಪೋಷಣೆಯನ್ನು ಮಾಡುವುದು (ಋಷಿಯರು ಮಜ್ಜಿಯರುಂ ಶ್ರಾವಕರುಂ ಶ್ರಾವಕಿಯರುಮಂ ಸನ್ಮಾರ್ಗದೊಳ್ ನಡೆಯಿಸಿ ದೀಕ್ಷಾರ್ಥಿಗಳ್ಗೆ ದೀಕ್ಷೆಯಂ ಶ್ರುತಕೀರ್ತಿಗಳ್ಗೆ ಧರ್ಮಮುಮನಾಗಳುಂ ಪ್ರತಿಬೋಧಿಸಿ ಸದ್ವೃತ್ತ ಸಾಧನಮುದ್ಧೃತಧಾರಣಮುಂ ಗೆಯ್ದು ಪಾಪಫಲಮುಂ ಸೂಚಿಸಿ ಗಣಪೋಷಣಂಗೆಯ್ವುದು ಗಣೋಪಗ್ರಹಣಕ್ರಿಯೆ: **ಚಾವುಂಡಜಯ,** ಪು. ೧೮೪)

**ಗತಿಚತುಷ್ಟಯ** – ಕರ್ಮಾನುಗುಣವಾಗಿ ಜೀವನಿಗೆ ಒದಗುವ ನಾಲ್ಕು ವಿಧದ ಜನ್ಮಗಳು (ನಾರಕ ತಿರ್ಯಕ್ ನರ ಬೃಂದಾರಕರೆನೆ ಗತಿಚತುಷ್ಟಯಂಗಳ್: **ಪುಷ್ಪದಂಪು,** ೧೩. ೫೬)

**ಗಮನ ಪ್ರಾಯಶ್ಚಿತ್ತ** – ಪ್ರಯಾಣದಲ್ಲಿ ಕ್ರಿಮಿಕೀಟಗಳಿಗಾಗುವ ಹಿಂಸೆಗಾಗಿ ಆಚರಿಸುವ ಪ್ರಾಯಶ್ಚಿತ್ತ (ಗಮನಪ್ರಾಯಶ್ಚಿತ್ತ ನಿಮಿತ್ತಂ ಸುದತ್ತಾಚಾರ್ಯರ್ ಪುರೋಪವನಮಂ ಸಾರ್ದರ್: **ಯಶೋಧಚ,** ೧. ೪೪)

**ಗರುಡವಾಹಿನಿ** – ಒಂದು ಬಗೆಯ ವಿದ್ಯೆ (ಗರುಡಾಧಿಪನಪ್ಪ ಮಹಾಲೋಚನನಜೆದು ಬಹುವಿದ್ಯಾ ಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬೆರಡು ವಿದ್ಯೆಗಳುಮಂ ದಿವ್ಯಾಸ್ತ್ರಂಗಳನುಯ್ದು: **ಪಂಪರಾ,** ೧೫೬. ವ)

**ಗರ್ಭಶೋಧನ** – ಹುಟ್ಟಲಿರುವ ತೀರ್ಥಂಕರನಿಗೆ ಕರ್ಮಮಲಗಳ ಲೇಪವಾಗದಂತೆ ಇಂದ್ರನು ಕಳುಹಿಸುವ ದೇವವನಿತೆಯರು ಮಾಡುವ ಜಿನಮಾತೆಯ ಗರ್ಭಶುದ್ಧೀಕರಣ (ಮನವೊಲ್ದಿಂದ್ರನಿವಾಸಸಂಭವ ಶುಚಿದ್ರವ್ಯಂಗಳಿಂ ಗರ್ಭಶೋಧನಮಂ ದೇವಿಯರಿರ್ದು ಮಾಡೆ: **ಆದಿಪು,** ೭. ೨೩)

**ಗರ್ಭಾನ್ವಯಕ್ರಿಯೆ** – ತೀರ್ಥಂಕರನು ಭೂಮಿಯಲ್ಲಿ ಅವತರಿಸುವುದರಿಂದ ಹಿಡಿದು ನಿರ್ವಾಣಪರ್ಯಂತ ಮಾಡುವ ಐವತ್ತೂರು ಕ್ರಿಯೆಗಳು: ದಾನ, ಆಧಾನ, ಪ್ರೀತಿ, ಸುಪ್ರೀತಿ, ಧೃತಿ, ಮೋದ, ಪ್ರಿಯೋದ್ಭವ, ನಾಮಕರ್ಮ, ಬಹಿರ್ಯಾನ, ನಿಷದ್ಯಾ, ಅನ್ನಪ್ರಾಶನ, ವ್ಯುಷ್ಟಿ, ಕೇಶವಾಪ, ಲಿಪಿ ಸಂಖ್ಯಾನ ಸಂಗ್ರಹ, ಉಪನಯನ, ವ್ರತಚರ್ಯಾ, ವ್ರತಾವತರಣ, ವಿವಾಹ, ವರ್ಣಲಾಭ, ಕುಲಚರ್ಯಾ, ಗೃಹೀಶಿತ್ವ ಪ್ರಶಾಂತಿ, ಗೃಹತ್ಯಾಗ, ದೀಕ್ಷಾದ್ಯ, ಜಿನರೂಪತಾ, ಮೌನಾಧ್ಯಯನವೃತ್ತಿ, ತೀರ್ಥಕರತ್ತ್ವಭಾವನಾ, ಗುರುಸ್ಥಾನಾಭ್ಯುಪಗಮ, ಗಣೋಪಗ್ರಹಣ, ಸ್ವಗುರುಸ್ಥಾನ ಸಂಕ್ರಾಂತಿ, ನಿಸ್ಸಂಗತ್ವಭಾವನಾ, ಯೋಗನಿರ್ವಾಣಸಂಪ್ರಾಪ್ತಿ, ಯೋಗನಿರ್ವಾಣಸಾಧನ, ಇಂದ್ರೋಪಪಾದ, ಅಭಿಷೇಕ, ವಿಧಿದಾನ, ಸುಖೋದಯ, ಇಂದ್ರತ್ಯಾಗ, ಅವತಾರ, ಹಿರಣ್ಯ ಗರ್ಭೋತ್ಕೃಷ್ಟಜನ್ಮತಾ, ಮಂದರಾದ್ರೀಂದ್ರಾಭಿಷೇಕ, ಗುರುಪೂಜೋಪಲಂಭನ, ಯೌವರಾಜ್ಯ, ಸ್ವರಾಜ್ಯ, ಚಕ್ರಲಾಭ, ದಿಗ್ವಿಜಯ, ಚಕ್ರಾಭಿಷೇಕ, ಸಾಮ್ರಾಜ್ಯ, ಪರಿನಿಷ್ಕ್ರಮಣ, ಯೋಗಸಮ್ಮಹ, ಆರ್ಹಂತ್ಯ, ವಿಹಾರಯೋಗತ್ಯಾಗ, ಅಗ್ರನಿರ್ವೃತಿ (ಅಯ್ವತ್ತಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗರ್ಭಾವತರಣ** – ಜಿನಮಾತೆಯ ಗರ್ಭದಲ್ಲಿ ತೀರ್ಥಂಕರನ ಆಗಮನ, ಪಂಚಕಲ್ಯಾಣಗಳಲ್ಲಿ ಒಂದು (ಉತ್ಸವಪರಂಪರೆಗಳಿಂ ಪರಮನ ಚರಮ ಗರ್ಭಾವತರಣಮನಜೆದು: **ಚಂದ್ರಪ್ರಪು,** ೧೧. ೧೪೯ ವ)

**ಗುಣ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಳ್ಪುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೆೞ್ವುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹ ದ್ವಯಾವಸ್ಥಾನಂ ದ್ವೈಧೀಭಾವನಕ್ಕುಂ: **ಚಾವುಂಡಜಯ,** ಮ. ೨೫೭)

**ಗುಣಮೇಟು** – ದಾತೃವಿನ ಏಳು ಗುಣಗಳು: ಶ್ರದ್ಧೆ ಶಕ್ತಿ ಭಕ್ತಿ ವಿಜ್ಞಾನ ಅಲುಬ್ಧತಾ ಕ್ಷಮಾ ತ್ಯಾಗ (ನೆಱೆದಟ್ಟಿ ಭಕ್ತಿ ದಯೆ ಪುದಿದ ಅಱಿವು ಔದಾರ್ಯಂ ಕ್ಷಮಾಗುಣಂ ಶಕ್ತಿಯುಂ ಎಂಬ ಅಱಿಕೆಯ ಗುಣಮೇಟಿಱೊಳಂ ನೆಱೆದು ಇತ್ತರ್ ಮುನಿಯುಗಕ್ಕೆ ದಾನಮನವರ್ಗಳ್: **ಆದಿಪು,** ೪. ೯೭)

**ಗುಣವ್ರತ** – ಶ್ರಾವಕರು ಹೊಂದಿರುವ ದಿಗ್ವಿರತಿ, ದೇಶವಿರತಿ, ಅನರ್ಥದಂಡವಿರತಿ ಎಂಬ ಮೂರು ವ್ರತಗಳು (ಭಟಾರರ ಪಕ್ಕದೆ ಆಂ ಅಣುವ್ರತ ಗುಣವ್ರತ ಶಿಕ್ಷಾವ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುಮಂ: **ವಡ್ಡಾರಾ,** ಪು ೧೨೭, ಸಾ ೨೨); ಹೀಗೆ ಆಚರಿಸುವ ಸದ್ಗುಣಗಳ ವ್ರತ (ಪೋ ವ್ರತಮಾವ ಪೆಂಡಿರೊಳಮಿರ್ದೊಡೇನೊ ವಿಳಾಸಮಾಂತ ನಿತ್ಯವ್ರತಮಾಕೆಯೊಳ್ ಸೊಬಗುವೆತ್ತ ಗುಣವ್ರತ: **ನೇಮಿನಾಪು,** ೧. ೭೬)

**ಗುಣಶ್ರೇಣಿನಿರ್ಜರೆ** – ಕರ್ಮಗಳನ್ನು ನಾಶಪಡಿಸುವ ವಿಧಿಗಳಲ್ಲಿ ಒಂದು; (ಮತ್ತಿನುಳಿದ ಕರ್ಮಂಗಳಂ ಸ್ಥಿತ್ಯನುಭಾಗಕಾಂಡಕಘಾತಪ್ರದೇಶಗುಣಶ್ರೇಣಿನಿರ್ಜರಾದಿ ವಿಧಿಯಿನನುಕ್ರಮಂ ಕಿಡಿಸುತ್ತುಂ: **ಆದಿಪು,** ೧೦. ೧೪ ವ)

**ಗುಣಸ್ಥಾನ** – ಆತ್ಮನ ದರ್ಶನ ಜ್ಞಾನ ಚಾರಿತ್ರಗಳು ವಿಕಾಸಗೊಳ್ಳುವ  ಮಿಥ್ಯಾತ್ವ, ಸಸಾದನ, ಮಿಶ್ರ, ಅವಿರತಸಮ್ಯಕ್ತ್ವ, ದೇಶರತ, ಪ್ರಮತ್ತವಿರತ, ಅಪ್ರಮತ್ತವಿರತ, ಅಪೂರ್ವಕರಣ, ಅನಿವೃತ್ತಿಕರಣ, ಸೂಕ್ಷ್ಮ ಸಾಂಪರಾಯ, ಉಪಶಾಂತ ಮೋಹ, ಕ್ಷೀಣ ಮೋಹ, ಸಯೋಗಕೇವಲಿ ಮತ್ತು ಅಯೋಗಕೇವಲಿ ಎಂಬ – ಹದಿನಾಲ್ಕು ಅವಸ್ಥೆಗಳು (ಪತ್ತುಂ ಧರ್ಮದೊಳ್ ನೆಱೆದು ಪನ್ನೊಂದು ಗುಣಸ್ಥಾನದೊಳ್ ನೆಱೆದು ನೆಗಟ್ದಿ ... ತಪೋಮಾರ್ಗದೊಳ್: **ಅನಂತಪು,** ೧೨. ೩೨ ವ)

**ಗುಪ್ತಿತ್ರಯ** – ಮನಸ್ಸು ಮಾತು ಮತ್ತು ದೇಹಗಳನ್ನು ನಿಗ್ರಹಿಸುವ ಮೂರು ಗುಪ್ತಿಗಳು (ಮನೋಗುಪ್ತಿಯುಂ ವಾಗ್ಗುಪ್ತಿಯುಂ ಕಾಯಗುಪ್ತಿಯುಮೆಂಬ ಗುಪ್ತಿತ್ರಯದೊಳಂ: **ಅಜಿತಪು,** ೭. ೮ ವ)

**ಗುರುಪಂಚಕ** – ಪಂಚಪರಮೇಷ್ಠಿಗಳು: ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು (ಗುರುಪಂಚಕವಜ್ರಪಾತವಾದಂದು ಕಟಿಲ್ದು ನುಚ್ಚುನುಱಿಯಾಗದೆ ನಿಲ್ಕುಮೇ ಪಾಪಪರ್ವತಂ: **ಸಮಯಪ,** ೧. ೯೮)

**ಗುರುಪೂಜೋಪಲಂಭನ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ದೇವತೆಗಳಿಂದ ಪೂಜೆಗೊಳ್ಳುವಿಕೆ (ಕುಲಚರ್ಯಾ ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ ... ಗುರುಪೂಜೋಪಲಂಭನ ಯೌರಾಜ್ಯ ಸ್ವರಾಜ್ಯ ಚಕ್ರಲಾಭ ... ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗುರುಪೂಜೋಪಳಂಬನಕ್ರಿಯೆ** – ಜಗದ್ಗುರುವೆನಿಸಿನ್ನಿಸಿಕೊಂಡು ದೇವತೆಗಳಿಂದ ಪೂಜೆಗೊಳ್ಳುವುದು (ಸಕಳ ವಿದ್ಯೋಪದೇಶದಿಂ ಸ್ವತಂತ್ರ ಸ್ವಯಂಭುವಾಗಿ ಶಿಷ್ಯತ್ವಮುಂ ಪತ್ತುವಿಟ್ಟು ಜಗದ್ಗುರುವೆನಿಸಿ ದೇವರ್ಕಳಿಂ ಪೂಜೆಯನೆಯ್ದುವುದು ಗುರುಪೂಜೋಪಳಂಬನಕ್ರಿಯೆ: **ಚಾವುಂಡಜಯ,** ಪು. ೧೮೫)

**ಗುರುಸ್ಥಾನಾಭ್ಯುಪಗಮ** – ಒಂದು ಗರ್ಭಾನ್ವಯಕ್ರಿಯೆ, ಗುರುವಿನ ಬಳಿ ಹೋಗುವುದು (ಗುರುಸ್ಥಾನಾಭ್ಯುಪಗಮ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗುರುಸ್ಥಾಪನಾಭ್ಯುಪಗಮನಕ್ರಿಯೆ**– ಗುರುವಿನ ಒಪ್ಪಿಗೆ ಪಡೆದು ಗುರುಸನ್ನಿಧಿಯಲ್ಲಿ ನೆಲಸುವುದು (ಗುರುಗಳ ಅನುಮತದಿಂ ಜ್ಞಾನವಿಜ್ಞಾನಸಂಪನ್ನನುಂ ವಿನೀತನುಂ ಧರ್ಮಶೀಲನುಮಾಗಿ ಗುರುಪದದೊಳ್ ನಿಲ್ವುದು ಗುರುಸ್ಥಾಪನಾಭ್ಯುಪ ಗಮನಕ್ರಿಯೆ: ಚಾವುಂಡಜಯ, ಪು. ೧೮೪)

**ಗುರುಸ್ಥಾಪನಾಸಂಕ್ರಾಂತಿಕ್ರಿಯೆ** – ಗುರುಗಳ ಅನುಮತಿಯಿಂದ ಗಣದ ನೇತೃತ್ವ ವಹಿಸುವುದು (ಅಧಿಕವಿದ್ಯನಾಗಿ ಸದ್ವಿದ್ಯರಪ್ಪ ಮುನೀಂದ್ರೋತ್ತಮರಾದ ಋಷಿಯೋಗ್ಯನಪ್ಪ ಶಿಷ್ಯನಂ ಕರೆದು ತಮ್ಮ ಭಾರಮುನವರ್ಗಪ್ಪೈಸಿ ಗುರುಗಳನುಮತದಿಂದದಱ ಪದವಿಯೊಳ್ ನಿಲ್ತು ಗಣಮಂ ನಡೆಯಿಸುವುದು ಗುರುಸ್ಥಾಪನಾಸಂಕ್ರಾಂತಿಕ್ರಿಯೆ: **ಚಾವುಂಡಜಯ,** ಪು. ೧೮೪)

**ಗುಹ್ಯಕ** – ದೇವತೆಗಳಲ್ಲಿ ಒಂದು ಭೇದ, ಅವರ ಒಡೆಯನೇ ಕುಬೇರ (ಅಂತು ತಾಮ್ರಮಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ: **ಶಾಂತಿಪು,** ೬. ೨೯ ವ)

**ಗೂಢಬ್ರಹ್ಮಚಾರಿ** – ಬ್ರಹ್ಮಚಾರಿಯ ಐದು ಪ್ರಭೇದಗಳಲ್ಲಿ ಒಂದು, ಕುಮಾರಶ್ರವಣದಿಂದ ಆಗಮಾಭ್ಯಾಸದಲ್ಲಿ ತೊಡಗುವವನು (ಗೂಢಬ್ರಹ್ಮಚಾರಿಯೆಂಬೊಂ ಕುಮಾರಶ್ರವಣನಾಗಿ ಸಮಸ್ತಾಗಮಾಭ್ಯಾಸಂಗೆಯ್ದು ... ನಿರಸ್ತ ಪರಮೇಶ್ವರ ರೂಪನಾಗಿ ... ಧರ್ಮದೊಳ್ ನಿಲ್ವೊಂ ಗೃಹಾನುಷ್ಠಾನದೊಳ್ ನಿಲ್ವೊಂ: **ಚಾವುಂಡಜಯ,** ಪು ೧೯೩)

**ಗೃಹತ್ಯಾಗ** – ಒಂದು ಗರ್ಭಾನ್ವಯಕ್ರಿಯೆ, ಆತ್ಮಕಲ್ಯಾಣಕ್ಕಾಗಿ ತನ್ನ ಮನೆಯನ್ನು ತೊರೆಯುವುದು (ವಿವಾಹ ವರ್ಣಲಾಭ ಕುಲಚರ್ಯಾ ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ ... ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗೃಹತ್ಯಾಗಕ್ರಿಯೆ**– ಗೃಹತ್ಯಾಗ, ದೀಕ್ಷೆ ಹೊಂದಿ ಮನೆಯನ್ನು ಬಿಟ್ಟು ಹೋಗುವುದು (ಪಡೆದೊಡಮೆಯಂ ಮೂಱುಭಾಗಂಗೆಯ್ದೊಂದು ಭಾಗಮಂ ಧರ್ಮಕ್ಕೆ, ಮತ್ತೊಂದು ಭಾಗಮಂ ಮನೆಯ ಬೀಯಕ್ಕೆ, ಮತ್ತಮುೞಿದ ಭಾಗಮಂ ತನ್ನೊಡವುಟ್ಟಿದ ಗಂಡುಗೂಸುಗಳ್ಗಮವಱೊಳ್ ಪೆಣ್ಗೂಸುಗಳ್ಗಂ ಸುವಿ ಭಾಗಂಗೆಯ್ದು ... ಗುರುಗಳುಮಂ ದೇವರುಮಂ ಪೂಜಿಸುವುದೆಂದು ಪಿರಿಯ ಮಗನಂ ನಿಲಿಸಿ ದೀಕ್ಷಾಭಿಮುಖನಾಗಿ ಮನೆಯಿಂ ಪತ್ತುವಿಡುವುದು ಗೃಹತ್ಯಾಗಕ್ರಿಯೆ: **ಚಾವುಂಡಜಯ,** ಪು. ೧೮೩)

**ಗೃಹಪತಿರತ್ನ** – ಚಕ್ರವರ್ತಿಗೆ ತಾವಾಗಿ ದೊರೆಯುವ ಏಳು ಜೀವರತ್ನಗಳಲ್ಲಿ ಒಂದು (ಕಾಮವೃಷ್ಟಿಯೆಂಬ ಗೃಹಪತಿರತ್ನಮುಂ: **ಆದಿಪು,** ೧೧. ೩ ವ)

**ಗೃಹಮಹಿಜಾತ** – ಹತ್ತು ಕಲ್ಪಕುಜಗಳಲ್ಲಿ ಒಂದು, ಬೇಕಾದ ಮನೆಯನ್ನು ನೀಡುವ ವೃಕ್ಷ (ಹಾಟಕಭಿತ್ತಿಸಮನ್ವಿತ ನಾಟಕಶಾಲೆಗಳ ವಿವಿಧಸೌಧಂಗಳ ಕೊಂಡಾಟಮನೆ ಮೆಱೆದು ಮೆಚ್ಚಂ ಪಾಟಿಸುವುವು ಮಿಥುನತತಿಗೆ ಗೃಹಮಹಿಜಾತಂ: **ಆದಿಪು,** ೫. ೩೭)

**ಗೃಹಾಂಗ** – ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಮನೆಗಳನ್ನು ಕೊಡುವಂಥ ಕಲ್ಪವೃಕ್ಷ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಗೃಹೀಶಿತ್ವ** – ಒಂದು ಗರ್ಭಾನ್ವಯಕ್ರಿಯೆ, ತನ್ನ ಜ್ಞಾನದಿಂದ ಆರ್ಹ ಎನ್ನಿಸಿಕೊಳ್ಳುವುದು (ಗೃಹೀಶಿತ್ವ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗೃಹೀಶಿತ್ವಕ್ರಿಯೆ**– ಉತ್ತಮ ಗೃಹಸ್ಥನೆನಿಸಿಕೊಳ್ಳುವಂತೆ ನಡೆದುಕೊಳ್ಳುವುದು (ಧರ್ಮದೊಳ್ ದೃಢನಾಗಿ ಗೃಹಸ್ಥಾಚಾರ್ಯನುಂ ವರ್ಣೋತ್ತಮನುಮೆನಿಸಿ ... ತನ್ನುನ್ನತಿಯಿಂ ನೆಗೞ್ದ ಮಹಿದೇವನುಂ ಸುಶ್ರುತನುಂ ನಿಸ್ತಾರಕೋತ್ತಮನುಮನಾರ್ಹನುಮೆನಿಸುವುದು ಗೃಹೀಶಿತ್ವಕ್ರಿಯೆ: **ಚಾವುಂಡಜಯ,** ಪು. ೧೮೩)

**ಗೋಕ್ಷೀರರಕ್ತಜತ್ವ** – ತೀರ್ಥಂಕರತ್ವ ಬರುವ ಜೀವನ ರಕ್ತವು ಹಸುವಿನ ಹಾಲಿನಂತೆ ಬೆಳ್ಳಗಾಗುವ ಸ್ಥಿತಿ (ಗೋಕ್ಷೀರತ್ವಜತ್ವಮುಂ ನಿಸ್ವೇದಮುಂ ಸಮಚತುರಶ್ರಮಪ್ಪ ಸಂಸ್ಥಾನ ಸಂಹನನಮುಂ ಅತಿಶಯರೂಪತೆಯುಂ ... ತನಗನುಸಂಗತಮೇಗೆ ಯೌವನಪ್ರಾಪ್ತನಾಗಿ: **ಶಾಂತಿಪು,** ೧೦. ೯೪ ವ)

**ಗೋಚಾರ** – ಗೋಚಾರನಿಯಮ, ಹಸುವಿನಂತೆ ಆಹಾರಕ್ಕಾಗಿ ಚರಿಸುವ ಸಾಧುವಿನ ಭಿಕ್ಷಾಕ್ರಮ (ನವಕೋಟಿ ಪರಿಶುದ್ಧಮುಂ ಗೋಚಾರಮುಂ ಅಕ್ಷಮ್ರಕ್ಷಮುಂ ಉದರಾಗ್ನ್ಯುಪಶಮನಮುಂ ... ಆಗೆ: **ಅಜಿತಪು,** ೭. ೧ ವ)

**ಗೋತ್ರಕರ್ಮ** – ಜೀವನಿಗೆ ಅಂಟಿಕೊಳ್ಳುವ ಎಂಟು ಬಗೆಯ ಕರ್ಮಗಳಲ್ಲಿ ಒಂದು; ಮಿಥ್ಯಾತ್ವ ಮೊದಲಾದ ಬಂಧ ಕಾರಣಗಳ ಮೂಲಕ ಜೀವದೊಂದಿಗೆ ಸಂಬಂಧವನ್ನು ಪ್ರಾಪ್ತಿಮಾಡುವ ಪುದ್ಗಲಸ್ಕಂದವನ್ನು ಗೋತ್ರ ಹೆಸರಿನಿಂದ ಕರೆಯಲಾಗುತ್ತದೆ; ಉಚ್ಚ ಮತ್ತು ನೀಚವೆಂದು ಇದರಲ್ಲಿ ಎರಡು ವಿಧ (ಗೋತ್ರಕರ್ಮಂ ಉಚ್ಚನೀಚಮಿರ್ತೆಜಿನಕ್ಕುಂ: **ಶಾಂತಿಪು** ೧೨. ೧೧ ವ)

**ಗೋಮುಖಿ** – ಒಂದು ನೋಂಪಿ (ಗೋಮುಖಿಯೆಂಬ ನೋಂಪಿಯ ನೆವದಿಂ ದೇವಕಿಯುಂ ವಸುದೇವನುಂ ಬಲದೇವನುಂ ವಾಸುದೇವನ ತುಱುಪಟ್ಟಿಗೆ ... ಬಂದು: **ನೇಮಿನಾಪು,** ೮. ೨೦ ವ)

**ಗೌರವತ್ರಯ** – ಶಬ್ದ, ಋದ್ಧಿ, ಸಾತ ಎಂಬ ಮೂರು ಬಗೆಯ ಗೌರವ [ಅಹಂಕಾರ]ಗಳು; ವ್ಯಕ್ತಿಗೆ ತನ್ನ ಧ್ವನಿಯಿಂದಲೂ ಐಶ್ವರ್ಯದಿಂದಲೂ ಆರೋಗ್ಯದಿಂದಲೂ ಬರುವ ಮೂರು ಬಗೆಯ ಅಹಂಕಾರಗಳು (ಗತಗೌರವತ್ರಯಂ ... ಅಪಗತಕಾಲತ್ರಯನನಾಪ್ತ ಗುಪ್ತಿತ್ರಿತಯಂ: **ಪುಷ್ಪದಂಪು,** ೧೪. ೧೫)

**ಗ್ರೈವೇಯಕ** – ಹದಿನಾರು ಸ್ವರ್ಗಗಳ ಮೇಲೆ ಇರುವ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ ಮತ್ತು ಪ್ರೀತಿಂಕರ ಎಂಬ ಒಂಬತ್ತು ಕಲ್ಪಾತೀತವಾದ ಸ್ವರ್ಗಗಳು (ಜೀವಿತ ವ್ಯಪಾಯದೊಳಧೋಗ್ರೈವೇಯಕದೊಳಹಮಿಂದ್ರಪದವಿಯಂ ತಾಳ್ದಿದರ್; **ಆದಿಪು,** ೫. ೨೭ ವ)

## ಘ

**ಘಟಾಂತಿಕೆ** – ಜೈನಯಕ್ಷಿ (ಸರ್ವ ಕಳಾವಿದೆ ಶೌಚ ಘಟಾಂತಿಕೆ ದಾನವಿನೋದೆಯೆಂಬ ಬಿರುದಿಂ ನೆಗಟ್ದಿಳ್: **ಸಮಯಪ,** ೧. ೪೦)

**ಘನವಾತ** – ಭೂಲೋಕವನ್ನು ಆವರಿಸಿರುವ ಘನೋದಧಿ, ಘನವಾತ, ತನುವಾತಗಳೆಂಬ ಮೂರು ವಾಯುಗಳಲ್ಲಿ ಒಂದು (ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅದಱ ಪೆಸರ್ಗಳುಂ ಘನೋದಧಿ, ಘನವಾತ ತನುವಾತಂಗಳೆಂಬುವು: **ಶಾಂತಿಪು,** ೧೨. ೫೧ ವ)

**ಘನೋದಧಿ** – ಅನಂತಲೋಕವನ್ನು ಸುತ್ತಿರುವ ವಾತತ್ರಿತಯಗಳಲ್ಲಿ ಒಂದು (ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅದಱ ಪೆಸರ್ಗಳಂ ಘನೋದಧಿ, ಘನವಾತ ತನುವಾತಂಗಳೆಂಬುವು: **ಶಾಂತಿಪು,** ೧೨. ೫೧ ವ)

**ಘಾತಿ** – ಘಾತಿಕರ್ಮ, ಆತ್ಮನ ಗುಣಕ್ಕೆ ಘಾತಕವಾದ ಕರ್ಮ; ಸತ್ಕಾರ್ಯ ಪ್ರವೃತ್ತಿ ಮುಂತಾದ ಉತ್ತಮಗುಣಗಳನ್ನು ಹಾಳುಮಾಡಿ ಆತ್ಮನ ಪರಿಪೂರ್ಣತೆಗೆ ಬಂಧಕವಾದ ಜ್ಞಾನಾವರಣೀಯ ದರ್ಶನಾವರೀಯ ಅಂತರಾಯ ಮತ್ತು ಮೋಹನೀಯವೆಂಬ ನಾಲ್ಕು ಬಗೆಯ ಕರ್ಮ (ಅಕ್ಷಯಪುಣ್ಯಂ ಉಗ್ರತಪ ಮೆಂಬುಗ್ರಾಸಿಯಿಂ ಕೂಡೆ ಘಾತಿಗಳಂ ಘಾತಿಸಿ: **ಆದಿಪು,** ೩. ೮೦)

**ಘಾತಿಕರ್ಮ**– ಆತ್ಮನ ಗುಣಕ್ಕೆ ಘಾತಕವಾದ ಜ್ಞಾನಾವರಣೀಯ, ದರ್ಶನಾವರಣಿಯ, ಅಂತರಾಯ, ಮೋಹನೀಯ ಎಂಬ ನಾಲ್ಕು ಕರ್ಮಗಳು (ಸುಟ್ಟಂ ಅತುಳ ಧ್ಯಾನಾಗ್ನಿಯಿಂ ಘಾತಿಕರ್ಮನಿಕಾಯಂಗಳಂ ಆಗಳಾಗಳ್: **ಕರ್ಣನೇಮಿ,** ೧೩. ೮೫)

**ಘಾತಿಕ್ಷಯ** – ಘಾತಿಕರ್ಮಗಳ ನಾಶ (ಗಳಿತಮದಂ ದೀಕ್ಷೆಗೊಂಡೆಯ್ದಿ ಘಾತಿಕ್ಷಯಮಂ ಕೈವಲ್ಯಬೋಧಾಸ್ಪದಮನನಘಮಂ ಗೆಲ್ದು ನಿರ್ಮೋಹನಾದಂ: **ಶಾಂತಿಪು,** ೯. ೧೪)

**ಘಾತಿಚತುಷ್ಕ** – ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಮತ್ತು ಅಂತರಾಯ ಎಂಬ ನಾಲ್ಕು ಘಾತಿ ಕರ್ಮಗಳ ಸಮೂಹ (ಚಮರರುದ್ವಯಂ ಬೆಳಪ ಬೆಳ್ಗೊಡೆ ಪೂಮಟೆ ಭಾಪ್ರತಾನಮುತ್ತಮಮಣಿಪೀಠಮಿಂದ್ರಸಭೆಯೆಂಬಿವು ಘಾತಿಚತುಷ್ಕಘಾತದಿಂ ಸಮನಿಸೆ; **ಶಾಂತಿಪು,** ೪. ೬೩)

**ಘಾತಿಚತುಷ್ಟಯ** – ಘಾತಿಚತುಷ್ಕ (ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ ಮಹಾಷ್ಟಾಪದಶೈಲದೊಳ್ವಿಜಿತನಘಾತಿಚತುಷ್ಟಯನ್:... ಇರೆ: **ಆದಿಪು,** ೧. ೪೦)

**ಘಾತಿಪ್ರಚುರೆ** – ಘಾತಿಕರ್ಮಗಳಿಂದ ಕೂಡಿದವಳು (ದುಶ್ಚರಿತರೆನಿಪ ಮಾತಂಗರೊಳ್ ಪುಟ್ಟಿ ಮತ್ತಂ ವಿಕಟಾಂಗೋಪಾಂಗೆ ಘಾತಿಪ್ರಚುರೆ ಪೆಟವಿ ದುರ್ಗಂಧೆ ದುರ್ವರ್ಣೆ: **ಸುಕುಮಾಚ,** ೫. ೨೧)

# ಚ

**ಚಂದ್ರಕ** – ಒಂದು ಇಂದ್ರಕದ ಹೆಸರು (ಚಂದ್ರಕಮೆಂಬ ಮೊದಲ ಇಂದ್ರಕದೊಳ್ ... ಪುಟ್ಟಿದಯ್: **ಶಾಂತಿಪು,** ೭. ೮೩ ವ)

**ಚಂದ್ರಕಚ್ಛತ್ರ** – ನವಿಲುಗರಿಯ ಸೀಗುರಿ (ನಿರಂತರೋಚ್ಛ್ರಿತ ಚಂದ್ರಕಚ್ಛತ್ರಚ್ಛಾಯಾ ನಿರಾಕೃತಾತಪನುಂ: **ಆದಿಪು,** ३. ೯೦ ವ)

**ಚಂದ್ರಗತಿ** – ಚಂದ್ರನು ಬೆಳುದಿಂಗಳನ್ನು ಬಡವಬಲ್ಲಿದರೆಂಬ ಭೇದವಿಲ್ಲದೆ ಹರಡುವಂತೆ ಯತಿಗಳು ಎಲ್ಲರ ಮನೆಗಳಲ್ಲಿಯೂ ಮಾಡುವ ಚರಿಗೆ (ಯುಗಪ್ರಮಾಣ ಮೇದಿನೀತಳ ನಿರೀಕ್ಷಣನುಮಾಗಿ ಪುಗಲ್‌ತಕ್ಕ ಮನೆಗಳೊಳ್ ಚಂದ್ರಗತಿಯಿಂ ಚರಿಗೆವುಗುತ್ತುಂ: **ಸುಕುಮಾಚ,** ೪. ೨೧ ವ)

**ಚಂದ್ರವಿಮಾನ** – ಸ್ವರ್ಗಗಳಲ್ಲಿ ಒಂದು (ಇನಿಸಗ್ಗಳಂ ಚಂದ್ರಕಾಂತಮಣಿಮಯಮಪ್ಪ ಚಂದ್ರವಿಮಾನಮುಂ: **ಸುಕುಮಾಚ,** ೧೧. ೫೯ ವ)

**ಚಕ್ರರತ್ನ** – ಚಕ್ರವರ್ತಿಗಳಿಗೆ ತಾನಾಗಿಯೇ ಒದಗಿಬರುವ ಹದಿನಾಲ್ಕು ರತ್ನಗಳಲ್ಲಿನ ಏಳು ಅಜೀವರತ್ನಗಳಲ್ಲಿ, ಒಂದು; ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ (ನೆಲನಾಕಾಶಂ ದಿಶಾಮಂಡಲಮೆನಿತನಿತುಂ ... ಪರ್ವುವುದನಿದುವೆ ಪೇಟ್ದಪುದೆಂಬಂತೆ ... ಬೆಳಗಿದುದು ದಿಶಾಚಕ್ರಮಂ ಚಕ್ರರತ್ನಂ: **ಆದಿಪು,** ೧೧. ೨)

**ಚಕ್ರಲಾಭ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಚಕ್ರರತ್ನವು ದೊರೆಯುವುದು (ಗೃಹತ್ಯಾಗ ದೀಕ್ಷಾಜಿನರೂಪ ಮೌನಾಧ್ಯಯನ ... ಯೌವರಾಜ್ಯ ಸ್ವರಾಜ್ಯ ಚಕ್ರಲಾಭ ... ಎಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಚಕ್ರಲಾಭಕ್ರಿಯೆ** – ನವನಿಧಿಗಳೂ ಹದಿನಾಲ್ಕು ರತ್ನಗಳೂ ಹುಟ್ಟಿ ಚಕ್ರವರ್ತಿಯಾಗುವುದು (ನವನಿಧಿಗಳುಂ ಚತುರ್ದಶರತ್ನಂಗಳುಂ ಪುಟ್ಟಿ ನೆಲನೆಲ್ಲನನಾಳ್ವುದು ಚಕ್ರಲಾಭಕ್ರಿಯೆ: **ಚಾವುಂಡಜಯ,** ಪು. ೧೮೫)

**ಚಕ್ರಾಭಿಷೇಕ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ದಿಗ್ವಿಜಯಯಾತ್ರೆಯ ಬಳಿಕ ಪಟ್ಟಾಭಿಷಿಕ್ತನಾಗುವುದು (ಗೃಹತ್ಯಾಗ ದೀಕ್ಷಾಜಿನರೂಪ ಮೌನಾಧ್ಯಯನ ... ಯೌವರಾಜ್ಯ ಸ್ವರಾಜ್ಯ ಚಕ್ರಲಾಭದಿಗ್ವಿಜಯ ಚಕ್ರಾಭಿಷೇಕ ... ಎಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಚಕ್ರಾಭಿಷೇಕಕ್ರಿಯೆ** – ದಿಗ್ವಿಜಯಯಾತ್ರೆಯ ಬಳಿಕ ಪುರಕ್ಕೆ ಬಂದು ಪಟ್ಟಾಭಿಷಿಕ್ತ ನಾಗುವುದು (ಸಿದ್ಧದಿಗ್ವಿಜಯನಾಗಿ ಪೊೞಲಂ ಪೊಗುವಲ್ಲಿ ಮಾಳ್ಪಭಿಷೇಕಂ ಚಕ್ರಾಭಿಷೇಕಕ್ರಿಯೆ: **ಚಾವುಂಡಜಯ,** ಪು. ೧೮೬)

**ಚಕ್ರೇಶ** – ಚಕ್ರರತ್ನದ ಒಡೆಯ (ತಾಂ ಚಕ್ರೇಶನಾದೊಡಂ ತನ್ನಾಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪಂ: **ಆದಿಪು,** ೧೪. ೭೯)

**ಚಕ್ರೇಶ್ವರ** – ಚಕ್ರರತ್ನದ ಒಡೆಯ (ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರುಮಾಯ್ತು: **ಆದಿಪು,** ೧೪. ೭೯)

**ಚಕ್ರೇಶ್ವರಿ** – ಒಬ್ಬ ಯಕ್ಷಿ (ಗರುಡಂ ವಾಹನಮಾಗಿರ್ಪ ಚಕ್ರೇಶ್ವರಿ ಭಾಸ್ವದ್ಧರ್ಮ ಚಕ್ರಾಕ್ರಮಿಗಳಂ ಅಲೆದಾಟಿಕ್ಕೆ ವಿಕ್ರಾಂತದಿಂದಂ: **ಆದಿಪು,** ೧. ೭)

**ಚಕ್ರೋದ್ಭವ** – ಚಕ್ರವರ್ತಿಯ ಆಯುಧಾಗಾರದಲ್ಲಿ ಚಕ್ರರತ್ನದ ಉದಯ (ಪುರುದೇವಂಗಾದ ಕೈವಲ್ಯದ ಮಹಿಮೆಯುಂ ಉಗ್ರಾಯುಧಾಗಾರದೊಳ್ ಭಾಸ್ಕರ ಚಕ್ರೋದ್ಭಾಸಿ ಚಕ್ರೋದ್ಭವದ ಪಿರಿದುಮಾಶ್ಚರ್ಯಮಂ: **ಆದಿಪು,** ೧೦. ೪೯)

**ಚಕ್ಷುದರ್ಶನಾವರಣೀಯ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು, ಕಣ್ಣಿನ ಕಾಣ್ಕೆಯನ್ನು (ಚಕ್ಷುದರ್ಶನ) ಮರೆಮಾಚುವುದು (ಚಕ್ಷುದರ್ಶನಾವರಣೀಯಮಂ ಅಚಕ್ಷುದರ್ಶ ನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ಚತುರನುಯೋಗ** – ಪ್ರಥಮಾನುಯೋಗ, ಚರಣಾನುಯೋಗ, ಕರಣಾನುಯೋಗ ಮತ್ತು ದ್ರವ್ಯಾನುಯೋಗ ಎಂಬ ಶ್ರುತಜ್ಞಾನದ ನಾಲ್ಕು ಭಾಗಗಳು (ಜಾತರೂಪಧರನಾಗಿ ಚತುರನುಯೋಗಮುಮಂ ನೋಡಿ: **ಧರ್ಮಾಮೃತ,** ೮. ೩೨ ವ)

**ಚತುರಾನನತ್ವ** – ತೀರ್ಥಂಕರನ ವಿಶೇಷಗಳಲ್ಲಿ ಒಂದು, ನಾಲ್ಕು ಮುಖಗಳಿಂದ ಕೂಡಿರುವುದು (ಮಿತನಖಕೇಶಶೋಭಿತ ತನುತ್ವಂ ಅಭುಕ್ತ್ಯುಪಸರ್ಗಭಾವಂ ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ: **ಆದಿಪು,** ೧೦. ೪೩)

**ಚತುರ್ಗತಿ** – ಕರ್ಮಾನುಗುಣವಾಗಿ ಜೀವನಿಗೆ ಒದಗುವ ನರಕ, ತಿರ್ಯಂಚ, ಮನುಷ್ಯ ಮತ್ತು ದೇವ ಎಂಬ ನಾಲ್ಕು ಬಗೆಯ ಜನ್ಮಗಳು (ಚತುರ್ಗತಿ ಸಂಸಾರಪಯೋಧಿಯಂ ಪೊಱಮಡಲ್ ಮತ್ತಿಲ್ಲ ನೀನಾರ್ತಪೈ; **ಆದಿಪು,** ೩. ೫೬)

**ಚತುರ್ಜ್ಞಾನ** – ಮತಿ, ಶ್ರುತಿ, ಅವಧಿ, ಮನಃಪರ್ಯಾಯಗಳೆಂಬ ನಾಲ್ಕು ಬಗೆಯ ಜ್ಞಾನಗಳು (ಚತುರ್ಜ್ಞಾನನೇತ್ರರಂ ಭೋಂಕೆನೆ ಕಂಡು ರಹರಹ ಪರಿಣಾಮಪರಿಣತನಾಗಿ ಸಮುದಾಯಮಂ ಬಂದಿಸಿ ಸಮುಚಿತೋದ್ದೇಶ ದಾಸನದೊಳ್ ಕುಳ್ಳಿರ್ದು: **ಸುಕುಮಾಚ,** ೮. ೪೮ ವ)

**ಚತುರ್ಥಕಾಲ** – ಆರು ವಿಧದ ಕಾಲಗಳಲ್ಲಿ ನಾಲ್ಕನೆಯದು, ಸುಷಮಕಾಲ (ಪಾಪವರ್ತನಮನಯಂ ಪ್ರವರ್ತಿಸದು ವರ್ತಿಪುದು ಎಯ್ದಿ ಚತುರ್ಥಕಾಲ ವರ್ತನಮೆನೆ: **ಪಾರ್ಶ್ವನಾಪು,** ೬.೧೧)

**ಚತುರ್ಥಧ್ಯಾನ** – ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು (ಅಪಗತಯೋಗಗುಣಸ್ಥಾನನುಂ ಚತುರ್ಥಧ್ಯಾನಾನಳದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ: **ಆದಿಪು,** ೧೬. ೭೪ ವ)

**ಚತುರ್ದಶಗುಣಸ್ಥಾನ** – ಮೋಹ ಹಾಗೂ ಯೋಗಗಳ ನಿಮಿತ್ತದಿಂದ ಆತ್ಮನ ದರ್ಶನ ಮತ್ತು ಚಾರಿತ್ರ ರೂಪ ಗುಣಗಳ ಕ್ರಮವಿಕಾಸ ರೂಪ ಅವಸ್ಥೆಗಳು; ಮಿಥ್ಯಾದೃಷ್ಟಿ, ಸಾಸಾದನ, ಮಿಶ್ರ, ಅಸಂಯತ ಸಮ್ಯಗ್ದೃಷ್ಟಿ, ಸಂಯತಾಸಂಯತ, ಪ್ರಮತ್ತಸಂಯತ, ಅಪ್ರಮತ್ತಸಂಯತ, ಅಪೂರ್ವಕರಣ, ಅನಿವೃತ್ತಿಕರಣ, ಸೂಕ್ಷ್ಮಲೋಭ, ಉಪಶಾಂತ ಕಷಾಯ, ಕ್ಷೀಣಕಷಾಯ, ಸಯೋಗಕೇವಲಿ, ಅಯೋಗಕೇವಲಿ (ಚತುರ್ದಶಗುಣಸ್ಥಾನಂಗಳಂ ನಂಬಿ ಪೊರ್ದಿದವರ್ ಪೊರ್ದಿದರಲ್ತೆ ಮುಕ್ತಿವನಿತಾ ಕಾಂಚೀಗುಣಸ್ಥಾನಮಂ: **ಆದಿಪು,** ೧೫. ೧೯)

**ಚತುರ್ದಶಪೂರ್ವ** – ಶ್ರುತಾಂಗಗಳ ವಿವರಣೆ ನೀಡುವ ಹದಿನಾಲ್ಕು ಪೂರ್ವ ಗ್ರಂಥಗಳು: ಉತ್ಪಾದ, ಅಗ್ರಾಯಣೀ, ವೀರ್ಯಾನುವಾದ, ಅಸ್ತನಾಸ್ತಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮ ಪ್ರವಾದ, ಪ್ರತ್ಯಖ್ಯಾನ, ವಿದ್ಯಾನುವಾದ, ಕಲ್ಯಾಣವಾದ, ಪ್ರಾಣವಾಯು, ಕ್ರಿಯಾವಿಶಾಲ, ಲೋಕಬಿಂದುಸಾರ (ಇತ್ತ ಗಂಧಭಾಜನ ಮುನಿಯುಂ ದ್ವಾದಶಾಂಗ ಚತುರ್ದಶಪೂರ್ವಮಪ್ಪ ಆಗಮಮೆಲ್ಲಮಂ ಕಲ್ತು ಪಲಕಾಲಂ ಉಗ್ರೋಗ್ರ ತಪಶ್ಚರಣಂಗೆಯ್ದು: **ವಡ್ಡಾರಾ,** ಪು ೪೯, ಸಾ ೧೩)

**ಚತುರ್ದಶಭೇದ ಜೀವಸಮಾಸೆ** – ಜೀವಪ್ರತತಿಯ ಹದಿನಾಲ್ಕು ಭೇದಗಳು (ಏಕೇಂದ್ರಿಯ ಬಾದರಪರ್ಯಾಪ್ತಕಾಪರ್ಯಾಪ್ತಕಂ ಸೂಕ್ಷ್ಮೇಂದ್ರಿಯ ಪರ್ಯಾಪ್ತಕಾಪರ್ಯಾತಕಂ ದ್ವೀಂದ್ರಿಯ ಪರ್ಯಾಪ್ತಕಾಪರ್ಯಾಪ್ತಕಂ ತ್ರೀಂದ್ರಿಯ ಪರ್ಯಾಪ್ತಕಾಪರ್ಯಾಪ್ತಕಂ ಚತುರಿಂದ್ರಿಯ ಪರ್ಯಾಪ್ತಕಾಪರ್ಯಾಪ್ತಕಂ ಅಸಂಜ್ಞಿ ಪಂಚೇಂದ್ರಿಯ ಪರ್ಯಾಪ್ತಕಾಪರ್ಯಾಪ್ತಕಂ ಸಂಜ್ಞಿಪಂಚೇಂದ್ರಿಯ ಪರ್ಯಾಪ್ತಕಾಪರ್ಯಾಪ್ತಕಂ ಎಂದಿಂತು ಚತುರ್ದಶ ಭೇದ ಜೀವಸಮಾಸೆ: **ಜೀವಸಂ,** ೫. ೧ ವ)

**ಚತುರ್ದಶಮನು** – ಹದಿನಾಲ್ಕು ಮಂದಿ ಮನುಗಳು: ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ (ಅಜ್ಞಾನ ತ್ರಯರಹಿತರ್ ... ಅಧಿಕಪ್ರಜ್ಞರ್ ಪುಟ್ಟುವರೀ ನೆಲನಾಜ್ಞಾಮುದ್ರಿತಮೆನಲ್ ಚತುರ್ದಶ ಮನುಗಳ್: **ಪಂಪರಾ,** ೧. ೬೯)

**ಚತುರ್ದಶಾತಿಶಯ** – ತೀರ್ಥಂಕರನಿಗೆ ಪ್ರಾಪ್ತವಾಗುವ ಹದಿನಾಲ್ಕು ಅತಿಶಯಗಳು (ಆದರ್ಶತಳಪ್ರತಿಮರತ್ನಮಹೀತಳತ್ವಮುಂ ತೃಣಧೂಳಿಶರ್ಕರಾಕಂಟಕಾದಿರಹಿತ ಮಹೀತಳದೊಳ್ ವಾತಕುಮಾರಸಂಸ್ತರಣಮುಂ ಮೇಘಕುಮಾರಸುರಭಿಜಳ ಸೇಚನಮುಂ ಕುಬೇರಕುಸುಮವೃಷ್ಟಿಪಾತಮುಂ ಸುರಭಿಮೃದುಶೀತಪವನ ವಿಜೃಂಭಣಮುಂ ಆಶಾವಲಯನಿರ್ಮಳತ್ವಮುಂ ಸರ್ವಭಾಷಾತ್ಮ ಕಾರ್ಧಮಾಗಧತ್ವಧ್ವನಿ ನಿರ್ಗಮನಮುಂ ಸಮವಸರಣಮಂಡಲ ಗತವೈಯಾಮ ಯವ್ಯದಾಪಾಹ್ವಾನಮುಂ ವಿವಿಧವಿಷಯ ಗೋಚರಾನಂದಮುಂ ಶಾಲಿ ವ್ರೀಹಿ ಗೋಧೂಮಾದಿ ಪ್ರಕೃಷ್ಟ ಸಸ್ಯನಿಷ್ಪತ್ತಿಯುಂ ಗರ್ವರ್ತುಕ ಕುಸುಮಫಲ ಪಲ್ಲವಭರಿತ ತರುವನಪರಿಣಾಮಮುಂ ವಿನ್ಯಾಸಾಪರಸ್ಪಷ್ಟ ಕನಕಕಮಲ ಸಪ್ತಕ ಸನ್ನಿಧಾನಮುಂ ಅಷ್ಟವಿಧ ಮಂಗಳದ್ರವ್ಯಾಧಾರಿ ವಿಷಯಜನ ಪ್ರತ್ಯುದ್ಗಮುಂ ಧರ್ಮಚಕ್ರಪುರಸ್ಸರಜನಪ್ರತತಿ ಸದ್ಧರ್ಮಪೋಷಣೆಯುಂ ಎಂಬ ಚತುರ್ದಶಾತಿಶಯಮುಮಂ ತಾಳ್ದಿ: **ಅಜಿತಪು,** ೮. ೨೫ ವ)

**ಚತುರ್ನಿಕಾಯ** – ಭವನವಾಸಿ, ವ್ಯಂತರ, ಜ್ಯೋತಿಷ್ಯ, ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತಾಸಮೂಹ (ದ್ವಾರಾವತೀಪುರಮನೆಯ್ದಿ ಬಹಿಃಪ್ರದೇಶದೊಳ್ ನಿಲೆ ಚತುರ್ನಿಕಾಯ ಅಮರೇಂದ್ರವೃಂದವೊಂದಿ: **ಕರ್ಣನೇಮಿ.** ೮. ೧೧೧ ವ)

**ಚತುರ್ನಿಕಾಯಾಮರ** – ಭುವನ, ವನ, ಜ್ಯೋತಿ, ಕಲ್ಪ – ಇವುಗಳ ದೇವತೆಗಳು (ಅಂತು ಚತುರ್ನಿಕಾಯಾಮರಜನಂ ಬೆರಸುಂ ಅಮರರಾಜಂ ಅಮರನಗರಿಗೆ ಪೋದಂ: **ಅಜಿತಪು,** ೫, ೬೦ ವ)

**ಚತುರ್ಭಕ್ತಿ** – ನಾಲ್ಕು ಭಕ್ತಿಗಳು (ಅರ್ಹತ್‌ಭಕ್ತಿ ಆಚಾರ್ಯಭಕ್ತಿ ಬಹುಶ್ರುತ ಭಕ್ತಿ ಶ್ರುತಭಕ್ತಿ ಎಂಬ ಚತುರ್ಭಕ್ತಿಯುಂ: **ಚಂದ್ರಪ್ರಪು,** ೧೦. ೨೨)

**ಚತುರ್ಮುಖ** – ಹತ್ತು ವಿಧವಾದ ಪೂಜೆಗಳಲ್ಲಿ ಒಂದು; ಮಹಾಸಾಮಂತರು ಮಾಡುವ ಜಿನಪೂಜೆ (ಮಹಾಮಂಡಳಿಕ ಪ್ರಮುಖ ಮಕುಟಬದ್ಧರ್ ಮಾೞ್ಪ ಚತುರ್ಮುಖಮುಂ: **ಆದಿಪು,** ೧೫. ೧೩ ವ)

**ಚತುರ್ವಿಧದಾನ** – ಆಹಾರ, ಔಷಧ, ವಿದ್ಯೆ ಮತ್ತು ಅಭಯಗಳೆಂಬ ನಾಲ್ಕು ದಾನಗಳು (ಸಂದ ಚತುರ್ವಿಧದಾನಂ ಅಗುಂದಲೆಯೆನೆ ಮಾಡಿ; **ಕರ್ಣನೇಮಿ,** ೨. ೮೦)

**ಚತುರ್ವಿಧದೇವನಿಕಾಯ** – ಭವನವಾಸಿ, ವ್ಯಂತರ, ಜ್ಯೋತಿಷ್ಯ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ಸಮೂಹ (ಮೂಱುಲಕ್ಕೆ ದೃಢಬ್ರತಾದಿ ಶ್ರಾವಕರುಂ ಅಯ್ದುಲಕ್ಕೆ ಸುವ್ರತೆ ಮೊದಲಾಗೆ ಪರಮ ಶ್ರಾವಕಿಯರುಂ: **ಆದಿಪು,** ೧೬. ೪೦ ವ)

**ಚತುರ್ವಿಧಧ್ಯಾನ** – ನಾಲ್ಕು ಬಗೆಯ ಧ್ಯಾನಪ್ರಭೇದಗಳು (ಆರ್ತ ರೌದ್ರ ಧರ್ಮ ಶುಕ್ಲಮೆಂಬ ಚತುರ್ವಿಧಧ್ಯಾನಂಗಳೊಳ್: **ಚಾವುಂಡಜಯ,** ಪು, ೩೮೪)

**ಚತುರ್ವಿಧ ರಾಜವೃತ್ತ** – ರಾಜನು ಅನುಸರಿಸಬೇಕಾದ ನಾಲ್ಕು ನಡವಳಿಕೆ (ನ್ಯಾಯದೊಳರ್ಥೋಪಾರ್ಜನಂಗೆಯ್ದು ಪಡೆದುದಂ ಪೆರ್ಚಿಸಿ ಪೆರ್ಚಿದುದಂ ಕೊಂಡು ಸತ್ಪಾತ್ರ ಪ್ರತಿಪತ್ತಿಗೆಯ್ವುದೆಂದು ಚತುರ್ವಿಧ ರಾಜವೃತ್ತಮನಱಿಪಿ: **ಚಾವುಂಡಜಯ,** ಪು ೧೮೬)

**ಚತುರ್ವಿಧಶುಕ್ಲಧ್ಯಾನ** – ಪೃಥಕ್ತ್ವವಿತರ್ಕವಿಚಾರ, ಏಕತ್ವವಿತರ್ಕವಿಚಾರ, ಸೂಕ್ಷ್ಮಕ್ರಿಯಾ ಪ್ರತಿಪಾತಿ, ವ್ಯುಪರತ ಕ್ರಿಯಾನಿವೃತ್ತಿ ಎಂಬ ನಾಲ್ಕು ಬಗೆಯ ಶುಕ್ಲಧ್ಯಾನಗಳು (ಚತುರ್ವಿಧಶುಕ್ಲಧ್ಯಾನದೊಳ್ ಪೂರ್ವಾಪರವಿಷಯ ವಿವಿಕ್ತಾರ್ಥ ವ್ಯಂಜನವೀರ್ಯ ವಿಧಿವ್ಯಂಜನಯೋಗ ಸಂಕ್ರಮಣಲಕ್ಷಣಲಕ್ಷಿತಮಪ್ಪ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್: **ಆದಿಪು,** ೬. ೩೪ ವ)

**ಚತುರ್ವಿಧಾಮರ** – ಚತುರ್ನಿಕಾಯ (ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಂ ಆಗಿರ್ದ ಚತುರ್ವಿಧಾಮರರ್ ಉದಾರರ್: **ಪುಷ್ಪದಂಪು,** ೧೦. ೧೩)

**ಚತುರ್ವಿಧಾರಾಧನೆ** – ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ, ಸಮ್ಯಕ್‌ತಪಸ್ಸು ಎಂಬ ನಾಲ್ಕು ಆರಾಧನಾ ಬಗೆಗಳು (ಅರಲ್ದ ಮುಖಪದ್ಮಮುಂ ನಿಬಿಡಬದ್ಧ ಪರ್ಯಂಕದೊಳ್ ಮರಲ್ದ ಕರಪಲ್ಲವದ್ವಿತಯಮುಂ ಬೆಡಂಗಪ್ಪಿನಂ ನಿರಂತರವಿಶೋಧಿ ಕೂಡಿರೆ ಚತುರ್ವಿಧ ಆರಾಧನಾಪುರಸ್ಸರತೆಯಿಂ ಸಮಾಧಿ ವಿಧಿಗೇಂ ಮನಂದಂದಳೋ: **ಸುಕುಮಾಚ,** ೯. ೧೫)

**ಚತುರ್ವಿಧಾಹಾರ** – ಅನ್ನ, ಪಾನ, ಖಾದ್ಯ, ಲೇಹ್ಯ (ಲೇಪ್ಯ, ಓಜ, ಕಬಳ, ಮಾನಸ) ಎಂಬ ಆಹಾರಗಳು (ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರ ಶರೀರಪ್ರತ್ಯಾಖ್ಯಾನಮಂ ಕೊಟ್ಟು: **ಆದಿಪು,** ೨. ೫೧ ವ)

**ಚತುರ್ವಿಧಾಹಾರಶರೀರಪ್ರತ್ಯಾಖ್ಯಾನ** – ನಾಲ್ಕು ಬಗೆಯ ಆಹಾರಗಳನ್ನೂ ಶರೀರದ ಅಭಿಮಾನವನ್ನೂ ತೊರೆಯುವುದು: (ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನವುಂ ಕೊಟ್ಟು: **ಆದಿಪು,** ೨. ೫೧ ವ)

**ಚತುಷ್ಕಷಾಯ** – ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ಕಷಾಯಗಳು (ತ್ರಿಗುಪ್ತಿಗುಪ್ತನುಂ ಚತುಷ್ಕಷಾಯದರ್ಪದಳನನುಂ: **ಅಜಿತಪು,** ೩. ೧ ವ)

**ಚತುಷ್ಷಷ್ಟಿಲಕ್ಷಣ** – ಪುರುಷನ ಅರುವತ್ತನಾಲ್ಕು ಶುಭಚಿಹ್ನೆಗಳು (ಸ್ವಸ್ತಿಕ ನಂದ್ಯಾವರ್ತಾದಿ ಚತುಷ್ಷಷ್ಟಿಲಕ್ಷಣಧರನುಂ ತಿಳಮಸೂರಿಕಾದ್ಯನೇಕ ವ್ಯಂಜನ ನಿಧಿಯುಂ ಅಪಾರವೀರ್ಯನುಂ: **ಆದಿಪು,** ೧೫. ೩ ವ)

**ಚತುಸ್ತ್ರಿಂಶದತಿಶಯ** – ಅರ್ಹಂತನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳು ಅಥವಾ ವಿಶೇಷಗಳು: ನಿಸ್ವೇದತೆ, ನಿರ್ಮಲ ಶರೀರ, ಹಾಲಿನಂತೆ ಬಿಳಿರಕ್ತ, ವಜ್ರವೃಷಭ ನಾರಾಚನಸಂಹನನ, ಸಮಚತುರಸ್ರ ಶರೀರಸಂಸ್ಥಾನ, ಅನುಪಮ ರೂಪ, ಸುಗಂಧದ ಉಸಿರು, ಸಾವಿರದೆಂಟು ಉತ್ತಮ ಲಕ್ಷಣಗಳು, ಅನಂತಬಲ ಹಾಗೂ ಹಿತಮಿತಮಧುರಭಾಷಣ ಎಂಬ ಹುಟ್ಟಿನ ಹತ್ತು ವಿಶೇಷಗಳು; ಸುತ್ತ ನೂರು ಯೋಜನ ಸುಭಿಕ್ಷೆ, ಹಿಂಸೆಯ ಅಭಾವ, ಆಕಾಶಗಮನ, ಭೋಜನರಾಹಿತ್ಯ, ಉಪಸರ್ಗರಾಹಿತ್ಯ, ಚತುರ್ದಿಕ್ಕುಗಳಲ್ಲಿ ಅಭಿಮುಖತೆ, ನೆರಳಿಲ್ಲದ ದೇಹ, ರೆಪ್ಪೆ ಮಿಟುಕಿಸದ ಕಣ್ಣು, ಸರ್ವವಿದ್ಯಾ ಪ್ರಭುತ್ವ, ನಖರೋಮಗಳ ಸಮಾನತೆ ಹಾಗೂ ಸರ್ವಭಾಷಾಮಯವಾದ ದಿವ್ಯಧ್ವನಿ ಎಂಬ ಕೇವಲಜ್ಞಾನದಿಂದ ಬರುವ ಹನ್ನೊಂದು ವಿಶೇಷಗಳು; ಸುತ್ತಲೂ ಹೂಹಣ್ಣು ಸಮೃದ್ಧಿ, ಸುಖದಾಯಕವಾದ ಗಾಳಿ, ಪ್ರಾಣಿಗಳ ಮೈತ್ರಿ, ಸ್ವಚ್ಛವಾದ ಕನ್ನಡಿಯಂತಹ ಭೂಮಿ, ಸುಗಂಧಜಲವೃಷ್ಟಿ, ಸಮೃದ್ಧ ಸಸ್ಯಗಳ ಸೃಷ್ಟಿ, ಸಕಲಜೀವರ ನಿತ್ಯ ಆನಂದ, ತಂಗಾಳಿ, ಜಲಸಮೃದ್ಧಿ, ನಿರ್ಮಲ ಆಕಾಶ, ಸಮಸ್ತಜೀವರ ರೋಗಮುಕ್ತಿ, ಸಮಸ್ತಜೀವ ರೋಗರಾಹಿತ್ಯ ಮತ್ತು ಯಕ್ಷೇಂದ್ರನ ಧರ್ಮಚಕ್ರಗಳು ಎಲ್ಲರಿಗೂ ಕಾಣುವುದು ಎಂಬ ಹದಿಮೂರು ದೇವಕೃತ ವಿಶೇಷಗಳು (ಪರಮಜಿನಪತಿ ಪರಿಭಾಷಿತಮಪ್ಪ ಸಕಳಶ್ರಾವಕವ್ರತಂಗಳಂ ಷೋಡಶ ತೀರ್ಥಕರಭಾವನೆಗಳಂ ಚತುಸ್ತ್ರಿಂಶದತಿಶಯಂಗಳುಮಂ ಅಷ್ಟಮಹಾಪ್ರಾತಿಹಾರ್ಯಂಗಳುಮಂ: **ಆದಿಪು,** ೩. ೪೦ ವ)

**ಚತುಸ್ಸಂಜ್ವಲನ** – (ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ಕಷಾಯಗಳಿರುವ ಸ್ಥಿತಿ (ಮತ್ತಂ ಕಿಟಿಕಿಟಿದು ಬೇಗದಿಂ ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱು ಪ್ರಕೃತಿಗಳುಮಂ ಅಂತರಕರಣಂ ಮಾಡಿ: **ಆದಿಪು,** ೧೦. ೧೪ ವ)

**ಚರಣಗ್ರಂಥ**– ಚರಣಾನುಯೋಗವನ್ನು ವಿವರಿಸುವ ಗ್ರಂಥ (ಆಚಾರಂ ಆರಾಧನೆ ಮೊದಲಾಗೊಡೆಯ ಚರಣಗ್ರಂಥಂಗಳುಮಂ: **ವಡ್ಡಾರಾ,** ಮ. ೬. ಸಾ. ೭)

ಚರಣಾನುಯೋಗ – ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ (ಚರಣಾನುಯೋಗಮೆಂಬುದು ಕಷಾಯೇಂದ್ರಿಯೋಪಸರ್ಗ ಪರೀಷಹ ವಿಜಯಿಗಳಪ್ಪ ಚಾರಿತ್ರ ಮುನಿಗಳ ಸದಾಚಾರ ಪ್ರಕಾಶನಂಗೆಯ್ವುದು, **ಚಾವುಂಡಜಯ,** ಪು. ೩೨೫)

**ಚರಮಕಲ್ಯಾಣ** – ಪಂಚಕಲ್ಯಾಣಗಳಲ್ಲಿ ಕೊನೆಯದು, ಪರಿನಿರ್ವಾಣ (ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ: **ಶಾಂತಿಪು,** ೧೨. ೩೭ ವ)

**ಚರಮತನು** – ಮೋಕ್ಷಕ್ಕೆ ಹೋಗುವವನು (ಅಮೂರ್ತರ್ ಚರಮತನುಸಮಾಕಾರರ್ ಉದ್ಧೂತಲೇಪರ್ ಪ್ರಣುತರ್ ... ಸ್ವಕೀಯಪ್ರಭುತೆಯನೆಮಗಂ ಮಾಳ್ಕೆ ಅತಿಪ್ರೀತಿಯಿಂದಂ: **ಆದಿಪು,** ೧. ೨)

**ಚರಮದೇಹ** – ಚರಮತನು (ನೀಂ ಚರಮದೇಹನ್ನೈ ಪಂಚೇಷುವನಿಕ್ಕಿ ಗೆಲ್ದು ಪಂಚೇಂದ್ರಿಯಮಂ ಪಂಚಮಹಾಕಲ್ಯಾಣಮನಿಂ ಚೆಚ್ಚರಮೆಯ್ದಿ ಪಡೆಯ ಪಂಚಮಗತಿಯಂ: ಅಜಿತಪು, ೬. ೭೨)

**ಚರಮದೇಹಧರ** – ಕೊನೆಯ ಸಲ ದೇಹಧರಿಸಿದವನು, ಮೋಕ್ಷಗಾಮಿ (ನೀಂ ಚರಮದೇಹಧರನ್ನೈ: **ಅಜಿತಪು,** ೩. ೭೨)

**ಚರಮದೇಹಧಾರಿ** – ಚರಮದೇಹಧರ (ಇವರಿರ್ವರ್ ಅರಸುಗಳಪ್ಪೊಡೆ ಚರಮದೇಹಧಾರಿಗಳ್: **ಆದಿಪು,** ೧೪. ೧೦೦ ವ)

**ಚರಮಧ್ಯಾನ** – ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು, ಶುಕ್ಲಧ್ಯಾನ; ಮೊದಲ ಮೂರು: ಆರ್ತ, ರೌದ್ರ, ಧರ್ಮ (ಪರಮಜಿನಪತಿಯ ಚರಮಧ್ಯಾನದಂತೆಯುಂ ... ಮುನ್ನೀರೆ ಮೆರೆದಪ್ಪಿದಂತೆಯುಂ: **ಮಲ್ಲಿನಾಪು,** ೧೨. ೧೦೫ ವ)

**ಚರಮಾಂಗ** – ಕೊನೆಯ ಜನ್ಮದವನು (ಪುರುಪರಮೇಶ್ವರಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್ ದೊರೆ ಪೆಱರಾರ್ ಭರತನೊಳ್: **ಆದಿಪು,** ೧೨. ೧೦೯)

**ಚರಮಶರೀರ** – ಚರಮತನು (ಚರಮಶರೀರಮಂ ನಡುವ ಕಯ್ದುಗಳಿಲ್ಲ: **ಮಲ್ಲಿನಾಪು,** ೧೪. ೨೮)

**ಚರಿಗೆ** – ಮುನಿಗಳ ಭಿಕ್ಷೆ (ಮಿಂದುಂಡೀಗಳೆ ಬಿಜಯಂಗೆಯ್ಯೆಂದಿರೆ ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ: **ಆದಿಪು,** ೯. ೧೨೯)

**ಚರಿಗೆಗೊಡು** – ಮುನಿಗಳು ಭಿಕ್ಷೆಗೆ ಹೊರಡು (ಅರಮನೆವಾಗಿಲೊಳ್ ಚರಿಗೆ ಗೊಟ್ಟವರಂ ನಿಲಿಸಲ್ಕೆ ಪೋಪ ಭೂವರನೊಡವೋಗಿ: **ಪುಷ್ಪದಂಪು,** ೩. ೯೮)

**ಚರಿಗೆದೋಱು** – ಭಿಕ್ಷೆಯನ್ನು ಸ್ವೀಕರಿಸು (ಕಿತ್ತಯ್ಯಂಗಳನೆಮ್ಮಲ್ಲಿಗೊಡಗೊಂಡು ಬದು ಚರಿಗೆದೋಱಿ ನೀಮುಂ ಬಿಜಯಂ ಗೆಯ್ಯುಮಿನೆ: **ವಡ್ಡಾರಾ,** ಪು. ೮೧, ಸಾ. ೧೫)

**ಚರಿಗೆವರ್** – ಮುನಿಗಳು ಭಿಕ್ಷೆಗೆ ಬರುವುದು (ಅನುರಾಗದಿಂ ಆ ಪ್ರೀತಿವರ್ಧನಂ ಮುನಿವರರೆಂತೀ ಗಿರಿಗೆ ಚರಿಗೆವರ್ಪರನಾಗತಮತಿ ಬಗೆಂಬು ನೀನುಪಾಯಾಂತರಮಂ: **ಆದಿಪು,** ೫. ೭)

**ಚರಿಗೆವುಗು** – ಚರಿಗೆಗೆ ಹೋಗು (ಊರಿಲ್ಲ ಕೇರಿಯಿಲ್ಲ ಎಲ್ಲಿ ಚರಿಗೆವುಗುವಂ ಅಂತು ಕೆಮ್ಮನೇಕೆ ಎಮ್ಮಂ ತಾಂಗಿದಪಿರಿ ಎಂದೊಡೆ: **ವಡ್ಡಾರಾ,** ಪು ೯೦, ಸಾ ೨೯)

**ಚರಿಗೆವೊಗಿಸು** – ಚರಿಗೆಗೆಂದು ಮನೆಮನೆಗೆ ಕಳುಹಿಸು (ಮತ್ತೊಂದು ದಿವಸಂ ಋಷಿಸಮುದಾಯವೆಲ್ಲಮಂ ಚರಿಗೆವೊಗಿಸುತ್ತಮೆಲ್ಲರುಮಂ ನಿಜೆಸಿ: **ವಡ್ಡಾರಾ,** ಪು. ೮೫, ಸಾ. ೧೧)

**ಚರಿಗೆವೊಗು** – ಮುನಿಗಳು ಭಿಕ್ಷೆಗಾಗಿ ಮನೆಯನ್ನು ಹೊಗು (ನಿಯಮದಿಂ ನಿರ್ಮಳಚರಿತಂ ಚರಿಗೆವೊಕ್ಕಂ ಅರಸನ ಬೀಡಂ: **ಆದಿಪು,** ೫. ೧೦)

**ಚರಿಗೆವೋಗು** – ಭಿಕ್ಷೆಗಾಗಿ ಹೋಗು (ಜ್ಞಾನದಿನಜೆದೆಂದು ನೀಮೀ ನಗರಕ್ಕೆ ಚರಿಗೆವೋಗುತ್ತುಂ: **ಸುಕುಮಾಚ,** ೫. ೨)

**ಚರಿತಪುರಾಣ** – ಮಹಾಪುರುಷರ ಚರಿತೆಯುನ್ನೊಳಗೊಂಡ ಪುರಾಣ (ಚರಿತಪುರಾಣಮನಜೆಯದೆ ತುರಿಪದಿನಧ್ಯಾತ್ಮಿಯಾಗಿ ನೆಗ಼ಟ್ವಿನ ತಪಮುಂ ಮರುಳಿನ ಸಿರಿಯುಂ ಪಂದೆಯ ಬಿರುದುಂ ಸುಖಮಾಗಮಾಜವೆಂದುಂ ಕಡೆಯೊಳ್: **ಧರ್ಮಾಮೃತ,** ೬. ೬೨)

**ಚರುಕ** – ಅಷ್ಟವಿಧ ಅರ್ಚನೆಗಳ ಪದಾರ್ಥಗಳಲ್ಲಿ ಒಂದು, ನೈವೇದ್ಯ (ಕುಸುಮದಾಮಂಗಳಿಂದಂ ಅನೇಕ ಭಕ್ಷೋಪದಂಶರಸಪ್ರಚುರ ಚಾರುಚರುಕಂಗಳಿಂದಂ; **ಆದಿಪು,** ೨. ೩೨ ವ)

**ಚರ್ಯೆ** – ಚರಿಗೆ (ಬನದಿಂ ಚರ್ಯೆಗೆ ಪೊಜಮಟ್ಟಂ ಮುನಿ ತನ್ನಗವನಮಂ ದ್ರುತವಿಳಂಬಿತಂ ಪೊರ್ದದೆನಲ್: **ಮಲ್ಲಿನಾಪು,** ೧೩. ೧೪೭)

**ಚರ್ಮರತ್ನ** – ಚಕ್ರವರ್ತಿಗೆ ತಾನಾಗಿ ದೊರೆಯುವ ಅಜೀವರತ್ನಗಳಲ್ಲಿ ಒಂದು: ನೀರಿನ ಮೇಲೆ ತೇಲಲು ಬಳಸುವ ಚರ್ಮದ ಸಾಧನ (ವರಚರ್ಮರತ್ನಮುಂ ಛತ್ರರತ್ನಮುಂ ತಮ್ಮ ತಮ್ಮ ಬೆಸಗಳನ್ ಉಜೆದಿರ್ಪಿರವಿಂದೆ: **ಶಾಂತಿಪು,** ೧೧. ೫೬)

**ಚರ್ಯಾಕಾಲ** – ಮುನಿಗಳು ಚರಿಗೆಗಾಗಿ ಹೋಗುವ ವೇಳೆ (ಮುನಿಚರ್ಯಾಕಾಲಂ ಈ ಧಾರ್ಮಿಜನಗೃಹಮಂ ಪುಣ್ಯಮೆಯ್ದುರ್ಪ ಕಾಲಂ: **ನೇಮಿನಾಪು,** ೧. ೭೮)

**ಚರ್ಯಾತಿಚಾರ** – ಚರ್ಯೆ ಎಂದರೆ ಭಿಕ್ಷೆ, ಅತಿಚಾರವೆಂದರೆ ದೋಷ; ೪೬ ಬಗೆಯ ದೋಷಗಳಿಲ್ಲದೆ ಮುನಿಗಳು ಆಹಾರ ಸ್ವೀಕರಿಸಬೇಕು; ಈ ಅತಿಚಾರಗಳೆಂದರೆ ೧೬ ಉದ್ಗಮದೋಷಗಳು, ೧೬ ಉತ್ಪಾದನಾದೋಷಗಳು, ೧೦ ಏಷಣಾದೋಷಗಳು ಹಾಗೂ ೪ ಸಂಯೋಜನದೋಷಗಳು

(ಚರ್ಯಾತಿಚಾರಮಾರ್ಗದೊಳೀರ್ಯಾ ಪಥಶುದ್ಧಿ ನೆಗೞೆ ನಿಂದಂ ಜಗದಾಚಾರ್ಯಂ... ತದ್ವನದ ಧವಳದಶುದ್ಧೋಪಲದೊಳ್; **ಅನಂತಪು,** ೯. ೯೩)

**ಚರ್ಯಾಪರ್ಯಟನ** – ಚರ್ಯೆಗಾಗಿ ಮಾಡುವ ತಿರುಗಾಟ (ಆ ಮುನೀಶ್ವರಂಗೆ ನಿಖಿಳಜಗಜ್ಜನಾಶ್ಚರ್ಯ ಚರ್ಯಾಪರ್ಯಟನದೊಳ್ ಮತ್ತಮಱುದಿಂಗಳ್ ಪೋಗೆ: **ಆದಿಪು,** ೯. ೧೨೯ ವ)

**ಚರ್ಯಾಮಾರ್ಗ** – ಚರಿಗೆಗಾಗಿ ಹೋಗುವ ಉದ್ದೇಶ (ಚರ್ಯಾಮಾರ್ಗದೊಂದಂದಮಂ ಧರೆಯೊಳ್ ಮಾರ್ಗವಿಬೋಧನಾರ್ಥಂ ಅಱಿಯಲ್ಕೆಂದೆತ್ತಿಕೆಯ್ಯಂ: **ಆದಿಪು,** ೯. ೧೨೪)

**ಚರ್ಯೆ** – ಅಹಿಂಸೆಯ ಪ್ರತಿಜ್ಞೆ, ಆಚರಣೆ (ಜೈನಂಗೆ ಸರ್ವಹಿಂಸಾವರ್ಜನಂ ಮೈತ್ರಿಪ್ರಮೋದಕಾರುಣ್ಯ ಮಾಧ್ಯಸ್ಥೋಪಬೃಂಹಿತಂ ಚರ್ಯೆಯೆಂಬುದು. ದೇವತಾರ್ಥಮುಂ ಮಂತ್ರಸಿದ್ಧ್ಯರ್ಥಮುಂ ಔಷಧಾರ್ಥಮುಂ ಆಹಾರಾರ್ಥಮುಂ ಭೋಗಾರ್ಥಮುಮಾಗೆ ಜೈನನಪ್ಪಾತಂ ಹಿಂಸೆಗೈವನಲ್ಲಂ: **ಚಾವುಂಡಜಯ,** ಪು. ೧೯೩)

**ಚಾಂದ್ರಾಯಣ** – ಚಂದ್ರನ ವೃದ್ಧಿಕ್ಷಯಗಳಿಗನುಸಾರವಾಗಿ ಆಹಾರಸೇವನೆಯಲ್ಲಿ ದಿನಕ್ಕೊಂದೇ ತುತ್ತಿನಂತೆ ಆರಂಭಿಸಿ ಹೆಚ್ಚಿಸುತ್ತ ಆಮೇಲೆ ಕಡಿಮೆಮಾಡುತ್ತ ಬರುವ ವ್ರತ (ದೀಕ್ಷೆಯಂ ಕೈಕೊಂಡು ಚಾಂದ್ರಾಯಣಮಂ ನೋಂತು ಮುಡುಪಿ ಬಂದೀ ಪ್ರಭಂಜನವಿಯಚ್ಚರಂಗೆ ಮಗಳ್ ಶಾಂತಿಮತಿಯಾದಳ್: **ಶಾಂತಿಪು,** ೯. ೧೪ ವ)

**ಚಾತುರ್ಮಾಸ** – ಮುನಿಗಳು ಪಾಲಿಸಬೇಕಾದ ನಿಯಮಗಳಲ್ಲೊಂದು: ಮಳೆಗಾಲದಲ್ಲಿ ನಾಲ್ಕು ತಿಂಗಳ ಕಾಲ ಒಂದೆಡೆ ನೆಲಸುವುದು, ಅಂದರೆ ಸಂಚಾರತ್ಯಾಗ ಮಾಡುವುದು (ಮೞೆಗಾಲದೊಳಿರ್ವರುಮೊಂದೆ ಗುಹೆಯೊಳ್ ಜೋಗುಗೊಂಡು ನಾಲ್ಕು ತಿಂಗಳಿರ್ವರುಪವಾಸಂಗೆಯ್ದು ಜೋಗು ನೆಱೆದೊಡೆ ಚಾತುರ್ಮಾಸದ ಪಾರಣೆಯೆಂದು: **ವಡ್ಡಾರಾ,** ಪು. ೪೮, ಸಾ. ೮)

**ಚಾತುರ್ಮಾಸ್ಯ** – ಚಾತುರ್ಮಾಸದ ಆಚರಣೆ (ನೀವೆನಗೆ ಕಾರುಣ್ಯಂಗೆಯ್ವಿರಪ್ಪೊಡೆ ಚಾತುರ್ಮಾಸ್ಯಮನೆನ್ನ ಪೊಟಲೊಳ್ ಮಾಡಿ ಪರಸುತ್ತುಮಿರ್ಪುದೆಂದು: **ಧರ್ಮಾಮೃತ,** ೧೨. ೫೭ ವ)

**ಚಾರಣ** – ಗಗನಗಾಮಿಯಾದ ಮುನಿ (ಒಂದು ದಿವಸಂ ಮಣಿಮಾಳಿ ರತಿಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡಜಗರವೃತ್ತಾಂತಮಂ ಬೆಸಗೊಂಡು: **ಆದಿಪು,** ೨. ೧೫ ವ)

**ಚಾರಣಋದ್ಧಿ** – ಚಾರಣಋಷಿಗಳ ಗಗನಸಂಚಾರಶಕ್ತಿ (ಜಿತಶ್ರಮರಂ ಅಪಾಸ್ತದೋಷತಮರಂ ನಿತ್ಯಚಾರಣಋದ್ಧಿವೃದ್ಧರಂ: **ಕರ್ಣನೇಮಿ,** ೧. ೭೫)

**ಚಾರಣಋದ್ಧಿವಡೆ** – ಗಗನಸಂಚಾರಶಕ್ತಿಯನ್ನು ಹೊಂದು (ಪೊಲ್ಲದಂ ಬಗೆದೆವೆಂದದುವೆ ನಿರ್ವೇಗನಿಮಿತ್ತಮಾಗೆ ತೊಱೆದು ತಪಂಬಟ್ಟು ಚಾರಣಋದ್ಧಿವಡೆದು ಪೋಗಲ್: **ಪಂಪರಾ,** ೮. ೫೬ ವ)

**ಚಾರಣಋಷಿ** – ಚಾರಣಋದ್ಧಿಯನ್ನು ಎಂದರೆ ಆಕಾಶದಲ್ಲಿ ಸಂಚರಿಸುವ ಶಕ್ತಿಯನ್ನು ಪಡೆದ ಪಡೆದ ಋಷಿ (ಧರ್ಮಾಭರಣರೆಂಬ ಚಾರಣಋಷಿಯರ ಸಮಕ್ಷಮದೊಳ್ ದೀಕ್ಷೆಯಂ ಕೊಂಡಂ: **ಪಂಪರಾ,** ೧೬. ೪೨ ವ)

**ಚಾರಣಗಣ** – ಗಗನಗಾಮಿ ಸಂಚಾರಿಯಾಗಿ ಧರ್ಮೋಪದೇಶ ಮಾಡುವ ಅವಧಿಜ್ಞಾನವುಳ್ಳ ಮುನಿಗಳ ಸಮೂಹ (ದಾನಪ್ರಮೋದ ವಾಚಾಳಷಟ್ಚರಣ ಚಾರಣ ಗಣೋಚ್ಚಾರ ಝುಂಕಾರಜಯಾಶೀರ್ಘೋಷಮುಮಪ್ಪ ವಿಜಯಗಜದ ಬೆಂಗೆ ವಂದು: **ಆದಿಪು,** ೧೪. ೯೦ ವ)

**ಚಾರಣಗುಣ** – ಚಾರಣಋದ್ಧಿ (ಚಾರಣಗುಣದಿಂದಂ ಸಂಸಾರಾರ್ಥಮಪಾರ ಚೈತ್ಯವಂದನೆಗೆಂದು ಅಂದು ಓರಂತೆ ಪೋಗಿ: **ಶಾಂತಿಪು,** ೯. ೧೧೩)

**ಚಾರಣತ್ವ** – ಅಷ್ಟವಿಧಸಿದ್ಧಿಗಳಲ್ಲಿ ಒಂದಾದ ಕ್ರಿಯಾಋದ್ಧಿಗಳಲ್ಲಿ ಎರಡು ವಿಧ: ಚಾರಣತ್ವ ಮತ್ತು ಆಕಾಶಗಾಮಿತ್ವ.; ಜಲಚಾರಣತ್ವ ಜಂಘಾಚಾರಣತ್ವ ತಂತುಚಾರಣತ್ವ ಪುಷ್ಪಚಾರಣತ್ವ ಫಲಚಾರಣತ್ವ ಎಂಬಿವೇ ಮೊದಲಾದವು ಚಾರಣ ಋದ್ಧಿಯಾದರೆ, ನಡಿಗೆಯಿಲ್ಲದೆಯೇ ಆಕಾಶದಲ್ಲಿ ತೇಲಿಹೋಗುವುದು ಆಕಾಶಗಾಮಿತ್ವ (ಪರ್ಯಂಕಾಸನಾದಿ ಯೋಗಾಸ್ತಿಕ ಸ್ವರೂಪ ಚಾರಣತ್ವಮುಂ ... ಆಕಾಶಗಾಮಿತ್ವಮೆಂದಿರ್ತೆಱನಪ್ಪ ಕ್ರಿಯಾಋದ್ಧಿಯೊಳಂ, **ಚಂದ್ರಪ್ರಪು,** ೧೪. ೩೦ ವ)

**ಚಾರಣಪರಮೇಷ್ಠಿ** – ತಪಸ್ಸಿನ ಪ್ರಭಾವದಿಂದ ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವುಳ್ಳ ಮುನಿ (ತಪೋಭೂಷಣರಿಂದ ಮರುಮೆಂಬ ಚಾರಣಪರಮೇಷ್ಠಿಗಳ್ ... ವಿಯತ್ತಳಮಂ ಬೆಳಗುತ್ತುಂ: **ಧರ್ಮಬಾಹು,** ೪, ೫೩ ವ)

**ಚಾರಣಮುನಿ** – ಚಾರಣಪರಮೇಷ್ಠಿ (ಬಂದನೀ ಭೂವಳಯಕ್ಕೆ ಚಾರಣ ಮುನೀಶ್ವರನಂಬರಮಾರ್ಗದತ್ತಣಿಂ: **ಧರ್ಮಬಾಹು,** ೩. ೧೨)

**ಚಾರಣಯುಗಳ** – ಗಗನಗಾಮಿ ಮುನಿಗಳ ಜೋಡಿ (ಚಾರಣಯುಗಳ ಚರಣಯುಗಳಕ್ಕೆ ಕರಕಮಳಯುಗಳಮಂ ಮುಗಿದು ಬೀೞ್ಕೊಂಡು ತ್ವರಿತಗತಿಯಿಂ ಬರುತ್ತುಂ: **ಆದಿಪು,** ೨. ೪೪ ವ)

**ಚಾರಣಯೋಗಿ** – ಚಾರಣಋಷಿ (ಅನಂತಸಂಜ್ಞನಂ ಚಾರಣಯೋಗಿಯಂ ನೃಪತಿ ಕಂಡಂ: **ಚಂದ್ರಪ್ರಪು,** ೩. ೬೯)

**ಚಾರಣರಿಸಿ** – ಚಾರಣಋಷಿ (ಚಂದ್ರವೇಗಂ ಸಿದ್ಧಕೂಟಕ್ಕೆ ಪೋಗಿ ದೇವರನರ್ಚಿಸಿ ಸುಮಾಳಿಗಳೆಂಬ ಅವಧಿಜ್ಞಾನಿಗಳಪ್ಪ ಚಾರಣರಿಸಿಯರಂ ಗುರುಭಕ್ತಿಗೆಯ್ದು: **ವಡ್ಡಾರಾ,** ಪು ೬೨, ಸಾ ೬)

**ಚಾರಿತ್ರಮೋಹ** – ಚಾರಿತ್ರಮೋಹನೀಯ ಕರ್ಮ (ಸಾತಾಸಾತ ಸಂವಿಭಾಗದಿನಿರ್ತೆಱನಪ್ಪ ವೇದನೀಯಮುಂ ದರ್ಶನಮೋಹದೊಳಂ ಚಾರಿತ್ರ ಮೋಹದೊಳಂ: **ಸುಕುಮಾಚ,** ೩. ೩೯ ವ)

**ಚಾರಿತ್ರಮೋಹನೀಯ** – ಮೋಹನೀಯ ಕರ್ಮಗಳಲ್ಲಿ ಒಂದು, ಆಚಾರವನ್ನು ದೂಷಿಸುವ ಕರ್ಮದ ಒಂದು ವಿಧ (ದರ್ಶನ ಮೋಹನೀಯಮುಂ ಚಾರಿತ್ರಮೋಹನೀಯಮುಂ ಎಂದಿರ್ತೆಱನಕ್ಕುಂ: **ಶಾಂತಿಪು,** ೧೨. ೧೧ ವ)

**ಚಾರಿತ್ರಾರಾಧನೆ** – ದರ್ಶನ, ಜ್ಞಾನ, ಚಾರಿತ್ರ ಮತ್ತು ತಪಾರಾಧನೆ ಎಂಬ ನಾಲ್ಕು ಬಗೆಯ ಆರಾಧನೆಗಳಲ್ಲಿ ಒಂದು, ಅನಿಷ್ಟ ಪರಿಣಾಮದ ಕ್ರಿಯೆಗಳನ್ನು ಬಿಟ್ಟು ಶುಭಪರಿಣಾಮವಾಗುವಂಥವನ್ನು ಮಾಡುವುದು (ಪ್ರಮಾದ ಪರಿಣಾಮ ಮನಾಗಲೀಯದೆ ಪಾಪಕ್ರಿಯೆಯಂ ನಿವೃತ್ತಿಮಾಡಿ ಶುಭಪರಿಣಾಮಮಂ ತನ್ನೊಳೆ ನಿಱಿಸುವುದು ಚಾರಿತ್ರಾರಾಧನೆ: **ಜೀವಸಂ,** ೧. ೮ ವ)

**ಚಾರ್ವಾಕಮತಾನುಸಾರಿ** – ಪಂಚಭೂತಗಳ ಸಂಯೋಗದಿಂದ ಆತ್ಮವು ಹುಟ್ಟುತ್ತದೆಂಬ ವಾದ ಮಾಡುವವನು (ಪೃಥಿವ್ಯಪ್ತೇಜೋವಾಯ್ವಾಕಾಶಂಗಳೆಂಬ ಪಂಚಭೂತಂಗಳ ಕೂಟದಿಂ ಚೈತನ್ಯರೂಪಾತ್ಮಕಂ ಪುಟ್ಟಿ ಚೇಷ್ಟಿಸುತಿರ್ಪುವು: **ಧರ್ಮಬಾಹು,** ೫. ೬೪ ವ)

**ಚಿಂತಾಜನನಿ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ಕಾಕಿಣೀರತ್ನದ ಹೆಸರು (ಮಹಾಗುಹಾಗಹ್ವರಾಂತರ ಸೂಚೀನಿರ್ಭೇದ್ಯ ತಮಸ್ತಮೋ ನಿರಸನ ಪ್ರಭಾಭೂತ ಗುಣೋಪೇತಮಪ್ಪ ಚಿಂತಾಜನನಿ ಎಂಬ ಕಾಕಿಣೀರತ್ನಮುಂ: **ಆದಿಪು,** ೧೧. ೩ ವ)

**ಚಿತ್ತಜ** – ಬಾಹುಬಲಿಯ ಅನೇಕ ಹೆಸರುಗಳಲ್ಲಿ ಒಂದು (ಚಿತ್ತಜಂ ಚಿತ್ತಭವಂ ... ನೆಗಟ್ಟುವು ಬಾಹುಬಲಿಗೆ ಪಲವುಂ ಪೆಸರ್ಗಳ್: **ಆದಿಪು,** ೮. ೫೩)

**ಚಿತ್ತಜನ್ಮ** – ಚಿತ್ತಜ (ಕೋಡಿಡೆ ವಾಸುಪೂಜ್ಯಮುನಿಯೊಳ್ ಮರುಳಾದಪೆ ಚಿತ್ತಜನ್ಮ ನೀಂ ನೋಡ ನಿಜಾಪ್ತವರ್ಗದಳವಂ: **ಪಂಪರಾ,** ೧. ೨೩)

**ಚಿತ್ರಾಂಗದವಿಮಾನ** – ಸ್ವರ್ಗಲೋಕದ ಒಂದು ಸ್ಥಳದ ಹೆಸರು (ಶಾರ್ದೂಲಾರ್ಯನುಂ ಚಿತ್ರಾಂಗದ ವಿಮಾನದೊಳ್ ಚಿತ್ರಾಂಗದಾಮರನಾದಂ;: **ಆದಿಪು,** ೫.೭೦ ವ)

**ಚಿತ್ರೆ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಟಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಚೈತ್ಯ** – ಬಸದಿ (ಜೈನಪದಾಬ್ಜವರಪ್ರಸಾದದಾದುದು ನಿನಗಪ್ಪ ಕಾರಣದಿನೀಗಳೆ ಪೂಜಿಸು ಚೈತ್ಯರಾಜಿಯಂ: **ಆದಿಪು,** ೨. ೬೯)

**ಚೈತ್ಯಗೃಹ** – ಚೈತ್ಯ (ಭಕ್ತಿಭರಾವನತನಪವರ್ಗಲಕ್ಷ್ಮಿಯ ಮನಮಂ ಪುಗುವಂತೆ ಚೈತ್ಯಗೃಹಮಂ ಪೊಕ್ಕಂ: **ಮಲ್ಲಿನಾಪು,** ೧೦. ೭೯)

**ಚೈತ್ಯಗೇಹ** – ಜಿನಾಲಯ (ಅನಿತಂ ಪೊಂಪುೞಿವೋಪುದಾ ಚಂಚ ಚ್ಚೈತ್ಯಗೇಹೋತ್ಕರಂ: **ಚಂದ್ರಪ್ರಪು,** ೧೧. ೭೩)

**ಚೈತ್ಯವೃಕ್ಷ** – ಜಿನಪ್ರತಿಮೆಗಳಿಗೆ ಆಶ್ರಯವಾದ ವೃಕ್ಷ; ಸಮವಸರಣದಲ್ಲಿ ಅಶೋಕ, ಸಪ್ತಚ್ಛದ, ಚಂಪಕ, ಹಾಗೂ ಆಮ್ರವೆಂಬ ನಾಲ್ಕು ಪ್ರಕಾರದ ಚೈತ್ಯವೃಕ್ಷಗಳಿರುತ್ತವೆ (ಲಂಬಣದ ಮುತ್ತು ತಾರಗೆಯಂ ಬೆಳ್ಗೊಡೆ ಚಂದ್ರಬಿಂಬಮಂ ಚಮರಜ ಮಾಬಿಂಬದ ರುಚಿಯಂ ಗೆಲೆ ಜಿನಬಿಂಬಂ ಸೊಗಯಿಪುದು ಚೈತ್ಯವೃಕ್ಷದ ಮೊದಲೊಳ್: **ಪಾರ್ಶ್ವನಾಪು,** ೧೬. ೪೭)

**ಚೈತ್ಯಾಲಯ** – ಜಿನಾಲಯ (ಅಂತು ಹರ್ಮ್ಯಚೈತ್ಯಾಲಯಾವನಿಯೆಂಬುದು ಅದಱ ವಿಸ್ತಾರಂ ಅರ್ಧಯೋಜನಂ: **ಆದಿಪು,** ೧೦. ೨೫ ವ)

**ಚೈತ್ಯಾವಸಥ** – ಚೈತ್ಯಗೃಹ (ರಸವತ್ಸಂಗೀತನಾನಾಪಟುಪಟಹನಿನಾದಂಗಳಿಂ ತೀವೆ ಚೈತ್ಯಾವಸಥಂಗಳ್ದೊಡೆ: **ಸುಕುಮಾಚ,** ೧೧. ೫೩)

**ಚೈತ್ಯಾವಾಸ** – ಚೈತ್ಯಗೃಹ (ವಿಶ್ರುತಾಕೃತ್ರಿಮಚೈತ್ಯಾವಾಸಪೂಜೋತ್ಸವದಿನಗಲ ನಲ್ಲಿಂದಮೆಂದುಂ: **ಸುಕುಮಾಚ,** ೯. ೪೧)

**ಚೈತ್ರರಥ** – ಕುಬೇರನ ಉದ್ಯಾನ (ಅದು ಮೆಚ್ಚದು ಚೈತ್ರರಥದ ಚಿತ್ರಾಸ್ಪದಮನೆನಲ್ ವೀತಶೋಕ ಪುರವರಮೆಸೆಗುಂ: **ಮಲ್ಲಿನಾಪು,** ೨. ೨೪)

## ಛ

**ಛತ್ರರತ್ನ** – ಚಕ್ರವರ್ತಿಗೆ ತಾನಾಗಿ ದೊರಕುವ ಏಳು ಅಜೀವರತ್ನಗಳಲ್ಲಿ ಒಂದು (ವರಚರ್ಮರತ್ನಮುಂ ಛತ್ರರತ್ನಮುಂ ತಮ್ಮ ತಮ್ಮ ಬೆಸಗಳನ್ ಉಜಿದಿರ್ಪಿರವಿಂದೆ: **ಶಾಂತಿಪು,** ೧೧. ೫೬)

**ಛದ್ಮಸ್ಥ** – ಕೇವಲಜ್ಞಾನಿಯಾಗಲು ಹಿಂದಿನ ಅವಸ್ಥೆಯಲ್ಲಿರುವವನು (ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗ ಛದ್ಮಸ್ಥ ಗುಣಸ್ಥಾನ ವ್ಯವಸ್ಥಿತನಾಗಿ: **ಸುಕುಮಾಚ,** ೮. ೬೨ ವ)

**ಛದ್ಮಸ್ಥಕಾಲ** – ಛದ್ಮಸ್ಥ ಅವಸ್ಥೆಯಲ್ಲಿರುವ ಕಾಲ (ತತ್ ನೇಮೀಶ್ವರನುಂ ಛದ್ಮಸ್ಥಕಾಲಂ ಅಯ್ವತ್ತಾಱುದಿನಂ ಪೋಗೆ: **ಕರ್ಣನೇಮಿ,** ೧೩. ೮೩ ವ)

**ಛದ್ಮಸ್ಥಗುಣಸ್ಥಾನ** – ಜ್ಞಾನಾವರಣ ಮತ್ತು ದರ್ಶನಾವರಣಗಳು ಛದ್ಮ, ಅದರಲ್ಲಿರು ವವರು ಛದ್ಮಸ್ಥ; ೪ ರಿಂದ ೧೦ ಗುಣಸ್ಥಾನವರೆಗಿನವರು ಸರಾಗಛದ್ಮಸ್ಥರು. ೧೦ ರಿಂದ ೧೨ ರವರೆಗಿನವರು ವೀತರಾಗಛದ್ಮಸ್ಥರು (ವೀತರಾಗಛದ್ಮಸ್ಥ ಗುಣಸ್ಥಾನಂ ಏಕತ್ವವಿತರ್ಕವಿಚಾರಾಭಿಧಾನ ಪರಿಣತಂ ಅಪರಿಮಿತ ಪ್ರದೇಶನಿರ್ಜರಾದಿ ಕ್ರಿಯಾಕಳಾಪಂ: **ಆದಿಪು,** ೧೦. ೧೪ ವ)

**ಭಿನ್ನ** – ಅಷ್ಟಾಂಗಮಹಾನಿಮಿತ್ತಗಳಲ್ಲಿ ಒಂದು (ಭಿನ್ನಮೆಂಬುದುಂ ವಸ್ತ್ರ ಶಸ್ತ್ರ ಛತ್ರೋಪಾನ ವಾಸನಶಯನಾದಿಗಳೊಳ್ ದೇವಮಾನುಷ ರಾಕ್ಷಸಕೃತಿ ವಿಭಾಗದಿಂ ಶಸ್ತ್ರಕಂಟಕ ಮೂಷಕಾದಿಕೃತಚ್ಛೇದಮಂ ನೋಡಿ ಕಾಲತ್ರಯ ಲಾಭಾಲಾಭಸುಖದುಃಖಾದಿ ಸಮಸೂಚನಂ: **ಚಾವುಂಡಜಯ,** ಪು. ೧೫೪)

# ಜ

**ಜಂಘಚಾರಣ** – ಎಂಟು ಬಗೆಯ ಚಾರಣಶಕ್ತಿಯಿರುವವರಲ್ಲಿ ಒಬ್ಬ, ನೆಲಕ್ಕೆ ಕಾಲೂರದೆ ನಡೆಯಬಲ್ಲವನು (ಜಂಘಚಾರಣರ್ ನಿಲಲೊಲ್ಲದೆ ಪೋದ ಕಾರಣವನಱಿಯದೆ ... ಬೆಸಗೊಂಡೊಡೆ: **ಚಾವುಂಪು,** ಪು. ೨೧೧, ಸಾ. ೫)

**ಜಂಬೂದ್ವೀಪ** – ಜಂಬೂ, ಪ್ಲಕ್ಷ್ಯ, ಶಾಲ್ಮಲೀ, ಕುಶ, ಕ್ರೌಂಚ, ಶಾಕ, ಪುಷ್ಕರ ಎಂಬ ಸಪ್ತದ್ವೀಪಗಳಲ್ಲಿ ಒಂದು; ಜಂಬೂದ್ವೀಪದಲ್ಲಿ ಭರತವರ್ಷ, ಹೈಮವತವರ್ಷ, ಹರಿವರ್ಷ, ವಿದೇಹವರ್ಷ, ರಮ್ಯಕವರ್ಷ, ಹೈರಣ್ಯವತವರ್ಷ, ಐರಾವತವರ್ಷ ಎಂಬ ಏಳು ಭಾಗಗಳು (ಇರೆ ಜಂಬೂದ್ವೀಪಂ ಅಲ್ಲಿಂ ಪೊಱಗಿರೆ ಲವಣಾಂಬೋಧಿ: **ಪುಷ್ಪದಂಪು,** ೧. ೯೦)

**ಜಗತ್ಕುಸುಮ** – ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ಜಗತ್ತ್ರಯಗುರು** – ಮೂರುಲೋಕಗಳ ಗುರು, ಆದಿದೇವ (ಎಱಗಿ ಜಗತ್ತ್ರಯ ಗುರುಗೆರ್ದೆಯೆಱಕದೆ ಪೊಗಟ್ಟು ಅಖಿಳ ಭುವನಜನನಿಯನಾಗಳ್ ಮಱಿಯಿಸಿ ಮಾಯಾನಿದ್ರೆಯಿಂ: **ಆದಿಪು,** ೭. ೪೫)

**ಜಗತ್ತ್ರಯಪತಿ** – ಮೂರು ಲೋಕಗಳ ಒಡೆಯ (ಕಳೆದ ಭವದೊಳ್ ವಿರಾಮಂಗಳೊಳೊದವಿದ ಮೋಹದಿಂ ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪಳುಗಳಿದುದು ದಯೆ ತಮ್ಮನೊಳ್ ಜಗತ್ತ್ರಯಪತಿಯಾ: **ಶಾಂತಿಪು,** ೧೦. ೯೯)

**ಜಗದ್ಗುರು** – ಆದಿ ತೀರ್ಥಂಕರ (ತ್ರಿದಶಾಸನಂಗಳ್ ಅಲ್ಲಾಡಿದುವು ಜಗದ್ಗುರುಗೆ ಬೇಗಂ ಉಚ್ಚಾಸನದಿಂದಿರೇೞಿಂ ಎಂದು ಪೇೞ್ವವೊಲ್: **ಆದಿಪು,** ೭. ೪೧)

**ಜಡವಾದ** – ನಿರೀಶ್ವರವಾದ, ಜಗತ್ತು ಪಂಚಭೂತಗಳಿಂದ ಆಗಿದೆ ಎಂಬ ವಾದ (ಮಾಂಸನಯನಾವಿಷಯಮೆಲ್ಲಂ ಅಪ್ರತ್ಯಕ್ಷಮೆಂಬೀ ಜಡವಾದಮಂ ಕಂಡು: **ಶಾಂತಿಪು,** ೫. ೧೪೧ ವ)

**ಜನನೀಚರ** – ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ ವ್ಯಕ್ತಿ (ಇನಗಿನಿವಿರಿದು ಸುಖಿಂ ಮತ್ ಜನನೀಚರ ದಿವಿಜನಿಂದಮಾಯ್ತು: **ಆದಿಪು,** ೩. ೫೮)

**ಜನ್ಮಕಲ್ಯಾಣ** – ಜಿನನ ಪಂಚಕಲ್ಯಾಣಗಳಲ್ಲಿ ಒಂದು; ಜನಶಿಶು ಹುಟ್ಟಿದಾಗ ದೇವೇಂದ್ರನು ತನ್ನ ಪರಿಜನರೊಡನೆ ನಡೆಸುವ ಉತ್ಸವ (ತೀರ್ಥಕರ ಜನ್ಮಕಲ್ಯಾಣಾರ್ಥಂ ಬಂದಿಂತೆ ನೆಲಸಿದಮವಿಲ್ಲಿ: **ಚಂದ್ರಪ್ರಪು,** ೧೦. ೭೬)

**ಜನ್ಮತಾಕ್ರಿಯೆ** – ತೀರ್ಥಂಕರನು ಭೂಮಿಗೆ ಅವತರಿಸುವುದು (ಮುನ್ನಱುದಿಂಗಳುಂಟೆನೆ ಧನದಂ ವಸುಧಾರೆಯಂ ಕಱೆಯೆ ವಿಶ್ವೇಶ್ವರಿಯುಂ ಜಗಜ್ಜನನಿಯುಂ ಸುಮಂಗಳೆಯುಂ ಪೂಜ್ಯೆಯುಮೆನಿಸಿದ ಮಹಾದೇವಿಗೆ ಪುಟ್ಟುವುದು ಹಿರಣ್ಯಗರ್ಭೋತ್ಕೃಷ್ಟ ಜನ್ಮತಾಕ್ರಿಯೆ: **ಚಾವುಂಡಜಯ,** ಪು. ೧೮೫)

**ಜನ್ಮಸವನ** – ಜಿನನ ಪಂಚಕಲ್ಯಾಣಗಳಲ್ಲಿ ಒಂದು; ಜಿನಶಿಶು ಹುಟ್ಟಿದ ಕೂಡಲೆ ದೇವೇಂದ್ರನು ತನ್ನ ಪರಿಜನರೊಂದಿಗೆ ಆ ಮಗುವಿಗೆ ಮಾಡುವ ಅಭಿಷೇಕ (ದಿಟ್ಟಿಗೆ ಪೊನಲಾದುದು ಪೊಂಬೆಟ್ಟಂ ಜಿನ ಜನ್ಮಸವನ ಮಣಿಮಯಪಟ್ಟಂ: **ಪಂಪರಾ,** ೧. ೪೪)

**ಜನ್ಮಸ್ನಪನ** – ಜನ್ಮಸವನ (ಇದು ಜನ್ಮಸ್ನಪನಕ್ಕೆ ನೂರ್ಮಡಿ ಮಿಗಿಲ್ ಕಲ್ಯಾಣಂ ಎಂದಟ್ಟಿಱಿಂ ತ್ರಿದಶೇಂದ್ರಂ ತ್ರಿದಶಾಪುರುಷಪರಿವೃತಂ ಬಂದು: **ಆದಿಪು,** ೮. ೨೨)

**ಜನ್ಮಾಭಿಷವಣ** – ಜಿನನ ಜನ್ಮಾಭಿಷೇಕ ಕಲ್ಯಾಣ (ಶೇಷಾಶೇಷ ದೇವನಿಕಾಯಮಂ ಉಚಿತಸ್ಥಾನದೊಳ್ ನಿಱಿಸಿ ಜನ್ಮಾಭಿಷವಣಪರಿಣತಾಂತಃಕರಣನಾದಾಗಳ್: **ಆದಿಪು,** ೭. ೭೭ ವ)

**ಜನ್ಮಾಭಿಷೇಕ** – ಜನ್ಮಸವನ (ಅಮರೇಂದ್ರಾವಳಿಯಿಂದಮಿಂದ್ರಗಿರಿಯೊಳ್ ಜನ್ಮಾಭಿಷೇಕಕ್ಕೆ ನೋಂತು: **ಆದಿಪು,** ೬. ೨೦)

**ಜನ್ಮಾಭಿಷೇಕೋತ್ಸವಂ** – ತೀರ್ಥಂಕರನ ಜನ್ಮಸವನಕಲ್ಯಾಣ (ಸುರಲೋಕಾವತರೋತ್ಸವಂ ಜನ್ಮಾಭಿಷೇಕೋತ್ಸವಂ ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯ ಬೋಧೋತ್ಸವಂ ಪರಿನಿರ್ವಾಣಮಹೋತ್ಸವಂ ಜಿನಮಹಾಕಲ್ಯಾಣಮೈದುಂ ಸವಿಸ್ತರದಿಂದಿರ್ಪುವು ವರ್ಣಗಂಗಳಿವಱಿಂ ಭವ್ಯಾಂಗಮೇನೊಪ್ಪದೇ: **ಅಜಿತಪು,** ೧. ೯೫)

**ಜನ್ಮಾವಳಿ** – ಭವಾವಳಿ, ಹುಟ್ಟಿನ ಪರಂಪರೆ (ಮನದೊಳೆನಗೀಶ ಮತ್ಪ್ರಾಕ್ತನ ಜನ್ಮಾವಳಿಯನೆಯ್ದೆ ಕೇಳ್ವ ಅೞ್ತಿ ಕರಂ ಜನಿಯಿಸಿದಪುದು: **ಚಂದ್ರಪ್ರಪು,** ೩. ೮)

**ಜನ್ಮಾಳಿ** – ಭವಾವಳಿ (ಪುಣ್ಯದೊಳಂ ವಿಮಿಶ್ರಣದೊಳಂ ಜನ್ಮಾಳಿ ಸಲ್ಗುಂ: **ಶಾಂತಿಪು,** ೮. ೧೩೯)

**ಜನ್ಮೋತ್ಸವ** – ತೀರ್ಥಂಕರ ಜನ್ಮಕಲ್ಯಾಣ (ಅಭಿವೀಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವಮಂ ಬೆಸಕೆಯ್ದು ಮಣಿವಿತಾನದೊಳ್: **ಶಾಂತಿಪು,** ೧೦. ೨೩)

**ಜಯ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು, ಪಂಚೇಂದ್ರಿಯಗಳ ಅನುಭವಕ್ಕೆ ಶಕ್ತಿಯಿಲ್ಲದ್ದು ಮತ್ತು ಷಡ್ವರ್ಗಗಳನ್ನು ಗೆಲ್ಲುವುದು (ಜಯವೆಂಬುದು ಕರ್ಣತ್ವಗಕ್ಷಿಜಿಹ್ವಾಘ್ರಾಣೇಂದ್ರಿಯಂಗಳ್ಗೆ ವಿಷಯಮಪ್ಪ ಸ್ಪರ್ಶ ರೂಪ ರಸ ಗಂಧಂಗಳೊಳಂ ಶಕ್ತಿಯಿಲ್ಲದುದು ಮೇಣ್ ಕಾಮಕ್ರೋಧಲೋಭಹರ್ಷಂಗಳಂ ಗೆಲ್ವುದು; **ಚಾವುಂಡಜಯ,** ಪು, ೨೫೭)

**ಜಯಂತಿ** – ಹದಿನಾಲ್ಕು ವಿಮಾನಗಳಲ್ಲಿ ಒಂದು (ಜಯಂತೀವಿಮಾನದೊಳ್ ಅಹಮಿಂದ್ರನಾಗಿ ತ್ರಯಸ್ತ್ರಿಂಶತ್ ಸಾಗರೋಪಮ ಆಯುಷ್ಯನುಂ: **ನೇಮಿನಾಪು,** ೪. ೬೫ ವ)

**ಜಲಬಹುಲಭಾಗ** – ಮೊದಲ ಅಧೋಲೋಕವಾದ ರತ್ನಪ್ರಭೆಯ ಭಾಗವಾದ ಪೃಥ್ವಿಯ ಒಂದು ಭಾಗ, (ಅತಿಸಹಸ್ರೋತ್ತರಲಕ್ಷ ಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕ್ಕುಮಾ ಪೃಥ್ವಿ ವಜ್ರಖರ ಪಂಕ ಜಲಬಹುಳಭಾಗದಿಂ ತ್ರಿವಿಧಮಕ್ಕುಂ; ... ಜಲಬಹುಲಭಾಗಮೆಣ್ಬತ್ತುಸಾಸಿರಯೋಜನಮಕ್ಕುಂ: **ಸುಕುಮಾಚ,** ೧೧. ೪೧ ವ)

**ಜವೋಷಧಿಋದ್ಧಿ** – ಹತ್ತು ತಪಸ್ಸಿದ್ಧಿಗಳನ್ನು ಪಡೆದವರಿಗೆ ಉಂಟಾಗುವ ಮಹಿಮೆ; ಸಾಧುವಿನ ಬೆವರ ಸ್ಪರ್ಶದಿಂದ ರೋಗ ವಾಸಿಯಾಗುವ ಔಷಧರ್ಧಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಜಾತರೂಪ** – ಬೆತ್ತಲೆ, ದಿಗಂಬರ ಜೈನರ ಸನ್ಯಾಸ (ತದ್ಗುರುವಿನ ಮತಮಂ ಭಕ್ತಿಯ ಭರದಿಂದಂ ಜಾತರೂಪಮಮಂ ಕೈಕೊಂಡರ್: **ಆದಿಪು,** ೯. ೮೧)

**ಜಾತರೂಪಧರ** – ದಿಗಂಬರ ಸನ್ಯಾಸಿ (ವೀರಸಂಸ್ಥಾನಾರೂಢನಂ ಮಹಾಬಳನಂ ಜಾತರೂಪಧರನಂ ಮಾಡಿ: **ಆದಿಪು,** ೨. ೫೧ ವ)

**ಜಾತಿಕ್ಷತ್ರಿಯ** – ಕ್ಷತ್ರಿಯರಲ್ಲಿನ ಎರಡು ಪ್ರಭೇದಗಳಲ್ಲಿ ಒಂದು, ಅದರಲ್ಲಿಯೂ ನಾಲ್ಕು ಬಗೆಗಳು (ಗೃಹಸ್ಥರಾರ್ಯಷಟ್ಕರ್ಮನಿರತರ್ ಜಾತಿಕ್ಷತ್ರಿಯರೆಂದುಂ ತೀರ್ಥಕ್ಷತ್ರಿಯರೆಂದುಮಿರ್ತೆಱಂ; ಅಲ್ಲಿ ಜಾತಿಕ್ಷತ್ರಿಯರುಂ ಕ್ಷತ್ರಿಯ ಬ್ರಾಹ್ಮಣ ವೈಶ್ಯ ಶೂದ್ರರೆಂಬ ಭೇದದಿಂ ಚತುರ್ವಿಧಮಪ್ಪರ್: **ಚಾವುಂಡಜಯ,** ಪು. ೧೯೪)

**ಜಾತಿಸ್ಮರ** – ಹಿಂದಿನ ಜನ್ಮದ ನೆನಪುಳ್ಳವನು (ಜಾತಿಸ್ಮರರೆನೆ ನೆರೆದೋರೊರ್ವರೊಳ್ ಮತ್ತಂ ಅತ್ಯುತ್ಸವದಿಂದಂ ಮರ್ತ್ಯಭೊಗಂಗಳಂ ಅನುಭವಿಸಲ್ ನೋಂತರ್: **ಆದಿಪು,** ೪. ೬೧)

**ಜಾತಿಸ್ಮರೆ** – ಹಿಂದಿನ ಜನ್ಮದ ನೆನಪುಳ್ಳವಳು (ರುಷಿಯರಂ ಕಂಡು ಜಾತಿಸ್ಮರೆಯಾಗಿ ತನ್ನ ಮುನ್ನಿನ ಪೊಲತಿಯಾಗಿ ಪುಟ್ಟಿದ ಭವಮನಱಿದು: **ವಡ್ಡಾರಾ,** ಪು. ೧೧. ಸಾ೨೩)

**ಜಿನ** – ಅರ್ಹಂತ (ಉದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ: **ಪುಷ್ಪದಂಪು,** ೧೦. ೨)

**ಜಿನಕಲ್ಪ** – ಏಕವಿಹಾರಿ ಜೈನಸಾಧು ಸಂಪ್ರದಾಯ (ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗಟ್ಚಿದರ್: **ವಡ್ಡಾರಾ,** ಪು ೯೨, ಸಾ ೧)

**ಜಿನಕಲ್ಪಿತ** – ಜಿನನು ಕಲ್ಪಿಸಿಕೊಂಡದ್ದು, ಒಂದು ಆಚರಣೆಯ ಹೆಸರು (ಅನ್ನೆಗಮಿತ್ತ ವೃಷಭಯೋಗೀಂದ್ರನುಂ ಸಕಳ ಸಾವದ್ಯಾತಿದೂರಮಪ್ಪ ಜಿನಕಲ್ಪಿತಮೆಂಬ ಆಚರಣಮಂ ಕೈಕೊಂಡು: **ಆದಿಪು,** ೧೦. ೧೩ ವ)

**ಜಿನಗುಣಸಂಪತ್ತಿ** – ೧೬ ಭಾವನೆಗಳು, ೫ ಕಲ್ಯಾಣಗಳು, ೮ ಪ್ರಾತಿಹಾರ್ಯಗಳು, ಹಾಗೂ ೩೪ ಅತಿಶಯಗಳು – ಹೀಗೆ ೬೩ ಗುಣಗಳಿಗೆ ೬೩ ದಿನಗಳು ಮಾಡುವ ವ್ರತ (ಷೋಡಶತೀರ್ಥಕರಭಾವನೆಗಳಂ ಚತುಸ್ತ್ರಿಂಶತ್ ಅತಿಶಯಂಗಳುಮಂ ಅಷ್ಟಮಹಾ ಪ್ರಾತಿಹಾರ್ಯಂಗಳುಮಂ ಪಂಚಕಲ್ಯಾಣಂಗಳುಮಂ ನಾಮೋದ್ದೇಶಂಗೆಯ್ದು ... ಜಿನಗುಣಸಂಪತ್ತಿಯಂ: **ಆದಿಪು,** ೩. ೪೦ ವ)

**ಜಿನಚರಿತ** – ತೀರ್ಥಂಕರ ಚರಿತ್ರೆ (ಕೇವಣಿಸು ವಾಕ್ಸುವರ್ಣದೊಳೊಲವಿಂ ಸಂದ ಜಿನಚರಿತರತ್ನಮಂ: **ಚಂದ್ರಪ್ರಪು,** ೧. ೬೦)

**ಜಿನಚೈತ್ಯ** – ಜಿನಗೃಹ (ಏನೊಪ್ಪಿರ್ಪುವೊ ಪೋಲು ದಿವ್ಯ ಜಿನಚೈತ್ಯಂಗಳ್ ಬಹಿತ್ರಂಗಳಂ: **ಪುಷ್ಪದಂಪು,** ೨. ೭೪)

**ಜಿನದೀಕ್ಷಿತ** – ಜೈನಸನ್ಯಾಸಿ (ಜಿನದೀಕ್ಷಿತನಂತ್ಯದೊಳಮರನಾಗಿ ಮುನ್ನಿನ ನಿದಾನದಿಂದಶ್ವಗ್ರೀವ ನಭಶ್ಚರನಲ್ತೆ: **ಶಾಂತಿಪು,** ೭. ೬೪)

**ಜಿನದೀಕ್ಷೆ** – ಜೈನಸನ್ಯಾಸದೀಕ್ಷೆ (ಸರ್ವಸ್ವಮಂ ಜರತ್ತೃಣಸಮಾನಮಾಗೆ ಬಗೆದಾ ಮಹಾತ್ಮಂ ಸುಷೇಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯಂ ತಾಳ್ದಿದಂ: **ಸುಕುಮಾಚ,** ೧೦. ೩೧)

**ಜಿನಧರ್ಮ** – ಜೈನಧರ್ಮ (ನಿಮಗಮೆಗಮಾಮ್ನಾಯದಿಂ ಬಂದುದಿಂತೀ ಜಿನಧರ್ಮಂ: **ಆದಿಪು,** ೨. ೨೦)

**ಜಿನನಾಥರೂಪ** – ದಿಗಂಬರತ್ವ (ಸ್ವಯಂಪ್ರಭ ತೀರ್ಥೇಶ್ವರ ಪಾದಾರವಿಂದ ಸಮಕ್ಷದೊಳ್ ಜಿನನಾಥರೂಪಮಂ ತಾಳ್ದಿ: **ಶಾಂತಿಪು,** ೪. ೧೦೮ ವ)

**ಜಿನನಿಕೇತ** – ಜಿನಾಲಯ (ರತ್ನಚ್ಚವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತುಂ: **ಆದಿಪು,** ೧೫. ೪೯)

**ಜಿನಪತಿ** – ತೀರ್ಥಂಕರ (ಬಗೆಗೊಂಡು ಜಿನಪತಿಯಂ ಪೂಜಿಸು ಪಡೆವೆಯಿನಿಯನಂ ಮಱುಭವದೊಳ್: **ಆದಿಪು,** ೩. ೧೬)

**ಜಿನಮತ** – ಜೈನಧರ್ಮ (ಜಿನಮತಪದಾರ್ಥ ಶಂಕಾಪನಯನಮುಂ ಭೋಗಾಕಾಂಕ್ಷೆಯೊಳ್ ವಿಮುಖತೆಯುಂ: **ಆದಿಪು,** ೫. ೫೭)

**ಜಿನಮತಾರುಚಿ** – [ಜಿನಮತ+ಅರುಚಿ] ಜೈನಮತದ ಬಗೆಗಿದ ದ್ವೇಷ (ಮಾಂಸ ಮಧುಮದ್ಯಸೇವನೆ ಹಿಂಸಾರುಚಿ ಪರಮಜಿನಮತಾರುಚಿ ಕುಲಟಾಸಂಸರ್ಗಂ ಎಂಬಿವಲ್ಲದೆ ಸಂಸಾರಭ್ರಮಣಕಾರಣಂ ಪೆಱವೊಳವೇ: **ಆದಿಪು,** ೫. ೮೦)

**ಜಿನಮಹಾಕಲ್ಯಾಣ** – ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳು (ಜಿನಮಹಾ ಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು: **ಅಜಿತಪು,** ೧. ೯೬)

**ಜಿನರೂಪತಾ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಗೃಹತ್ಯಾಗ ದೀಕ್ಷಾಜಿನರೂಪತಾ ಮೌನಾಧ್ಯಯನ ... ಎಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಿಂ: **ಆದಿಪು,** ೧೫. ೧೫ ವ)

**ಜಿನರೂಪತಾಕ್ರಿಯೆ** – ದಿಗಂಬರತ್ವವನ್ನು ಪಡೆಯುವುದು (ಜಿನದೀಕ್ಷೆಯಂ ಕೈಕೊಂಡು ಜಾತರೂಪಧರನಪ್ಪುದು ನಿಸ್ಸಂಗತಾಮುಖ್ಯಮಪ್ಪಂ ಜಿನರೂಪಧಾರಣೆ ವೀರರ್ಗಲ್ಲದೇಕಾತ್ಮಕರಪ್ಪ ಜಂತುಗಳ್ಗಶಕ್ಯಮದನಜಿನಾ ರೂಪಮಂ ಕೈಕೊಳ್ವುದು ಜಿನರೂಪತಾಕ್ರಿಯೆ: **ಚಾವುಂಡಜಯ,** ಪು. ೧೮೩)

**ಜಿನವೃಂದಾರಕ** – ತೀರ್ಥಂಕರ (ಜಿನವೃಂದಾರಕರ್ ಇರ್ಪತ್ತುನಾಲ್ವರ್: **ಅಜಿತಪು,** ೧. ೬)

**ಜಿನಶಾಸನ** – ಜೈನಸಿದ್ಧಾಂತ (ಜಿನಶಾಸನರುಚಿ ಪಡೆವಳ ತೈಲನ ಜನನಿಯೆ ತೀರ್ಥಕರ ಜನನಿಯೆನ್ನದರೊಳರೇ: **ಅಜಿತಪು,** ೧. ೫೫)

**ಜಿನಸಪರ್ಯೆ** – ಜಿನಪೂಜೆ (ಪುಣ್ಯಬಂಧಮನಾವರಿಸುವ ಜಿನಸಪರ್ಯೆ ತೊಡರ್ದುದು ಬಗೆಯೊಳ್: **ಆದಿಪು,** ೩. ೨೮)

**ಜಿನಸವನ** – ಜಿನನ ಅಭಿಷೇಕ (ಜಿನಸವನಮಂಗಳಕ್ಕಾನೆ ನೋಂತೆನೆಂಬಂತೆ ಶಿಖರಿ ನಿಜಶಿಖರದ ಪೆಂಪನೆ ಮೆಱೆದು: **ಆದಿಪು,** ೭. ೬೫)

**ಜಿನಾರ್ಭಕ** – ಜಿನಶಿಶು (ಆ ಜಿನಾರ್ಭಕನಂ ... ಓಲಗಿಸಲ್ ಸಾರ್ದಿರ್ದ ರಾಕೇಂದುವೆಂಬಂತೆ ರಾಜಿಸುವ ಧವಳಾತಪತ್ರಂಬಿಡಿದು ಈಶಾನೇಂದ್ರಂ: **ಶಾಂತೀಶ್ವಪು,** ೧೪. ೬೭ ವ)

**ಜಿನಾವಾಸ** – ಜಿನಗೃಹ (ಜಿನಯೋಗಿಜ್ಯಾಯರ್ ಉತ್ಸಾರಿತಭವದುರಿತರ್ ಭಾವಿಸುತಿರ್ಪ ತತ್ಪಾವನ ಶುಭ್ರಧ್ಯಾನದೀಪ್ತಿವ್ರಜಮೆ ಬಲಿದು ಭಾಸ್ವತ್ ಜಿನಾವಾಸಮಾಯ್ತು: **ಶಾಂತೀಶ್ವಪು,** ೧. ೧೧೩)

**ಜಿನೇಂದ್ರಬಿಂಬ** – [ಯುದ್ಧವೀರರು ಯುದ್ಧಕ್ಕೆ ಮುಂಚೆ ಪೂಜಿಸುವ] ಜಿನನ ಪ್ರತಿಮೆ (ದರ್ಭಶಯ್ಯೆ ಪೂಜಿಸುವ ಜಿನೇಂದ್ರಬಿಂಬಂ ಎಸೆವ ಉಗ್ರ ರಣಾನಕರೌದ್ರಘೋಷಂ ಏರ್ವಸನಮನುಂಟುಮಾಡಿದುದು ಪಂದೆಗಂ: **ಆದಿಪು,** ೧೪. ೯೦)

**ಜಿನೇಶ್ವರರೂಪ** – ಜಿನರೂಪ (ಅಂತು ದಶಸಹಸ್ರ ಧರಣೀಶ್ವರರೊಡನೆ ಜಿನೇಶ್ವರ ರೂಪಮಂ ತಾಳ್ದಿ: **ಆದಿಪು,** ೩. ೫೬ ವ)

**ಜೀವತತ್ತ್ವ** – ಏಳು ತತ್ವಗಳಲ್ಲಿ ಮೊದಲನೆಯದು (ತತ್ತ್ವಗಳೊಳಗೆ ಚೇತನಾಲಕ್ಷಣ ಮಪ್ಪುದು ಜೀವತತ್ತ್ವಂ: **ಆದಿಪು,** ೧೦. ೬೧ ವ)

**ಜೀವದಯಾಷ್ಟಮಿ** – ಒಂದು ವ್ರತ, ಆಶ್ವಯುಜ ಶುಕ್ಲ ಅಷ್ಟಮಿಯ ದಿನ ಮಾಡುವ ವ್ರತ (ಶ್ರಾವಕಜನದುಪವಸಂ ಜೀವದಯಾಷ್ಟಮಿಯೊಳಾಗೆ ಪಾರಣೆ ಕವಿಗಳ್ಗೆ ಈ ಕಥನದಿಂದೆ: **ಯಶೋಧಚ,** ೧. ೩)

**ಜೀವದ್ರವ್ಯ** – ಜೀವ ಪುದ್ಗಲ ಧರ್ಮ ಅಧರ್ಮ ಕಾಲ ಮತ್ತು ಆಕಾಶವೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು, (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಂ: **ಸುಕುಮಾಚ,** ೩. ೩೯ ವ)

**ಜೀವರತ್ನ** – ಚಕ್ರವರ್ತಿಗೆ ದೊರೆಯುವ ಏಳು ಜೀವವಿರುವ ರತ್ನಗಳು: ಸೇನಾಪತಿ, ಸ್ಥಪತಿ, ಗೃಹಪತಿ, ಪುರೋಹಿತ, ಗಜ, ವಾಜಿ, ಸ್ತ್ರೀ (ಆ ಚಕ್ರರತ್ನದ ಬಟೆಯೊಳ್ ಸಂಗಳಿಸಿದ ... ಆಱುಂ ಅಜೀವರತ್ನಂಗಳುಮಂ ... ಏೞುಂ ಜೀವರತ್ನಂಗಳುಮಂ...ಪೂಜೆಗೆಯ್ದು: **ಶಾಂತೀಶ್ವಪು,** ೧೨. ೩ ವ)

**ಜೀವಸಂಭಾವನೆ** – ಜೀವದ ಪರಿಕಲ್ಪನೆ (ಈ ನಿಮ್ಮ ಜಿನಮತದ ಜೀವಸಂಭಾವನೆಯೊಳ್ ಪೃಥ್ವಿ ಅಪ್ ತೇಜೋ ವಾತ ಅಭಿದಾನ ಭೂತಚತುಷ್ಟಯದಿಂದಂ ಬೇಱೆ: **ಶಾಂತಿಪು,** ೮. ೧೨೮ ವ)

**ಜೀವವಿಚಯ** – ಅಪಾಯವಿಚಯ ಉಪಾಯವಿಚಯ ಜೀವವಿಚಯ ಅಜೀವವಿಚಯ ವಿಪಾಕವಿಚಯ ವಿರಾಗವಿಚಯ ಭವವಿಚಯ ಸಂಸ್ಥಾನವಿಚಯ ಆಜ್ಞಾವಿಚಯ ಹೇತುವಿಚಯ ಎಂಬ ಧರ್ಮಧ್ಯಾನದ ಹತ್ತು ಬಗೆಗಳಲ್ಲಿ ಒಂದು, ಜೀವದ ಸ್ವಭಾವಚಿಂತನೆ (ಜೀವವಿಚಯಮೆಂಬುದು ಜೀವಂ ಸಾಕಾರನಾಕಾರೋಪಯೋಗ ಲಕ್ಷಣಮುಂ ... ಮೊದಲಾಗೆ ಚೇನತಾಚೇತನಸ್ವಭಾವಾನುಚಿಂತನಂ: **ಚಾವುಂಡಜಯ:** ಪು. ೩೮೭)

**ಜೀವಸಿದ್ಧಿ** – ಜೀವನ ಅಸ್ತಿತ್ವವನ್ನು ಸಾಧಾರವಾಗಿ ಪ್ರತಿಪಾದಿಸುವುದು (ಅನುಭೂತ ಶ್ರುತದೃಷ್ಟ ಖೇಚರ ಕಥಾನಕಂಗಳಿಂ ಯುಕ್ತಿಯಿಂದಿನಿತಂ ಸಾಧಿಸಿ ಜೀವ ಸಿದ್ಧಿಯನಿದಂ ನಿಶ್ಚೈಸಿ: **ಆದಿಪು,** ೨. ೨೨)

**ಜೀವಾಜೀವರತ್ನ** – ೭ ಅಜೀವರತ್ನಗಳು ಹಾಗೂ ೭ ಜೀವರತ್ನಗಳು – ಒಟ್ಟು ೧೪

ರತ್ನಗಳು (ಚಕ್ರ ... ಛತ್ರ ... ಖಡ್ಗ ... ದಂಡ ... ಚರ್ಮ ... ಮಣಿ ... ಕಾಕಿಣೀ ... ಗೃಹಪತಿ ... ಸೇನಾನಿ ... ತಕ್ಷಕ ... ಪುರೋಹಿತ ... ಯಾಗಹಸ್ತಿ ... ತುರಗ ... ಸ್ತ್ರೀ ... ಎಂದಿಂತು ಜೀವಾಜೀವರತ್ನಂ: **ಆದಿಪು,** ೧೧. ೩ ವ)

**ಜೀವಾಭಾವ** – ಜೀವವಿಲ್ಲ ಎಂಬ ವಾದ (ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಚ್ಚುವಿಡಿದು: **ಆದಿಪು,** ೨. ೭ ವ)

**ಜೀವಾಸ್ತಿಕಾಯ** – ಪಂಚಾಸ್ತಿಕಾಯಗಳಲ್ಲಿ ಒಂದು (ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಆಕಾಶಾಸ್ತಿಕಾಯವೆಂಬ ಪಂಚಾಸ್ತಿಕಾಯ ನಿಕಾಯಮುಂ: **ಸುಕುಮಾಚ,** ೩. ೩೯ ವ)

**ಜುಗುಪ್ಸಾ** – ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು, ಅಸಹ್ಯವನ್ನು ಉಂಟುಮಾಡುವುದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದ ಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯ ಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ಜೈನ** – ಜಿನಮತದ ಅನುಯಾಯಿ (ಜೈನನನುಪೇಕ್ಷಿಪೊಡಂತವ ಜೈನನೇ: **ಸಮಯಪ,** ೪. ೬೩)

**ಜೈನಗೃಹ** – ಜಿನ ದೇವಾಲಯ (ವಸುಧೆಗಾ ಕಲ್ಪಾಂತಮೆಂಬನ್ನೆಗಂ ಮಾಡಿಸಿದಂ ಜೈನಗೃಹಂಗಳಂ: **ಆದಿಪು,** ೧೫. ४೭)

**ಜೈನಗೇಹ** – ಬಸದಿ (ಗಿರಿರಾಜಂಗೊಟ್ಟವೊಲೆಸೆದುದದೇಂ ದಿವ್ಯಮೋ ಜೈನಗೇಹಂ: **ಶಾಂತಿಪು,** ೨. ೧೧೭)

**ಜೈನಜನ** – ಜೈನಮತದ ಅನುಯಾಯಿಗಳು (ಜಯಶ್ರೀಗೊಲವನೀಯೆ ನೆಗಟ್ಟಿಂಭೂಗಧಿಪತಿ ಜೈಜಜನಮನೋಹರಚರಿತಂ: **ಚಂದ್ರಪ್ರಭ,** ೨. ೧)

**ಜೈನತನ** – ಜೈನಮತದ ಅನುಸರಣೆ (ಅವನ ಮಕ್ಕಳ್ಗಡ ಮಾರ್ತಾಂಡಂಗೆ ಭಕ್ತರೆನಿಪಾ ಭಂಡಂಗಂ ಜೈನತನದ ಪೆಸರೆಂತೆಸೆಗುಂ: **ಸಮಯಪ,** ೪. ೧೨೫)

**ಜೈನದೀಕ್ಷಿತ** – ಜೈನದೀಕ್ಷೆಯನ್ನು ಹೊಂದಿದವನು (ನಾನಾ ವಿಧದಿಂದಂ ನಮೆದು ನಾರುಗಿದಿರ್ಪರೋ ಜೈನದೀಕ್ಷಿತರ್: **ಶಾಂತಿಪು,** ೮. ೧೨೯)

**ಜೈನದೀಕ್ಷೆ** – ಜಿನದೀಕ್ಷೆ (ಕಿಡುವೊಡಲ ಕಿಡುವ ರಾಜ್ಯದ ಪಡೆಮಾತುಗೊಳಲ್ಕಮೆನ್ನ ಮೈಯಗಿದಪುದು ಈಗಡೆ ಜೈನದೀಕ್ಷೆಯಂ ಕೊಂಡಡಿಗೆಜಿಗಿಸುವೆಂ ಸಮಸ್ತಸುರ ಸಮುದಯಮಂ: **ಆದಿಪು,** ೧೪. ೧೨೭)

**ಜೈನಧರ್ಮ** – ಜಿನನಿಂದ ಬೋಧಿಸಲ್ಪಟ್ಟ ಧರ್ಮ (ವೀರಜಿನೇಂದ್ರನಿಂ ಗಣಧರಾಗ್ರಣಿಯಿಂ ಕ್ರಮದಿಂದೆ ಬಂದ ಜೈನಧರ್ಮದ ಮೊದಲ್ ಪರಮೇಶ್ವರನೆಂಬಿನಂ: **ಶಾಂತಿಪು,** ೧. ೩)

**ಜೈನಬಿಂಬ** – ಜಿನಪ್ರತಿಮೆ (ಪೊಸಮುತ್ತಿನ ಮಂಡಪದೊಳೆಸೆವ ಕನತ್ಕನಕ ಪೀಠದೊಳ್ ವಿಧಿಸಹಿತಂ ಮಿಸಿಸಿ ಬಟೆಕ್ಕರ್ಚಿಸಿ ಪೂಜಿಸಿ ಮಣಿಮಯ ಜೈನಬಿಂಬಮಂ: **ಶಾಂತಿಪು,** ೭. ೩೦)

**ಜೈನಶಾಸನ** – ಜೈನಧರ್ಮ (ವಿಪುಳಗುಣ ವತ್ಸಳತ್ವಮುಂ ಅಪಗತಮಳ ಜೈನಶಾಸನ ಉದ್ಭಾಸನಮುಂ: **ಆದಿಪು,** ೫. ೫೮)

**ಜೈನಸ್ತವ** – ಅರ್ಹಂತನ ಸ್ತುತಿ (ದೇವತೂರ್ಯನಗದೇವೀಗೀತ ಜೈನಸ್ತವ ಸಮುಪಹಿತಾತ್ಮೀಯಚಿತ್ತಂ ವಿಲಾಸಂ ಮಿಗೆ ... ಮಹೋತ್ಸಾಹದಿಂ ಬಂದನಾಗಳ್; **ಆದಿಪು,** ೮. ೪೩)

**ಜೈನಾಗಮ** – ಜೈನಸಿದ್ಧಾಂತ (ಸೂಕ್ತಂ ಭವ್ಯಜನಪ್ರವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀಯೋಕ್ತಮಿದೆರ್ದೆಯೊಳ್ ನೆಲಸುಗೆ: **ಆದಿಪು,** ೫. ೭೧)

**ಜೈನಾಗಮವಿದ** – ಜೈನಸಿದ್ಧಾಂತವನ್ನು ತಿಳಿದವನು (ಜೈನಾಗಮವಿದರಂ ಸಾರದೆ ಪೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ: **ಆದಿಪು,** ೧೫. ೩೫)

**ಜೈನಾಭಿಪ್ರಾಯ** – ಜೈನ ಮತದ ಕ್ರಮ (ಪರಮಾಯುಷ್ಯಾಂತಂಬರಂ ನಿರಾಕುಳಮಾಗಿರ್ಪ ಆಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊರೆಯಿಸಿದಂ: **ಆದಿಪು,** ೨. ೫೩)

**ಜೈನಾಲಯ** – ಬಸದಿ (ಮುನೀಂದ್ರರಿಲ್ಲದಗಮಿಲ್ಲಾತೋದ್ಯದುದ್ಯೋಗಮಿಲ್ಲದ ಜೈನಾಲಯಮಿಲ್ಲ ನೋಡದಱಿೊಳ್: **ಶಾಂತಿಪು,** ೯. ೧೩೭)

**ಜ್ಞಾನಚತುಷ್ಟಯ** – ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಾಯ ಎಂಬ ಜ್ಞಾನಗಳು (ಅಂತು ದೀಕ್ಷಾಗ್ರಹಣಾನಂತರಸಮಯಸಮುತ್ಪನ್ನ ಸಪ್ತರ್ಧಿ ಜ್ಞಾನಚತುಷ್ಟಯಂ ಪ್ರಮಥಗಣಧರನಾದಂ: **ಆದಿಪು,** ೧೦. ೪೮ ವ)

**ಜ್ಞಾನಧರ** – ಮತಿ, ಶ್ರುತಿ ಮತ್ತು ಅವಧಿ ಎಂಬ ಜ್ಞಾನತ್ರಯಗಳನ್ನು ಹೊಂದಿದವನು, ಪುರುದೇವ (ಶ್ರೀನಿಳಯಮಿದುವೆ ನಾಭಿಸ್ಥಾನಮೆನಲ್ ನೆಱೆದ ಅಯೋಧ್ಯೆಗವತರಿಸಲ್ ಶ್ರೀ ಜ್ಞಾನಧರಂ ಬಗೆದಂ: **ಆದಿಪು,** ೭. ೧)

**ಜ್ಞಾನಭೇದ** – ಐದು ಬಗೆಯ ಜ್ಞಾನಗಳು (ಅದು ಮತಿ ಶ್ರುತ ಅವಧಿ ಮನಃಪರ್ಯಾಯ ಕೇವಲ ಜ್ಞಾನಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಜ್ಞಾನಾರಾಧನೆ** – ದರ್ಶನ, ಜ್ಞಾನ, ಚಾರಿತ್ರ ಮತ್ತು ತಪಾರಾಧನೆ ಎಂಬ ನಾಲ್ಕು ಬಗೆಯ ಆರಾಧನೆಗಳಲ್ಲಿ ಒಂದು, ಅಜ್ಞಾನವನ್ನು ದೂರಮಾಡಿ ಸುಜ್ಞಾನವನ್ನು ಹೊಂದುವುದು (ಅಜ್ಞಾನಮಂ ಗೆಂಟುಮಾಡಿ ಸುಜ್ಞಾನಮನಾತ್ಮನೊಳುಂಟು ಮಾಡುವುದು ಜ್ಞಾನಾರಾಧನೆ: **ಜೀವಸಂ,** ೧. ೮ ವ)

**ಜ್ಞಾನಾವರಣ** – ಜೈನಧರ್ಮಕ್ಕೆ ಪ್ರತಿಬಂಧಕವಾದ ಕರ್ಮ (ಮಿಥ್ಯಾದರ್ಶನಾ ವಿರತಿಪ್ರಮಾದಕಷಾಯ ಯೋಗೋಪಾರ್ಜಿತ ಜ್ಞಾನಾವರಣಾದಿ ಕರ್ಮಂಗಳ್ ಸಂಸಾರಕಾರಣಂಗಳ್: **ಆದಿಪು,** ೧೦. ೬೧ ವ)

**ಜ್ಞಾನಾವರಣಪಂಚಕ** – ಮತಿಜ್ಞಾನ, ಶ್ರುತಿಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ ಮತ್ತು ಕೇವಲಜ್ಞಾನ ಎಂಬ ಐದು ಜ್ಞಾನಾವರಣಗಳು (ಚರಮಸಮಯದೊಳ್ ಜ್ಞಾನಾವರಣಪಂಚಕಮುಂ ದರ್ಶನಾವರಣಚತುಷ್ಕಮುಂ ಅಂತರಾಯಪಂಚ ಕಮುಂ ನಿರ್ಮೂಳಮಪ್ಪಂತೆ ಒರ್ಮೊದಲೊಳೆ ಕಿಡಿಸಿದಾಗಳ್: **ವರ್ಧಮಾಪು,** ೧೩. ೩೨ ವ)

**ಜ್ಞಾನಾವರಣೀಯ** – ಎಂಟು ಬಗೆಯ ಘಾತಿಕರ್ಮಗಳಲ್ಲಿ ಒಂದು; ಜ್ಞಾನವನ್ನು ಮರೆಮಾಡುವ ಕರ್ಮ (ಕರ್ಮಭೇದಮುಂ ... ಮೂಲಪ್ರಕೃತಿಭೇದದಿಂದೆಂಟು ತೆಱನಕ್ಕುಂ ಅವಾವುವೆನೆ ಜ್ಞಾನಾವರಣೀಯಂ ... ನಾಮಗೋತ್ರಮಂತರಾಯಂ: **ಶಾಂತಿಪು,** ೧೨. ೧೧ ವ)

**ಜ್ಞಾನೋಪಯೋಗ** – ಷೋಡಶಭಾವನೆಗಳಲ್ಲೊಂದು, ಶಾಸ್ತ್ರಾಧ್ಯಯನ (ನಯ ಪ್ರಮಾಣ ನಿಕ್ಷೇಪ ಲಕ್ಷಿತ ಶಾಸ್ತ್ರಾಧ್ಯಯನ ಲಕ್ಷಣಮಪ್ಪ ಜ್ಞಾನೋಪಯೋಗಮಂ: **ಚಂದ್ರಪ್ರಪು,** ೧೧. ೨೨ ವ)

**ಜ್ಞಾಯಕ** – ತಿಳಿದುಕೊಳ್ಳತಕ್ಕವನು, ಜ್ಞಾತೃ (ಜ್ಞಾಯಕನಾಗಖಿಳಾರ್ಥಂ ಜ್ಞೇಯಂ ಪರಕೀಯಮುಂ ಸ್ವಕೀಯಮುಮೊಳ್ಳೆಂಬೀಯಱಿವಿಂ: **ಪಾರ್ಶ್ವನಾಪು,** ೧೫. ೧೪೦)

**ಜ್ಯೋತಿರಂಗ** – ದಶವಿಧ ಕಲ್ಪವೃಕ್ಷಗಳಲ್ಲಿ ಒಂದು, ಬೆಳಕನ್ನು ನೀಡುವ ಕಲ್ಪವೃಕ್ಷ (ಸೊಗಯಿಸುವುದು ದೀಪಾಂಗ ಜ್ಯೋತಿರಂಗ ಕಲ್ಪಕುಜಂಗಳ್: **ಆದಿಪು,** ೫. ೪೦)

**ಜ್ಯೋತಿರಮರ** – ಭವನವಾಸಿ, ವ್ಯಂತರ, ಜೋತಿಷ್ಕ, ಕಲ್ಪವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಗುಂಪು, ಜ್ಯೋತಿಷ್ಕಲೋಕದಲ್ಲಿನ ಸೂರ್ಯಚಂದ್ರ ಮೊದಲಾದ ದೇವತೆಗಳು (ಭವನಾಮರರುಂ ವ್ಯಂತರನಿವಹಮುಂ ಆ ಜ್ಯೋತಿರಮರತತಿಯುಂ: **ಕರ್ಣನೇಮಿ,** ೮. ೧೯)

**ಜ್ಯೋತಿರ್ವಿಮಾನ** – ಜ್ಯೋತಿಷ್ಕ ದೇವತೆಗಳ ವಿಮಾನ (ಬಳಸಿದುದು ಮೇರು ಶಂಕಾಕುಳಿತಂ ಜ್ಯೋತಿರ್ವಿಮಾನತತಿಯೆನೆ ಬಳಸಿತ್ತೆಳವಳಿಕಿನ ಮುಗಿಲ್ಗಲಟ್ಟಳೆ ವಳಗಂ: **ಚಂದ್ರಪ್ರಪು,** ೧. ೧೦೭)

**ಜ್ಯೋತಿಷ್ಕ** – ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳಲ್ಲಿರುವ ಒಂದು ದೇವತಾವರ್ಗ (ಮಾನಸರ ಮಕ್ಕಳೇ ಜ್ಯೋತಿಷ್ಕರ್: **ಸಮಯಪ,** ೧೦. ೧೦೫)

**ಜ್ಯೋತಿಷ್ಕದೇವಿ** – ಜ್ಯೋತಿಷ್ಕವರ್ಗಕ್ಕೆ ಸೇರಿದ ದೇವತಾಸ್ತ್ರೀ (ಮುನಿನಾಥರ್ ಕಲ್ಪಕಾಂತಾಜನತತಿ ಗಣಿನೀಶ್ರಾವಿಕಾಸಂಕುಳಂ ಭಕ್ತಿನಮಜ್ಜ್ಯೋತಿಷ್ಕದೇವೀಪ್ರತತಿ: **ಆದಿಪು,** ೧೦. ೩೬)

**ಜ್ಯೋತಿಷ್ಕಾಮರ** – ಜ್ಯೋತಿಷ್ಕ ವರ್ಗದ ದೇವತೆ (ಚಂದ್ರಾದಿತ್ಯ ಪ್ರಮುಖರಪ್ಪ ಜ್ಯೋತಿಷ್ಕಾಮರರುಮಂ: **ಚಂದ್ರಪ್ರಪು,** ೧೨. ೧೧೩ ವ)

## ತ

**ತಕ್ಷಕರತ್ನ** – ಜೀವರತ್ನಗಳಲ್ಲಿ ಒಂದಾದ ಸ್ಥಪತಿ, ವಾಸ್ತುಶಿಲ್ಪಿ (ಪ್ರಾಸಾದಪ್ರಕರಣನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ: **ಆದಿಪು,** ೧೧. ೩ ವ)

**ತತ್ತ್ವ** – ವಸ್ತುವಿನ ಭಾವ; ಇದು ಎರಡು ಬಗೆ ಹಾಗೂ ಏಳು ವಿಧವಾದವು (ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ ... ಆ ತತ್ತ್ವಮುಂ ಜೀವಾಜೀವಾಸ್ರವಬಂಧಸಂವರನಿರ್ಜರಾಮೋಕ್ಷಭೇದದಿಂ ಸಪ್ತವಿಧಂ: **ಆದಿಪು,** ೧೦. ೬೩ ವ)

**ತತ್ತ್ವನಿಶ್ಚಯ** – ತತ್ವವನ್ನು ಕುರಿತ ನಿಶ್ಚಿತವಾದ ಜ್ಞಾನ (ತತ್ತ್ವನಿಶ್ಚಯಮನಾಂತ ಲಸನ್ಮತಿ ... ವಿಲಾಸಮಂ ಸಮುದ್ಧರಿಪುಂ: **ಚಂದ್ರಪ್ರಪು,** ೩. ೮೯)'

**ತತ್ತ್ವವಿನಿಶ್ಚಯ** – ತತ್ವನಿಶ್ಚಯ (ತತ್ತ್ವವಿನಿಶ್ಚಯಮೆ ಮನಂಬುಗೆ ಮುದಂ ಮನಂಬೊಕ್ಕಪುದೇ: **ಶಾಂತಿಪು,** ೯. ೧೧)

**ತತ್ತ್ವಾರ್ಥವಿನಿಶ್ಚಯ** – ತತ್ವನಿಶ್ಚಯ (ಬಗೆ ತತ್ತ್ವಾರ್ಥವಿನಿಶ್ಚಯಂಬಡೆಯೆ ನೈರ್ಗ್ರಂಥ್ಯಂ ಪೊದಟ್ಟಿತ್ತು: **ಪುಷ್ಪದಂಪು,** ೧. ೫)

**ತತ್ತ್ವಾರ್ಥಶ್ರದ್ಧಾನ** – ತತ್ವಾರ್ಥದಲ್ಲಿ ಶ್ರದ್ಧೆ (ತತ್ತ್ವಾರ್ಥಶ್ರದ್ಧಾನಪಟುತ್ವಂ ಸಮ್ಯಕ್ತ್ವಂ: **ಶಾಂತಿಪು,** ೬. ೪೬)

**ತಥಾಗತಮತ** – ಬೌದ್ಧಮತ (ತಥಾಗತಮಂ ತಿರಸ್ಕರಿಸಿ ... ಲೋಕಾಯತಶಾಕ್ಯ ಮತಾವಲಂಬಿಯನವಲಂಬಿಂ ಗೆಲ್ದು: **ಶಾಂತಿಪು,** ೮. ೧೪೭ ವ)

**ತನು** – ಶರೀರ. ಇದರಲ್ಲಿ ಔದಾರಿಕ, ವೈಕ್ರೀಯಕ, ಆಹಾರಕ, ತೈಜಸ ಮತ್ತು ಕಾರ್ಮಣಗಳೆಂಬ ಐದು ಬಗೆ (ಸಕಲೋರ್ವೀಪತಿ ನೀಂ ಬಗೆದು ಕೇಳನು ಕ್ರಮದಿನಯ್ದು ಭೇದದಿನೌದಾರಿಕವೈಕ್ರೀಯಕಮಾಹಾರಕ ತೈಜಸ ಕಾರ್ಮಣಂಗಳಿವು ತನುವೆನಿಕುಂ: **ಸುಕುಮಾಚ,** ೮. ೧೦)

**ತನುವಾತ** – ವಿಶ್ವಾಕಾಶವನ್ನು ಆವರಿಸಿಕೊಂಡಿದ್ದು, ಎಂಟು ಲೋಕಗಳಿಗೆ ಆಧಾರವಾದ ಮೂರು ಅನಿಲಗಳಲ್ಲಿ ಕೊನೆಯದು (ಎಂಟುಂ ಪೊಡವಿಗಳಂ ತಾಳ್ದಿದುವೋ ಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅದರ ಪೆಸರ್ಗಳುಂ ಘನೋದಧಿ ಘನವಾತ ತನುವಾತಂಗಳೆಂಬುವು: **ಶಾಂತಿಪು,** ೧೨. ೫೧ ವ)

**ತಪ** – ಷೋಡಶಭಾವನೆಗಳಲ್ಲಿ ಒಂದು, ಧರ್ಮವಿರೋಧಿಯಲ್ಲದ ಕಾಯಕ್ಲೇಶ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬); ಅನಶನ, ವಿವಿಕ್ತ, ಅವಮೋದರ್ಯ, ವೃತ್ತಿಪರಿಖ್ಯಾನ, ರಸಪರಿತ್ಯಾಗ,

ವಿವಿಕ್ತ ಶಯ್ಯಾಸನ, ಕಾಯಕ್ಲೇಶ, ಪ್ರಾಯಶ್ಚಿತ್ತ, ವಿನಯ, ವೈಯಾವೃತ್ತ, ಸ್ವಾಧ್ಯಾಯ, ಉತ್ಸರ್ಗ, ಧ್ಯಾನ ಎಂಬ ಹನ್ನೆರಡು ಬಗೆಯ ತಪಸ್ಸುಗಳು (ವಸುಷೇಣಂ ಅಗ್ಗಳಿಪ ತಪಮಂ ಕೈಕೊಂಡಂ ಶ್ರೇಯೋ ಮುಮುಕ್ಷುಸಮಕ್ಷದೊಳ್: **ಅನಂತಪು,** ೧೨. ೩೨)

**ತಪಃಪರೀಷಹ** – ತಪಸ್ಸನ್ನು ಮಾಡುವಾಗ ಸಹಿಸಿಕೊಳ್ಳಬೇಕಾದ ಬಿಸಿಲು, ಚಳಿ, ಹಸಿವು, ಬಾಯಾರಿಕೆ ಮೊದಲಾದ ತೊಂದರೆಗಳು (ಧೈರ್ಯಂ ಘೋರತರತಪಃ ಪರೀಷಹಸಮೂಹಪ್ರಾಪ್ತಿಯೊಳ್ ... ಸಂಶೋಭಿಪಾಚಾರ್ಯರ್ ತಾಮೆಮಗೀಗೆ ಸಪ್ತಪರಮಸ್ಥಾನೋದಯೋಪಾಯಮಂ, **ಚಂದ್ರಪ್ರಪು,** ೧. ೩)

**ತಪಃಶೀಲ** – ತಪೋನುಷ್ಠಾನದ ಪ್ರವೃತ್ತಿ, ತಪಸ್ಸಿನಲ್ಲಿ ಆಸಕ್ತಿ (ಸಮ್ಯಕ್ತಪಃಶೀಲಜಾಲಂ ಪೊರೆದಂತೇವಾಸಿ ಭವ್ಯಾವಳಿಗತುಳ ತಪಃಶೀಲಮಂ ಮಾಡೆ ಲೋಕೋತ್ತರ ರಾದಾಚಾರ್ಯರೆಮ್ಮಂ ನಿಯುಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ: **ಪುಷ್ಪದಂಪು,** ೧. ೩)

**ತಪಾರಾಧನೆ** – ದರ್ಶನ, ಜ್ಞಾನ, ಚಾರಿತ್ರ ಮತ್ತು ತಪಾರಾಧನೆ ಎಂಬ ನಾಲ್ಕು ಬಗೆಯ ಆರಾಧನೆಗಳಲ್ಲಿ ಒಂದು, ಅನಶನಾದಿ ತಪಗಳಲ್ಲಿ ತೊಡಗುವುದು (ಖ್ಯಾತಿ ಪೂಜಾ ಲಾಭ ಸತ್ಕಾರಾದಿಗಳೀ ತಪದಿಂದಕ್ಕುಮೆಂದು ಬಗೆಯದನಶನಾದಿ ತಪದೊಳ್ ನೆಗಟ್ಟುದು ತಪಾರಾಧನೆ: **ಜೀವಸಂ,** ೧. ೮ ವ)

**ತಪಷ್ಷಟ್ಕ** – ತನ್ನೊಳಗಿಗೆ ಸಂಬಂಧಿಸಿದ ಆರು ಬಗೆಯ ತಪಸ್ಸುಗಳು (ಮತ್ತಂ ಅಭ್ಯಂತರ ತಪಷ್ಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನ ವ್ಯುತ್ಸರ್ಗಂಗಳಂ ಕೈಕೊಂಡು: **ಆದಿಪು,** ೬. ೩೩ ವ)

**ತಪಸ್** – ಹತ್ತು ಕುಲಧರ್ಮಗಳಲ್ಲಿ ಒಂದು, ತಪೋನುಷ್ಠಾನ (ಉತ್ತಮಕ್ಷಮಾಮಾರ್ದ ವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಪರ್ಯಾಯ ಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ತಪೋಋದ್ಧಿ** – ಅಷ್ಟ ಋದ್ಧಿಗಳಲ್ಲಿ ಒಂದು, ಏಳು ಬಗೆಯ ತಪಸ್ಸಿದ್ಧಿಗಳು (ಉಗ್ರತಪಂ ದೀಪ್ತತಪಂ ತಪ್ತತಪಂ ಮಹಾತಪಂ ಘೋರತಪಂ ಘೋರಪರಾಕ್ರಮಂ ಘೋರಗುಣಬ್ರಹ್ಮಚರ್ಯಮೆಂದು ಸಪ್ತವಿಧಮಪ್ಪ ತಪೋಋದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

**ತಪೋಧನಾಖ್ಯಾನ** – ತ್ರಿಷಷ್ಟಿಶಲಾಕಾಪುರುಷರನ್ನು ಕುರಿತ ಕತೆ (ತಪೋಧ ನಾಖ್ಯಾನಮೆಂಬುದು ಜಿನತೀರ್ಥದೊಳ್ ಪುಟ್ಟಿದ ತ್ರಿಷಷ್ಟಿಶಲಾಕಾ ಪುರುಷರ ತಪದ ಶ್ರಾವಕನಿಯೋಗಂಗಳ ಮೆಯ್ವಿಡತಕ್ಕೆ ಯಂತ್ರತಂತ್ರಾನು ಪೂರ್ವಿಗಳಂ ಸದ್ಧರ್ಮಕಥನಂಗೆಯ್ವುದು: **ಚಾವುಂಡಜಯ,** ಪು. ೧೪)

**ತಮಪ್ರಭೆ** – ಏಳುನರಕಗಳಲ್ಲಿ ಒಂದು (ಅಲ್ಲಿಂ ಕೆಟಗೇಕರಜ್ಜು ಪ್ರಮಾಣಾಂತರ ದೊಳಮಘವಿಯೆಂಬ ಪೆಸರ ತಮಪ್ರಭೆಯೆಂಬ ಆಱನೆಯ ನರಕಮಿರ್ಪುದು: **ಅಜಿತಪು,** ೧೧. ೬ ವ)

**ತಮಃಪ್ರಭೆ** – ತಮಪ್ರಭೆ (ಪದಿನಾಱುಸಾಸಿರ ಯೋಜನಯೋಜನಬಾಹುಲ್ಯದಿಂ ತಮಃಪ್ರಭೆಯೆಂಬಯೆಂಬಾಱನೆಯ ನರಕಂ: **ಸುಕುಮಾಚ,** ೧೧. ೪೧ ವ)

**ತಮಿಸ್ರಗುಹೆ** – ಕತ್ತಲ ಗುಹೆ (ತಮಿಸ್ರಗುಹೆಯ ವಜ್ರದ ಪಡಿ ತತ್ ಕ್ಷಿತಿಧರದರ್ದೆಯಂತೆ ಚಮೂಪತಿಯಿಂ ತೆಱೆದತ್ತು: **ಆದಿಪು,** ೧೪. ೫೭)

**ತಿರಿಕವ್ರಾತ** – ತಿರ್ಯಕ್‌ಜಾತಿಯ ಜೀವಿಗಳ ಗುಂಪು (ತಿರಿಕವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇೞಲಾಱೆಂ: **ಧರ್ಮಾಮೃ,** ೧೩. ೧೦೩)

**ತಿರಿಕೋಪಸರ್ಗ** – ತಿರ್ಯಕ್‌ಜೀವಿಗಳಿಂದ ತಪಸ್ವಿಗಳಿಗೆ ಆಗುವ ತೊಂದರೆ (ಸೈರಿಸಲುವಾಗದ ತಿರಿಕೋಪಸರ್ಗಮನವಂತಿ ಸುಕುಮಾರಸ್ವಾಮಿ ಮೂಱು ದಿವಸಮಿರುಳುಂ ಪಗಲುಂ ಸೈರಿಸಿ: **ವಡ್ಡಾರಾ,** ಪು. ೩೦, ಸಾ. ೧೮)

**ತಿರ್ಯಕ್** – ಪ್ರಾಣಿಗಳ ವರ್ಗ (ಜನನ ಮೃತಕ ದೇವ ನಾರಕ ಮನುಷ್ಯ ತಿರ್ಯಕ್ ವಿಕಲ್ಪಗತಿಗಳೊಳೆನಸುಂ ನಿನಗೆ ಸುಖಮಿಲ್ಲ, **ಅಜಿತಪು,** ೨. ೬೬)

**ತಿರ್ಯಗ್ಗತಿ** – [ತಿರ್ಯಕ್+ಗತಿ] ಚತುರ್ಗತಿಗಳಲ್ಲಿ ಒಂದು, ಪಶುಪ್ರಾಣಿಗಳ ಗುಂಪು (ಯಶೋಧರಂ ಚಂದ್ರಮತಿ ಇಂತಿರ್ಬರ್ ಗೂಡಿನ ಕೋಟಿಗಳಾದರ್ ನೋಡಯ್ ಮತ್ತೊರ್ಮೆ ಬೞಲಿ ತಿರ್ಯಗ್ಗತಿಯೊಳ್: **ಯಶೋಧಚ,** ೪. ೩೩)

**ತಿರ್ಯಗ್ಜಾತಿ** – [ತಿರ್ಯಕ್+ಜಾತಿ] ಪಶುಪಕ್ಷಿ ಜನ್ಮ (ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ: **ಆದಿಪು,** ೧೬. ೧೪ ವ)

**ತಿರ್ಯಗ್ಜಾತಿತ್ವ** – ಪಶುಪ್ರಾಣಿಗಳ ಜನ್ಮ (ತಿರ್ಯಗಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ: **ಆದಿಪು,** ೫. ೪೧ ವ)

**ತಿರ್ಯಗ್ಲೋಕ** – [ತಿರ್ಯಕ್+ಲೋಕ] ಪಶುಪ್ರಾಣಿಗಳಿರುವ ಭೂಲೋಕ (ಅಂತೆಸೆದಿರ್ಪುದು ಅಧೋಲೋಕಂ ತಿರ್ಯಗ್ಲೋಕಂ ಊರ್ಧ್ವಲೋಕಂ: **ನೇಮಿನಾಪು,** ೧. ೫೪)

**ತೀರ್ಥ** – ಯತಿ ಸಂಪ್ರದಾಯ (ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗೞ್ಚಿದರ್: **ವಡ್ಡಾರಾ,** ಪು ೯೨, ಸಾ ೧); ಜಿನಪತಿ ಚರಿತ (ತೀರ್ಥಮೆಂಬುದು ಜಿನಪತಿ ಚರಿತಂ: **ಚಾವುಂಡಜಯ,** ಪು.. ೬)

**ತೀರ್ಥಂಕರ** – ಅರ್ಹಂತ, ಜಿನ (ಅತಿಶಯ ಭಕ್ತಿಯಿಂ ಸ್ತುತಿಯಿಸಿ ನಿಜೋಚಿತಸ್ಥಾನದೊಳ್ಕುಳ್ಳಿರ್ದಾದಿತೀರ್ಥಂಕರನನೋಲಗಿಸುತಿರ್ಪನ್ನೆಗಂ: **ಆದಿಪು,** ೧೦. ೪೭ ವ)

**ತೀರ್ಥಕಭಾವನಾಕ್ರಿಯೆ** – ತೀರ್ಥಂಕರನ ಷೋಡಶಭಾವನೆಗಳನ್ನು ಕುರಿತು ಧ್ಯಾನಿಸುವುದು (ಆಚಾರಂ ಮೊದಲಾಗಿ ಸಕಳಶಾಸ್ತ್ರಂಗಳನೋದಿ ವಿಶುದ್ಧಾಚಾರದಿಂ ತೀರ್ಥಕರರಪ್ಪ ಷೋಡಶಭಾವನೆಗಳಂ ಭಾವಿಸುವುದು ಮಹಾಭ್ಯುದಯಾರಾಧನಂ ಸಮ್ಯಗ್ದರ್ಶನ ವಿಶುದ್ಧಾದಿ ಲಕ್ಷಣಂ ತೀರ್ಥಕಭಾವನಾಕ್ರಿಯೆ: **ಚಾವುಂಡಜಯ,** ಪು. ೧೮೪)

**ತೀರ್ಥಕರ** – ಅರ್ಹಂತ, ತೀರ್ಥಂಕರ (ಅತ್ಯಂತ ಭಕ್ತಿಯಿಂ ಪದನತ್ಯಂತದೊಳೆಯ್ದೆ ತಾಳ್ದಿದಂ ತೀರ್ಥಕರಸ್ತುತ್ಯೋದ್ಯಮಮಂ: **ಚಂದ್ರಪ್ರಭು,** ೭. ೩)

**ತೀರ್ಥಕರತ್ವ** – ತೀರ್ಥಂಕರನ ಸ್ಥಿತಿ (ವಾಸವಂಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತು ಅನಶ್ವರಾವಾಸಮನೆಯ್ದಿಸಲ್ಕೆ ಇದುವೆ ಷೋಡಶಭಾವನೆ ಯಿಂದೆ ಷೋಡಶ್ವಾಸಮನೆಯ್ದೆ ಭಾವಿಸುಗೆ: **ಆದಿಪು,** ೧೬. ೮೧)

**ತೀರ್ಥಕರನೃಪತಿ** – ಇಪ್ಪತ್ತನಾಲ್ಕು ಮಂದಿ ತೀರ್ಥಂಕರರ ಕಾಲದಲ್ಲಿ ಆಳುವ ರಾಜರುಗಳು (ಭರತನುಂ ಸತ್ಯಭಾಮನುಂ ಸತ್ಯವೀರ್ಯನುಂ ಮಿತ್ರಭಾವನುಂ ಮಿತ್ರವೀರ್ಯನುಂ ಧರ್ಮವೀರ್ಯನುಂ ದಾನವೀರ್ಯನುಂ ಮಘವನುಂ ಯುದ್ಧವೀರ್ಯನುಂ ಸೀಮಂಧರನುಂ ತ್ರಿಪೃಷ್ಠನುಂ ಸ್ವಯಂಭುವುಂ ಪುರುಷೋತ್ತಮನುಂ ಪುರುಷವರನುಂ ಪುಂಡರೀಕನುಂ ದತ್ತನುಂ ಕುನಾಳನುಂ ನಾರಾಯಣನುಂ ಸುಭೌಮನುಂ ಅಜಿತಂಜಯನುಂ ಉಗ್ರಸೇನನುಂ ಮಹಾಸೇನನುಂ ಅಜಿತನುಂ ಶ್ರೇಣಿಕನುಮೆಂಬ ಚತುರ್ವಿಂತಿ ತೀರ್ಥಕರನೃಪತಿ ಗಳುಂ: **ಚಾವುಂಡಜಯ,** ಪು ೩೪೮)

**ತೀರ್ಥಕರಭಾವನೆ** – ತೀರ್ಥಂಕರನಾಗಲು ಕಾರಣವಾಗುವ ಹದಿನಾರು ಮನೋವೃತ್ತಿಗಳು (ಪರಮಜಿನಪತಿ ಪರಿಭಾಷಿತಮಪ್ಪ ಸಕಳಶ್ರಾವಕವ್ರತಂಗಳಂ ಷೋಡಶ ತೀರ್ಥಕರಭಾವನೆಗಳಂ ಚತುಸ್ತ್ರಿಂಶದತಿಶಯಂಗಳುಮಂ ಅಷ್ಟಮಹಾಪ್ರಾತಿ ಹಾರ್ಯಂಗಳುಮಂ: **ಆದಿಪು, ೩.** ೪೦ ವ)

**ತೀರ್ಥಕೃದ್ಭಾವನಾ** – ಒಂದು ಗರ್ಭಾನ್ವಯಕ್ರಿಯೆ (ತೀರ್ಥಕೃದ್ಭಾವನಾ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ತೀರ್ಥಕ್ಷತ್ರಿಯ** – ಕ್ಷತ್ರಿಯರಲ್ಲಿನ ಎರಡು ಪ್ರಭೇದಗಳಲ್ಲಿ ಒಂದು, ಅದರಲ್ಲಿಯೂ ನಾಲ್ಕು ಬಗೆಗಳು (ಗೃಹಸ್ಥರಾರ್ಯಷಟ್ಕರ್ಮನಿರತರ್ ಜಾತಿಕ್ಷತ್ರಿಯರೆಂದುಂ ತೀರ್ಥಕ್ಷತ್ರಿಯರೆಂದುಮಿರ್ತೆಱಂ ... ತೀರ್ಥಕ್ಷತ್ರಿಯರೆಂದು ರಾಜಋಷಿ ಬ್ರಹ್ಮಋಷಿ ದೇವಋಷಿ ಪರಮಋಷಿಯರೆಂದು ನಾಲ್ಕು ಪ್ರಕಾರಂ;: **ಚಾವುಂಡಜಯ,** ಪು. ೧೯೪)

**ತೀರ್ಥನಾಥ** – ತೀರ್ಥಂಕರ (ಬಂದುತ್ಸರ್ಪಣಕಾಲದೊಳ್ ಅಂದಿಲ್ಲಿಯ ತೀರ್ಥನಾಥನಾಗಿ: **ಕರ್ಣನೇಮಿ,** ೧೪. ೩೯)

**ತೀರ್ಥಪ್ರವರ್ತಕ** – ತೀರ್ಥಂಕರ, ಅರ್ಹಂತ (ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೀಮತಿ ದಾನತೀರ್ಥ ಪ್ರವರ್ತಕಂ ಶ್ರೇಯಾಂಸನಕ್ಕುಂ; **ಆದಿಪು,** ೫. ೧೩ ವ)

**ತೀರ್ಥೇಶ** – ತೀರ್ಥಂಕರ (ಭೂತಾನಂದರೆಂಬ ತೀರ್ಥೇಶಸನ್ನಿಧಿಯೊಳ್ ದೀಕ್ಷೆಯಂ ತಳೆದು: **ಕರ್ಣನೇಮಿ,** ೬. ೪೫ ವ)

**ತೀರ್ಥೇಶ್ವರ** – ತೀರ್ಥಂಕರ (ಬಂದಂ ಲೋಕನಾಥಂ ಸ್ವಯಂಪ್ರಭ ತೀರ್ಥೇಶ್ವರಂ ಅ ನೃಪೇಶ್ವರನ ರಾಜ್ಯಂ ಪೂಜ್ಯಮಪ್ಪನ್ನೆಗಂ: **ಶಾಂತಿಪು,** ೧. ೮೧)

**ತೀರ್ಥೋಪವಾಸ** – ಪುಣ್ಯಕ್ಷೇತ್ರದಲ್ಲಿ ಮಾಡುವ ಉಪವಾಸ (ಚೈತ್ಯಾಲಯಂಗಳಂ ವಂದಿಸಿ ಸದ್ವಾಸರದೊಳ್ ತೀರ್ಥೋಪವಾಸಂಗೆಯ್ದು: **ಸುಕುಮಾಚ,** ೪. ೨೧ ವ)

**ತೀವ್ರೋಪವಾಸ** – ಶಿಕ್ಷಾವ್ರತಗಳಲ್ಲಿ ಒಂದು (ತೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತಂ ಇದು ನಾಲ್ಕು ತೆಱಂ: **ಶಾಂತಿಪು,** ೧. ೯೦)

**ತುಟಿತ** – ಬಹು ದೊಡ್ಡ ಕಾಲಪ್ರಮಾಣ (ತುಟಿತಾಬ್ಧಪ್ರಮಿತಜೀವಿತನುಮಾಗಿ ನಾಲ್ಕನೆಯ ಕುಳಧರಂ ಪುಟ್ಟಿ: **ಆದಿಪು,** ೬. ೫೬ ವ)

**ತುರಗರತ್ನ** – ಜೀವರತ್ನಗಳಲ್ಲಿ ಒಂದು (ಪವನಂಜಯಮೆಂಬ ತುರಗರತ್ನಮುಂ: **ಆದಿಪು,** ೧೧. ೩ ವ)

**ತುಷಿತ** – ಲೋಕಾಂತಿಕ ದೇವತೆಗಳಲ್ಲಿ ಒಂದು ಗುಂಪು (ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ದತೋಯ ತುಷಿತ ವ್ಯಾಬಾಧ ಅರಿಷ್ಟರೆಂಬ ಎಣ್ಬರುಂ ಲೋಕಾಂತಿಕದೇವರ್ ಬಂದು: **ಆದಿಪು,** ೯. ೬೦ ವ)

**ತೂರ್ಯಕ್ಷ್ಮಾಜ** – ದಿವ್ಯವಾದ್ಯಗಳನ್ನು ನೀಡುವ ಕಲ್ಪವೃಕ್ಷ (ಓಲಗಿಪುದೊ ದಂಪತಿಗೆಂದುಮವಾರ್ಯವೀರ್ಯ ತೂರ್ಯಕ್ಷ್ಮಾಜಂ: **ಆದಿಪು,** ೫. ೩೫)

**ತೃತೀಯಪೀಠ** – ಜಿನನು ಸಮವಸರಣದಲ್ಲಿ ಮಂಡಿಸುವ ಮೂರು ಪೀಠಗಳಲ್ಲಿ ಮೂರನೆಯದು (ಮೇಘರಥಾಧೀಶ್ವರನುಂ ವಂದನಾಭಕ್ತಿಗೆ ಪೋಗಿ ಭವಭಯಹರಣ ಪ್ರದಾಯಮಾನವಿನೇಯಜನೈಕಶರಣಮಂ ಸಮವಸರಣಮಂ ಪೊಕ್ಕು ಪ್ರಥಮದ್ವಿತೀಯ ತೃತೀಯಪೀಠಂಗಳುಮನುಕ್ರಮದಿನರ್ಚಿಸಿ; **ಶಾಂತಿಪು,** ೯. ೬೯ ವ)

**ತೈಜಸ** – ಜೀವರುಗಳಿಗಿರುವ ಐದು ವಿಧವಾದ ಶರೀರಗಳಲ್ಲಿ ಒಂದು, ತೇಜ ಮತ್ತು ಪ್ರಭಾರೂಪವನ್ನು ಹೊಂದಿರುವ ಶರೀರ (ಅನುಕ್ರಮದಿಂ ಅಯ್ದುಭೇದದಿನೌದಾರಿಕ ವೈಕ್ರಿಯಕಮಾಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ: **ಸುಕುಮಾಚ,** ೮. ೧೦)

**ತ್ಯಾಗ** – ತೀರ್ಥಂಕರಪದವಿಯನ್ನು ಪಡೆಯಲು ಬೇಕಾದ ಹದಿನಾರು ಭಾವನೆಗಳಲ್ಲಿ ಒಂದು (ತ್ಯಾಗಮೆಂಬುದು ಕೊಟ್ಟ ದಿವಸದೊಳ್ ಪ್ರೀತಿಯೊಳ್ ಮಾಱ್ಪಾಹಾರಮಂ ಪಾತ್ರಕ್ಕೆ ಕುಡುವ ಆಹಾರದಾನಮುಂ ಏಕಭವವ್ಯಸನಾಹಾರಿಯಪ್ಪಭಯದಾನಮುಂ ಅನೇಕಭವ ಶತಸಹಸ್ರ ದುಃಖೋತ್ತರ ಪರಿಣತನಪ್ಪ ಸಮ್ಯಜ್ಞಾನದಾನಮುಮೆಂಬ ತ್ರಿವಿಧಮುಮಂ ಯಥಾವಿಧಿಯಿಂ ಕುಡುವುದು ತ್ಯಾಗಂ: **ಚಾವುಂಡಜಯ,** ಪು. ೨೦೭); ಹತ್ತು ಕುಲಧರ್ಮಗಳಲ್ಲಿ ಒಂದು, ನೀಡುವ ಪ್ರವೃತ್ತಿ (ಎಂಬಿನಮುತ್ತಮಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ

ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ತ್ರಯೋದಶಪ್ರಕೃತಿ** – ಆತ್ಮನಿಗೆ ಜ್ಞಾನ ಮುಂತಾದುವನ್ನುಂಟುಮಾಡುವ ಕರ್ಮಗಳು (ಅನ್ಯತರವೇದ್ಯ ಮನುಷ್ಯಾಯುರ್ಗತಿ ತತ್ಪ್ರಾಯೋಗ್ಯಾನುಪೂರ್ವ ಪಂಚೇಂದ್ರಿಯ ಜಾತಿ ತ್ರಸನಾಮ ಸುಭಗಾದೇಯ ಪರ್ಯಾಪ್ತ ಬಾದರ ಯಶಸ್ಕೀರ್ತ್ಯುಚ್ಚೈರ್ಗೋತ್ರ ತೀರ್ಥವರನಾಮಗಳೆಂಬ ತ್ರಯೋದಶಪ್ರಕೃತಿಗಳುಮನುನ್ಮೂಲಿಸಿದನ್: **ಆಚವರ್ಧ,** ೧೬. ೬೭ ವ)

**ತ್ರಸ** – ಈ ಹೆಸರಿನ ಕರ್ಮದ ಉದಯದಿಂದ ಎರಡರಿಂದ ಐದು ಇಂದ್ರಿಯಗಳನ್ನು ಪಡೆದ ಜೀವ (ಆ ಸಂಸಾರಿಯುಂ ಸ್ಥಾವರ ತ್ರಸ ವಿಕಲ್ಪದಿಂ ದ್ವಿವಿಧಮಕ್ಕುಂ: **ಸುಕುಮಾಚ,** ೮. ೬ ವ)

**ತ್ರಸಕಾಯ** – ಚಲಿಸುವ ದೇಹವುಳ್ಳ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಪ್ರಾಣಿಗಳು (ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್: **ಆದಿಪು,** ೧೦. ೬೧ ವ)

**ತ್ರಸಜೀವ** – ತ್ರಸಕಾಯ (ಸ್ಪರ್ಶನರಸನಘ್ರಾಣಚಕ್ಷುಶ್ಶ್ರೋತ್ರೇಂದ್ರಿಯ ಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ: **ಆದಿಪು,** ೧೦. ೬೩ ವ)

**ತ್ರಸನಾಮ** – ಹದಿಮೂರು ಪ್ರಕೃತಿಗಳಲ್ಲಿ ಒಂದು; ತ್ರಸಜೀವವನ್ನು ಪಡೆಯುವಂತೆ ಮಾಡುವ ಕರ್ಮ (ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್: **ಆದಿಪು,** ೧೦. ೬೧ ವ)

**ತ್ರಸನಾಳ** – ತ್ರಸಜೀವಿಗಳು ಇರುವ ಪ್ರದೇಶ (ನಿಮಿರ್ದ ಚತುರ್ದಶ ರಜ್ಜುಪ್ರಮಾಣಮಿರ್ದಪುದು ಸಯ್ತುಧೋಲೋಕಂ ಮಧ್ಯಮಲೋಕ ಮೂರ್ಧ್ವಲೋಕಂ ಕ್ರಮದಿಂ ತ್ರಸನಾಳಮೇಕರಜ್ಜುಪ್ರಮಾಣಂ: **ಅಜಿತಪು,** ೬. ೫೬)

**ತ್ರಾಯಸ್ತ್ರಿಂಶ** – ಹತ್ತುವರ್ಗಗಳಲ್ಲಿನ ಒಂದು ದೇವತಾವರ್ಗ (ಸಾಮಾನಿಕ ತ್ರಾಯಸ್ತ್ರಿಂಶತ್ಪಾರಿಷದ ಆತ್ಮರಕ್ಷ ಲೋಕಪಾಳ ಅಭಿಯೋಗ್ಯ ಕಿಲ್ಬಿಷರೊಡನೆ: **ಆದಿಪು,** ೭. ೪೨ ವ)

**ತ್ರಿಕ** – ಮೂರು, ಮೂರರ ಸಮುದಾಯ (ತ್ರಿವಿಧಕರಣ ಪರಿಣಾಮಪರಿಣತಂ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿ ಎಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ: **ಆದಿಪು,** ೧೦. ೧೪ ವ)

**ತ್ರಿಕರಣ** – ಜೀವಕ್ಕೊದಗುವ ಅಧಃಕರಣ, ಅಪೂರ್ವಕರಣ, ನಿವೃತ್ತಿಕರಣ ಎಂಬ ಮೂರು ಬಗೆಯ ಪರಿಣಾಮಗಳು (ತ್ರಿಕರಣ ದಿವ್ಯಾಂಜನದಿಂ ಸಕಳಪ್ರತ್ಯಕ್ಷಹೇತು ಸಮನಿಸೆ ಸಪ್ತಪ್ರಕೃತಿಪಟಳಕ್ಷಯಂ: **ಮಲ್ಲಿನಾಪು,** ೧೪. ೫೮)

**ತ್ರಿಕರಣಪರಿಣತ** – ಕರಣತ್ರಯಗಳ ಬಗ್ಗೆ ಸಂಪೂರ್ಣ ತಿಳಿವಳಿಕೆಯಿರುವವನು (ತ್ರಿಕರಣಪರಿಣತಂ ಏೞುಂ ಪ್ರಕೃತಿಗಳುಮಂ ಇಂತು ಕಿಡಿಸಿ ... ಸಮ್ಯಗ್ದೃಷ್ಟಿತ್ವಮಂ ಅಕಳಂಕಂ ತಳೆದು ಶುದ್ಧದರ್ಶನನಾದಂ: **ಚಂದ್ರಪ್ರಪು,** ೧೪. ೬೬)

**ತ್ರಿಖಂಡ** – ಗಂಗಾ ಮತ್ತು ಸಿಂಧೂನದಿಗಳಿಂದ ಪ್ರತ್ಯೇಕಗೊಳಿಸಲ್ಪಟ್ಟ ಮೂರು ಭಾಗಗಳು (ತಳೆದಂ ಚಂಡನಂದೀ ತ್ರಿಖಂಡ ಉರ್ವರೆಯಂ ದಿಗ್ವರ್ತಿ ಕೀರ್ತಿಪ್ರಸರಂ: **ಕರ್ಣನೇಮಿ,** ೨. ೧೦೩)

**ತ್ರಿಖಂಡಾಧಿಪ** – ತ್ರಿಖಂಡಗಳ ಒಡೆಯ, ಅರ್ಧ ಚಕ್ರವರ್ತಿ (ಮಯೂರಗ್ರೀವಂ ನೀಳಾಂಜನೆಗಂ ಪುಟ್ಟಿದ ನಿಖಿಳಖೇಚರಲಲಾಮಾಯಮಾಣಂ ತ್ರಿಖಂಡಾಧಿಪಂ: **ಶಾಂತಿಪು,** ೫. ೨೬ ವ)

**ತ್ರಿಗಾರವ** – ಋದ್ಧಿ, ರಸ, ಸಾತು ಎಂಬ ಮೂರು ಬಗೆಯ ಗಾರವ [ಅಹಂಕಾರ]ಗಳು; ಕ್ರಮವಾಗಿ ಐಶ್ವರ್ಯ, ಷಡ್ರಸೋಪೇತ ಆಹಾರ ಮತ್ತು ಸಂಪೂರ್ಣ ಆರೋಗ್ಯ – ಇವುಗಳಿಂದ ಬರುವಂಥವು (ಪಂಚಸಮಿತಿಸಂಯುತನುಂ ಶಲ್ಯತ್ರಯ ತ್ರಿಗಾರವರಹಿತನುಂ: **ಕರ್ಣನೇಮಿ,** ೨. ೬೧ ವ)

**ತ್ರಿಗುಪ್ತಿ** – ಕಾಯ, ವಾಕ್ಕು, ಮನಸ್ಸುಗಳನ್ನು ನಿಯಂತ್ರಿಸಿಕೊಂಡು ಧರ್ಮಧ್ಯಾನದಲ್ಲಿ ನಿರತನಾಗುವುದು (ಕಸವರಮಂ ಕಸಮಂ ಪೂಜಿಸುವನುಂ ಏಳಿಸುವನುಂ ಸಮಾನಂ ಪ್ರತಿಭಾಷಿಸೆ ಪಂಚಮಹಾವ್ರತ ಪಂಚಸಮಿತಿ ಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ: **ಶಾಂತಿಪು,** ೯. ೧೧೧)

**ತ್ರಿಗುಪ್ತಿಗುಪ್ತ** – ತ್ರಿಗುಪ್ತಿಯನ್ನು ಸಾಧಿಸಿದವನು (ದ್ವಿವಿಧಸಂಯಮಧಾರಿಯುಂ ತ್ರಿಗುಪ್ತಿಗುಪ್ತನುಂ ... ಪಂಚದಶಪ್ರಮಾದವರ್ಜಿತನುಂ ಆಗಿ: **ಅಜಿತಪು,** ೩. ೧ ವ)

**ತ್ರಿಜ್ಞಾನ** – ಶ್ರುತಿ, ಮತಿ, ಅವಧಿ ಎಂಬ ಮೂರು ಬಗೆಯ ಜ್ಞಾನಗಳು (ಸಹಜಾತ ತ್ರಿಜ್ಞಾನದ ಮಹಿಮೆಯಿಂ ಆ ನಿಖಿಳವಿದ್ಯೆಗಳ್ ತನ್ನೊಳ್ ಸನ್ನಿಹಿತಮೆನಿಸಿದುವು: **ಕರ್ಣನೇಮಿ,** ೯. ೫)

**ತ್ರಿಜ್ಞಾನಧರ** – ತ್ರಿಜ್ಞಾನಗಳನ್ನು ಹೊಂದಿದವನು (ಶ್ರೀನಿಳಯಮಿದುವೆ ನಾಭಿಸ್ಥಾನಮೆನಲ್ ನೆಱೆದಯೋಧ್ಯೆಗವತರಿಸಲ್ ತ್ರಿಜ್ಞಾನಧರಂ ಬಗೆದಂ ಭವ್ಯಾನಂದಕರಂ ಸರಸ್ವತೀಮಣಿಹಾರಂ: **ಆದಿಪು,** ೭. ೧)

**ತ್ರಿದಂಡ** – ಕಾಯ, ಮನೋ, ವಾಕ್ ಎಂಬ ಮೂರು ದಂಡಗಳು (ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಿಂ ಕ್ರಮಕ್ರಮದಿಂ ಕಟಲ್ಚಿ: **ಸುಕುಮಾಚ,** ೩. ೪೬ ವ)

**ತ್ರಿದಂಡಿ** – ಕಾಯ, ಮನೋ, ವಾಕ್‌ಗಳ ಮೇಲೆ ನಿಯಂತ್ರಣ ಸಾಧಿಸಿದ ಯತಿ (ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ ತಮಗೆ ತಾವೇ ವನಪ್ರವೇಶಮಂ ಮಾಡಿ: **ಆದಿಪು,** ೯. ೯೩ ವ)

**ತ್ರಿದರ್ಶನ** – ಶ್ರುತಿ, ಮತಿ ಮತ್ತು ಅವಧಿ ಎಂಬ ಜ್ಞಾನಗಳು (ತನ್ನ ದರ್ಶನಂ ತ್ರಿದರ್ಶನಮನಧಃಕರಿಸೆ ಸುಪ್ರತಿಷ್ಠವ್ರತಿಪಂ ಏಕಾದಶಾಂಗಧರನಾಗಿ: **ನೇಮಿನಾಪು,** ೪. ೬೫ ವ)

**ತ್ರಿಪಲ್ಯೋಪಮ** – ವ್ಯವಹಾರ, ಉದ್ಧಾರ, ಅದ್ಧಾ ಎಂಬ ಮೂರು ಪಲ್ಯಗಳಷ್ಟು ಅವಧಿ (ಬದರೀಫಲ ಮಾತ್ರಾಹಾರಿಗಳುಂ ಆರೋಗ್ಯ ಶರೀರಂಗಳುಂ ಸೌಂದರಾಕಾರಂಗಳುಂ ಆಗಿ: **ಆದಿಪು,** ೫. ೪೧ ವ)

**ತ್ರಿಪ್ರಾಭೃತ** – ಪ್ರಶಸ್ತನೋ ಆಗಮಭಾವ, ಅಪ್ರಶಸ್ತನೋ ಆಗಮಭಾವ, ಗ್ರಾಂಥಿಕ ಎಂಬ ಮೂರು ಪ್ರಾಭೃತ [ಉಡುಗೊರೆ]ಗಳು (ಅರ್ಹತ್ಪತಿ ಮೆಚ್ಚಿತ್ತಂ ತ್ರಿಪ್ರಾಭೃತಮನೆನಲ್ ಕೊಂಡಕುಂದ ಮುನಿಪತಿ ಸಂದಂ: **ಪುಷ್ಪದಂಪು,** ೧ ೧೭)

**ತ್ರಿಪೃಷ್ಟ** – ಮೊದಲನೆಯ ಕೇಶವ ಅಥವಾ ವಾಸುದೇವ; ಪ್ರತಿಶತ್ರು ಅಥವಾ ಪ್ರತಿವಾಸುದೇವನೆಂಬುವವನನ್ನು ಸಂಹರಿಸಿ ಅರ್ಧ ಚಕ್ರವರ್ತಿ ಪದವಿಯನ್ನು ಪಡೆಯುವ ಶಲಾಕಪುರುಷ. ತ್ರಿಪೃಷ್ಟ ದ್ವಿಪೃಷ್ಟ ಸ್ವಯಂಭು ಪುರುಷೋತ್ತಮ ನರಸಿಂಹ ಪುಂಡರೀಕ ದತ್ತದೇವ ಲಕ್ಷ್ಮಣ ಮತ್ತು ಕೃಷ್ಣ ಎಂದು ಕ್ರಮವಾಗಿ ಒಂಬತ್ತು ಜನ ಕೇಶವರು (ಪೌದನಪುರಮನಾಳ್ವ ಬಾಹುಬಲಿಯ ಸಂತತಿಯೊಳ್ ಪುಟ್ಟಿದ ಪ್ರಜಾಪತಿ ಮಹಾರಾಜಂಗಂ ಮೃಗಯಾವತಿಗಂ ತ್ರಿಪೃಷ್ಟನೆಂಬೊಂ ಮಗನಾಗಿ ಪ್ರಥಮ ಕೇಶವನಕ್ಕುಂ: **ಚಾವುಂಡಜಯ,** ಪು ೧೫೧)

**ತ್ರಿಭುವನಗುರು** – ಮೂರೂ ಲೋಕಗಳಿಗೆ ಗುರು, ಆದಿದೇವ (ತ್ರಿಭುವನಗುರು ಪರಿನಿಷ್ಠಮಣಕಲ್ಯಾಣ ಶಾರದಾಗಮ ಪ್ರತೀಕ್ಷಣದಿವ್ಯಹಂಸರುಂ: **ಆದಿಪು,** ೯. ೬೦ ವ)

**ತ್ರಿಮಾರ್ಗಗೀತ** – ರೂಪಸ್ತವ, ಗುಣಸ್ತವ, ವಸ್ತುಸ್ತವ ಎಂಬ ಮೂರು ಬಗೆಯ ಗೀತಗಳು (ವೀತರಾಗ ರೂಪಗುಣವಸ್ತುವರ್ಣನಾನುಬದ್ಧ ತ್ರಿಮಾರ್ಗಗೀತಂಗಳಂ ತ್ರಿವಿಧಮಾರ್ಗಂಗಳೊಳ್ ಪಾಡಿ: **ಚಂದ್ರಪ್ರಪು,** ೯. ೫೫ ವ)

**ತ್ರಿಮೂಢತಾನಿರಸನ** – ಲೋಕಮೂಢತೆ, ದೇವಮೂಢತೆ, ಪಾಖಂಡಿಮೂಢತೆ ಎಂಬ ಮೂರು ಬಗೆಯ ಮೌಢ್ಯಗಳನ್ನು ತೊರೆಯುವುದು; ಇದು ಸಮ್ಯಗ್ದರ್ಶನದ ಒಂದು ಅಂಗ (ಮುನಿಜನ ತನುಮಳವಿಚಿಕಿತ್ಸವರ್ಜನಮುಂ ತ್ರಿಮೂಢತಾ ನಿರಸನಮುಂ ಉಪಗೂಹನಮುಂ ... ಎಂದು ಪೇಟ್ವೆಯೆಂಟು ಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್: **ಆದಿಪು,** ೫. ೫೭)

**ತ್ರಿಲೋಕಪ್ರಜ್ಞಪ್ತಿ** – ಒಂದು ಆಗಮ, ಮೂರೂ ಲೋಕಗಳ ಜ್ಞಾನ (ತ್ರಿಲೋಕ ಪ್ರಜ್ಞಪ್ತಿಯೆಂಬಾಗಮಮಂ ಪಜೆವಡಿಗೆಯ್ಯುತ್ತುಂ: **ಧರ್ಮಾಮೃತ,** ೮. ೨೦ ವ)

**ತ್ರಿವರ್ಗ** – ಧರ್ಮ, ಅರ್ಥ, ಕಾಮ (ಜಗದ್ಗುರು ತನ್ನೃತ್ಯಫಲಂ ತ್ರಿವರ್ಗವಿಭವಂ ತಾನೆಂದೊಡೇಮಾತೊ ಸಾಸಿರಮುಂ ನಾಲಗೆಯುಳ್ಳ ವಾಸುಕಿಯುಂ ಇನ್ನೇನೆಂದದಂ ಬಣ್ಣಿಪಂ: **ಆದಿಪು,** ೭. ೧೨೭)

**ತ್ರಿವಾತ** – ಲೋಕವನ್ನು ಸುತ್ತುವರಿದಿರುವ ವಾತ, ಘನವಾತ, ತನುವಾತಗಳೆಂಬ ಗಾಳಿಯ ಆವರಣಗಳು (ತ್ರಿವಾತಾಭಿವೇಷ್ಟಿತಂ ಉತ್ಪತ್ತಿಸ್ಥಿತಿಲಯೇತರಂ ... ಜಗತ್ತ್ರಿತಯಂ ನಿಂದುದು ತಾನನಾದ್ಯನಿಧನಂ ಸ್ವಾಭಾವಿಕನ್ಯಾಯದಿಂ: **ಸುಕುಮಾಚ,** ೧೧. ೪೧)

**ತ್ರಿವಿಧಕರಣ** – ಅಧಃಪ್ರವೃತ್ತಿಕರಣ, ಅಪೂರ್ವಕರಣ ಮತ್ತು ಅನಿವೃತ್ತಿಕರಣಗಳು (ಅಂತರ್ಮುಹೂರ್ತಮಂ ವಿಶ್ರಮಿಸಿ ಮಗುಳ್ದುಂ ತ್ರಿವಿಧಕರಣಪರಿಣಾಮ ಪರಿಣತಂ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿ ಎಂಬ ದರ್ಶನಮೋಹನೀಯ ತ್ರಿಕದ ನಿರ್ಮೂಲನದಿಂ: **ಆದಿಪು,** ೧೦. ೧೪ ವ)

**ತ್ರಿಶಲ್ಯ** – ಮಿಥ್ಯಾ, ಮಾಯಾ, ನಿದಾನಗಳೆಂಬ ಮೂರು ಮೋಹಗಳು (ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮಕ್ರಮದಿಂ ಕಟಲ್ಚಿ ಕಳೆಯುತ್ತುಂ: **ಸುಕುಮಾಚ,** ౩. ೪೬ ವ)

**ತ್ರಿಷಷ್ಟಿಶಲಾಕಾಪುರುಷರು** – ಅರುವತ್ತುಮೂವರು ಆರಾಧನೀಯರು: ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು: ವೃಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿನಾಥ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವನಾಥ, ವರ್ಧಮಾನ; ಹನ್ನೆರಡು ಮಂದಿ ಚಕ್ರವರ್ತಿಗಳು: ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ; ಒಂಬತ್ತು ಮಂದಿ ಬಲದೇವರು: ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ; ಒಂಬತ್ತು ಮಂದಿ ವಾಸುದೇವರು: ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುಂಡರೀಕ, ದತ್ತ, ಲಕ್ಷ್ಮಣ, ಕೃಷ್ಣ; ಒಂಬತ್ತು ಮಂದಿ ಪ್ರತಿವಾಸುದೇವರು: ಅಶ್ವಗ್ರೀವ, ತಾರಕ, ಮೇರುಕ, ಮಧುಕೈಟಭ, ನಿಶುಂಬ, ಬಲಿ, ಪ್ರಹರಣ, ರಾವಣ, ಜರಾಸಂಧ: (ಜಿನಸ್ತವನಂಗಳನೆ ಮಾಣದೆ ಪಾಡಲುಂ ತ್ರಿಷಷ್ಟಿಶಲಾಕಪುರುಷರ ಕಥೆಗಳಂ ಕೇಳಲುಂ ಬಯಕೆ ತಿಣ್ಣಮಾಗೆ: **ಧರ್ಮಾಮೃ,** ೧೦. ೧೧ ವ)

**ತ್ರಿಸಾಕ್ಷಿ** – ಆತ್ಮ, ಇಂದ್ರ, ಸಿದ್ಧ ಎಂಬ ಸಾಕ್ಷಿಗಳು (ಪರಮ ಜಿನದೀಕ್ಷೆಯಂ ತ್ರಿಸಾಕ್ಷಿಕನಾಗಿ ಕೆಯ್ಕೊಂಡು ಕಾಲಾವಸಾನದೊಳ್ ಸನ್ಯಸನಮರಣದಿಂ ... ಮಹಾಬಲನೆಂಬ ದೇವನಾಗಿ ಪುಟ್ಟಿ: **ಅಜಿತಪು,** ೯. ೬ ವ)

**ತ್ರಿಸಾಕ್ಷಿಕ** – ತ್ರಿಸಾಕ್ಷಿಗಳುಳ್ಳವನು (ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗೋನ್ಮುಖ ಮಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ: **ಆದಿಪು,** ೯. ೭೬ ವ)

**ತ್ರೀಂದ್ರಿಯ** – ಸ್ಪರ್ಶ, ರಸನ, ಘ್ರಾಣ ಎಂಬ ಮೂರು ಇಂದ್ರಿಯಗಳನ್ನುಳ್ಳ ಜೀವ. ಕ್ರಿಮಿಕೀಟಗಳು (ಸ್ಪರ್ಶನ ರಸನ ಘ್ರಾಣೇಂದ್ರಿಯಸಮನ್ವಿತಂಗಳಪ್ಪ ಪಿಪೀಲಿಕಾದಿ ತ್ರೀಂದ್ರಿಯಂಗಳ್: **ಆದಿಪು,** ೧೦. ೬౩ ವ)

**ತ್ರೈವಿದ್ಯ** – ಜೀವಸ್ಥಾನ, ಕ್ಷುದ್ರಕಬಂಧ, ಬಂಧಸ್ವಾಮಿತ್ವ ವಿಚಯಗಳೆಂಬ ಷಟ್ಖಂಡಾಗಮದ ಮೂರು ಖಂಡಗಳನ್ನು ತಿಳಿದವನು (ಮೂವತ್ತಾಱು ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಳೆದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರ್ ಅದೆಂತು ಶಾಂತರಸಮಂ ತಾಳ್ದರ್: **ಮಲ್ಲಿನಾಪು,** ೧. ೨೧)

**ತ್ರೈವಿದ್ಯವ್ರತಿ** – ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ಅಭ್ಯಸಿಸಿದವನು (ಶ್ರುತಕೀರ್ತಿ ತ್ರೈವಿದ್ಯವ್ರತಿ ರಾಘವಪಾಂಡವೀಯಮಂ ವಿಬುಧಚಮತ್ಕೃತಿಯೆನಿಸಿ ಗತಪ್ರತ್ಯಾಗತದಿಂ ಪೇೞ್ದಮಲಕೀರ್ತಿಯಂ ಪ್ರಕಟಿಸಿದಂ: **ಪಂಪರಾ,** ೧. ೨೫)

**ತ್ರೈವಿದ್ಯಾಸ್ಪದ** – ವ್ಯಾಕರಣ ತರ್ಕ ಜೈನಸಿದ್ಧಾಂತವೆಂಬ ಮೂರು ವಿದ್ಯೆಗಳಲ್ಲಿ ಪಾಂಡಿತ್ಯ ಪಡೆದವನು (ವಿದಿತ ವ್ಯಾಕರಣದ ತರ್ಕದ ಸಿದ್ಧಾಂತದ ವಿಶೇಷದಿಂ ತ್ರೈವಿದ್ಯಾಸ್ಪದರೆಂದೀ ಧರೆ ಬಣ್ಣಿಪುದು ದಿವಾಕರ ನಂದಿದೇವ ಸೈದ್ಧಾಂತಿಗಳಂ: **ಸುಕುಮಾಚ,** ೧. ೨೦)

**ತ್ರೈವಿದ್ಯೇಶ** – ತ್ರೈವಿದ್ಯ (ತ್ರೈವಿದ್ಯೇಶಂ ಮಾಘಣಂದಿ ವ್ರತಿ ಪೆಸರ್ವಡೆದಂ: **ಚಂದ್ರಪ್ರಪು,** ೧. ೩೦)

# ದ

**ದಂಡಕ್ರಿಯಾ** – ಕೇವಲಿಯ ಆತ್ಮವು ಮೂಲಶರೀರದಿಂದ ಮೂರರಷ್ಟು ದಪ್ಪವಾಗಿಯೂ ಲೋಕಾಕಾರದಷ್ಟು ಉದ್ದವಾಗಿಯೂ ವ್ಯಾಪಿಸುವುದು (ದಂಡಕ್ರಿಯಾಕರಣಾನಂತರ ಸಮಯದೊಳ್ ಪೂರ್ವೋಕ್ತಬಾಹುಲ್ಯದಿಂ ಲೋಕಾಕಾಶ ವ್ಯಾಪಕಕವಾಟ ಕ್ರಿಯೆಯಂ ನೆಱಪಿ: **ಆದಿಪು,** ೧೬. ೪೯ ವ); ದಂಡ, ಕವಾಟ, ಪ್ರತರ, ಲೋಕಪೂರಣ ಎಂಬ ಸಮುದ್ಘಾತಕ್ರಿಯೆಗಳಲ್ಲಿ ಒಂದು (ಚತುರ್ದಶ ರಜ್ಜ್ವಾಯಾಮಾತ್ಮತ್ರಿಗುಣ ಪ್ರಮಾಣಾತ್ಮಪ್ರದೇಶ ವಿಸರ್ಪಣದಿಂ ದಂಡಕ್ರಿಯಾಕರಣನಂತರಸಮಯದೊಳ್: **ಆದಿಪು,** ೧೬. ೪೯ ವ)

**ದಂಡತ್ರಯ** – ಮನಸ್ಸು, ದೇಹ, ಮಾತುಗಳಿಗೆ ಸಂಬಂಧಿಸಿದ ಮೂರು ಬಗೆಯ ದೋಷಗಳು (ಮನೋದಂಡ ವಾಗ್ದಂಡ ಕಾಯದಂಡಮೆಂಬ ದಂಡತ್ರಯಮಂ ಪರಿಹರಿಸುತ್ತುಂ: **ಅಜಿತಪು,** ೭. ೮ ವ)

**ದಂಡರತ್ನ** – ಏಳು ಜೀವರತ್ನಗಳಲ್ಲಿ ಒಂದು, ದಿವ್ಯದಂಡ (ವಿಷಮಭೂತಳಮನನಿತುಮಂ ... ಸಮತಳಂ ಮಾಡೆ ಕೈಗೆ ಬಂದ ದಂಡರತ್ನಮುಂ: **ಚಂದ್ರಪ್ರಪು,** ೬. ೧೦೧ ವ)

**ದಕ್ಷಿಣೇಂದ್ರ** – ಆರು ಮಂದಿ ದಕ್ಷಿಣೇಂದ್ರರು: ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಅನತ, ಅರಣ್ಯ (ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ ... ಭವವಲ್ಲೀದಳಫಲಮೂಲವಿಷಯಮುಮಂ ಪಱಿದು: **ಶಾಂತಿಪು,** ೧೨. ೪೩ ವ ಮತ್ತು ೧೨. ೪೪)

**ದತ್ತಿ** – ಆರ್ಯಷಟ್ಕರ್ಮಗಳಲ್ಲಿ ಒಂದು, ದಾನ ನೀಡುವುದು, ಇದರಲ್ಲಿ ನಾಲ್ಕು ಬಗೆ: ಪಾತ್ರದತ್ತಿ, ಸಮದತ್ತಿ, ಸಕಳದತ್ತಿ ಮತ್ತು ಅನ್ವಯದತ್ತಿ (ದತ್ತಿಯೆಂಬುದು ದಯಾ ಪಾತ್ರ ಸಮ ಸಕಳಭೇದಿಂ ಚತುರ್ವಿಧಮಕ್ಕುಂ; ಅಲ್ಲಿ ದತ್ತಿಯೆಂಬುದುಮನುಕಂಪವೆರಸನುಗ್ರಾಹ್ಯಮಪ್ಪ ಪ್ರಾಣಿಗಳ್ಗೆ ತ್ರಿಶುದ್ಧಿಯಿನ ಭಯದಾನಮಂ ಕುಡುವುದು; ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ಪ್ರತಿಗ್ರಹಾರ್ಚನಾದಿಪೂರ್ವಕಂ ನಿರವದ್ಯಾಹಾರ ಸಂಯಮೋಪಕರಣಂಗಳಂ ಕುಡುವುದು: ಸಮದತ್ತಿಯೆಂಬುದು ತನ್ನೊಳ್ ಸಮಕ್ರಿಯಾಮಂತ್ರನಪ್ಪ ವಿಸ್ತಾರಕೋತ್ತಮಂಗೆ ಕನ್ಯಾಭೂಸುವರ್ಣಹಸ್ತ್ಯಶ್ವ ರಥರತ್ನಾದಿಗಳಂ ಕುಡುವುದು; ತನ್ನೊಳ್ ಸಮಾನರಿಲ್ಲದಂದು ಮಧ್ಯಮ ಪಾತ್ರಕ್ಕೆ ಕುಡುವುದು ಸಕಳದತ್ತಿಯೆಂಬುದು; ತನ್ನ ಸಂತತಿಯಂ ನಿಜೆಸಲ್ವೇಡಿಮಗಂಗಕ್ಕೆ ಗೋತ್ರಜಂಗಕ್ಕೆ ಧರ್ಮಮುಂ ಧನಮನಪ್ಪಯಿಸಿ ಕುಡುವುದು ಅನ್ವಯದತ್ತಿಯುಮದು: **ಚಾವುಂಡಜಯ,** ಪು, ೧೭೯)

**ದಧಿಮುಖ** – ಜೈನ ಪುರಾಣಗಳ ಪ್ರಕಾರ, ನಂದೀಶ್ವರದ್ವೀಪದ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಅಂಜನಗಿರಿಗಳೂ ಒಂದೊಂದು ಅಂಜನಗಿರಿಯ ನಾಲ್ಕು ಮಗ್ಗುಲುಗಳಲ್ಲಿಯೂ ನಾಲ್ಕು ಸರೋವರಗಳೂ ಇದ್ದು, ಪ್ರತಿಯೊಂದು ಸರೋವರದ ಮಧ್ಯೆ ಮೊಸರಿನಂತೆ ಬೆಳ್ಳಗಿರುವ ಸಹಸ್ರಯೋಜನ ಎತ್ತರವಾದ ಒಂದೊಂದು ದಧಿಮುಖಪರ್ವತಗಳು ಒಟ್ಟು ಹದಿನಾರು ಇರುತ್ತವೆ (ಅವಱ ನಾಲ್ಕುಂ ದೆಸೆಯೊಳ್ ಸಮಚತುರಸ್ರಂಗಳಪ್ಪ ದಿವ್ಯಸರೋವರಂಗಳ್ಪದಿನಾಱಪ್ಪುವವಱ ನಡುವೆ ದಧಿಮುಖಶಿಖರಿಗಳುಂ: **ಸುಕುಮಾಚ,** ೧೧. ೫೦ ವ)

**ದನುಜೋದೀರಿತ** – ಐದು ಬಗೆಯ ದುಃಖಗಳಲ್ಲಿ ಒಂದು, ರಾಕ್ಷಸರಿಂದ ಉಂಟಾದ ದುಃಖ (ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಗಳೆಂಬ ಅಯ್ದುಂ ತೆಱದ ದುಃಖಂಗಳೊಳಿರ್ದು: **ಆದಿಪು,** ೫. ೮೮ ವ)

**ದಯಾದತ್ತಿ** – ದಯಾದತ್ತಿ, ಪಾತ್ರದತ್ತಿ, ಸಮದತ್ತಿ ಮತ್ತು ಅನ್ವಯದತ್ತಿ ಎಂಬ ನಾಲ್ಕು ಬಗೆಯ ದಾನಗಳಲ್ಲಿ ಒಂದು, ಎಲ್ಲ ಪ್ರಾಣಿಗಳಲ್ಲಿ ದಯೆ ತೋರಿಸುವುದು (ತ್ರಿಶುದ್ಧಿಯಿನನುಕಂಪೆವೆರಸು ಸಮಸ್ತ ಪ್ರಾಣಿಗಳ್ಗೆ ಅಭಯಂಗುಡುವ ದಯಾದತ್ತಿಯುಂ: **ಆದಿಪು,** ೧೫. ೧೩ ವ); (ದತ್ತಿಯೆಂಬುದು ದಯಾ ಪಾತ್ರ ಸಮ ಸಕಳಭೇದಿಂ ಚತುರ್ವಿಧಮಕ್ಕುಂ; ಅಲ್ಲಿ ದತ್ತಿಯೆಂಬುದು ಮನುಕಂಪವೆರಸನುಗ್ರಾಹ್ಯಮಪ್ಪ ಪ್ರಾಣಿಗಳ್ಗೆ ತ್ರಿಶುದ್ಧಿಯಿನಭಯದಾನಮಂ ಕುಡುವುದು; **ಚಾವುಂಡಜಯ,** ಪು, ೧೭೯)

**ದರುಶನಿಕ** (ದರ್ಶನಿಕ <ದಾರ್ಶನಿಕ) – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿದವನು (ಅಪುನರ್ಭವನಾಪ್ತಂ ತಲ್ಲಪನೋದಿತ ಮಾಗಮಂ ತದಾಗಮದರ್ಥೋಕ್ತಿ ಪದಾರ್ಥಮೆಂದು ನಿಶ್ಚಯಿಪ ಪರಮದರುಶನಿಕನಂತವಂ ಪ್ರಾಥಮಿಕಂ: **ಸುಕುಮಾಚ,** ೬. ೨೬)

**ದರ್ಶನ** – ಸಮ್ಯಕ್‌ದರ್ಶನ, ಜೈನತತ್ವಗಳ ತಿಳಿವಳಿಕೆ ಮತ್ತವುಗಳಲ್ಲಿನ ನಂಬಿಕೆ; ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು (ಸಮ್ಯಕ್ ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ನೆನೆಯುತ್ತುಂ: **ಆದಿಪು,** ೧೦. ೧೪ ವ); ಕನಸು (ಭರತಂ ದರ್ಶನದೊಳ್ ಮಂದರಮಾ ಪ್ರಾಗ್ಭಾರಭೂತಳಂಬರೆಗಂ ನೀಳ್ದಿರೆ ಕಂಡು ವಿಸ್ಮಿತಾಂತಃಕರಣಂ: **ಆದಿಪು,** ೧೬. ೪೧)

**ದರ್ಶನಘಾತಿ** – ಸಮ್ಯಗ್ದರ್ಶನಜ್ಞಾನಚಾರಿತ್ರಗಳಿಗಿರುವ ಅಡ್ಡಿಗಳು – ಕ್ರೋಧ ಮಾನ ಮಾಯಾ ಮತ್ತು ಲೋಭಗಳು (ಅಂತವಿಶ್ರಾಂತ ಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧ ಲೇಶ್ಯಾಪರಿಣಾಮಪರಿಪೂರ್ಣಂ ಅಪ್ರಮತ್ತಗುಣಸ್ಥಾನದೊಳ್ ನಿಂದು ... ಕ್ರೋಧಮಾನಮಾಯಾಲೋಭಗಳೆಂಬ ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ: **ಮಲ್ಲಿನಾಪು,** ೧೪. ೫೭ ವ)

**ದರ್ಶನಮೋಹ** – ಎರಡು ಬಗೆಯ ಮೋಹನೀಯಕರ್ಮಗಳಲ್ಲಿ ಒಂದು, ಸಮ್ಯಗ್ದರ್ಶನಕ್ಕೆ ಅಡ್ಡಿಯಾದುದು (ವೇದನೀಯಮುಂ ದರ್ಶನಮೋಹದೊಳಂ ಚಾರಿತ್ರಮೋಹ ದೊಳಂ ಯಥಾಕ್ರಮದಿಂ: **ಸುಕುಮಾಚ,** ೩. ೩೯ ವ)

**ದರ್ಶನಮೋಹನೀಯ** – ದರ್ಶನಮೋಹವನ್ನು ಉಂಟುಮಾಡುವಂಥದು (ಮಿಥ್ಯಾತ್ವ ಸಮ್ಯಕ್‌ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀಯಮಂ ನಿರ್ಮೂಲಿಸಿ: **ಶಾಂತಿಪು,** ೧೧. ೧೧೧ ವ)

**ದರ್ಶನಮೋಹನೀಯತ್ರಿಕ** – ಆತ್ಮನ ಸಮ್ಯಗ್ದರ್ಶನಕ್ಕೆ ಅಡ್ಡಿಮಾಡುವಂತಹ ಮೂರು ಮೋಹನೀಯಗಳಲ್ಲಿ ಒಂದು (ಅಂತರ್ಮುಹೂರ್ತಮಂ ವಿಶ್ರಮಿಸಿ ಮಗುಳ್ದುಂ ತ್ರಿವಿಧಕರಣಪರಿಣಾಮಪರಿಣತಂ ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿ ಎಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ: **ಆದಿಪು,** ೧೦. ೧೪ ವ)

**ದರ್ಶನರತ್ನ** – ರತ್ನತ್ರಯಗಳಲ್ಲಿ ಒಂದಾದ ಸಮ್ಯಕ್ದರ್ಶನ ಎಂಬ ರತ್ನ (ಮೂಢತ್ರಯದೊಳ್ ಭಾವಮನೆ ಬಿಸುಡು ಬೆಳಗುಗುಂ ಈ ವಿಧದಿಂ ನೆಗಟ್ಟೆ ನಿನ್ನ ದರ್ಶನರತ್ನಂ: **ಆದಿಪು,** ೫. ೫೬)

**ದರ್ಶನವತ್ಸಳತ್ವ** – ಸಮ್ಯಕ್ತ್ವದ ಎಂಟು ಗುಣಗಳಲ್ಲಿ ಒಂದು, ನಿರ್ಮಲವಾದ ದರ್ಶನದಲ್ಲಿ ಪ್ರೀತಿಯಿರುವುದು (ಸದ್ಧರ್ಮಸ್ನೇಹಲಕ್ಷಣೋಪೇತಮುಮಪ್ಪ ದರ್ಶನವತ್ಸಳತ್ವ ಮುಮೆಂಬೀ ಷೋಡಶಭಾವನೆಗಳಂ: **ಚಂದ್ರಪ್ರಪು,** ೧೧. ೨೨ ವ)

**ದರ್ಶನವಿಶುದ್ಧ** – ನಿರ್ಮಲವಾದ ಸಮ್ಯಕ್‌ದರ್ಶನವುಳ್ಳವನು (ಪಾತ್ರಮುತ್ತಮ ಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕುಮಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನನುಮಪ್ಪ ಸಂಯತನುತ್ತಮಪಾತ್ರಂ: **ಆದಿಪು,** ೧೦. ೯ ವ)

**ದರ್ಶನವಿಶುದ್ಧತೆ** – ತೀರ್ಥಂಕರ ನಾಮಕರ್ಮಕ್ಕೆ ಕಾರಣವಾಗುವ ಷೋಡಷ ಭಾವನೆಗಳಲ್ಲಿ ಒಂದು, (ತವೆ ತಮದೊಡ್ಡುಭಾಜಿಸಲೊಡರ್ಚೆ ದಿಗಂಬರಲೀಲೆ ಪುಟ್ಟೆ ಭೂಭುವನಜನಕ್ಕೆ ದರ್ಶನವಿಶುದ್ಧತೆ ಕುಂದೆ: **ಪುಷ್ಪದಂಪು,** ೧೩. ೬೦)

**ದರ್ಶನವಿಶುದ್ಧಿ** – ದರ್ಶನವಿಶುದ್ಧತೆ; ಷೋಡಶಭಾವನೆಗಳಲ್ಲಿ ಒಂದು, ನಿರ್ಮಲವಾದ ಸಮ್ಯಗ್‌ದರ್ಶನವುಳ್ಳವನು (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ದರ್ಶನವಿಶುದ್ಧೆ** – ನಿರ್ಮಳವಾದ ಸಮ್ಯಗ್ದರ್ಶನವುಳ್ಳವಳು (ನಿನಗಾಯುರವಧಿಯುಮಿಂದಿನಿತೆ ದರ್ಶನವಿಶುದ್ಧೆಯಾಗೆಂದು ಪರಮತಪಸ್ವಿ ಪರಸಿ ಗುರುಸಮೇತಂ ಸದ್ಧರ್ಮಕ್ಷೇತ್ರಂಗಳೊಳ್ ವಿಹಾರಿಸುತ್ತಿರ್ದರ್; **ಸುಕುಮಾಚ,** ೫. ೪೪ ವ)

**ದರ್ಶನಶುದ್ಧತೆ** – ದರ್ಶನವಿಶುದ್ಧಿ (ಅತಿಸೂಕ್ಷ್ಮತತ್ತ್ವಮಂ ಕಾಣ್ಬತನುವನೊಟ್ಟಯಿಸಿ ಕಟ್ಟುವೀದರ್ಶನಶುದ್ಧತೆಗಂ ದೃಢಗುಣಸುಸಮರ್ಥತೆಗಂ ಸಲೆ ದೇವಚಂದ್ರಯತಿಪತಿ ನೋಂತಂ: **ಚಂದ್ರಪ್ರಪು,** ೧. ೩೨)

**ದರ್ಶನಶುದ್ಧಿ** – ದರ್ಶನಶುದ್ಧತೆ (ಮುನಿಗೆ ದರ್ಶನಶುದ್ಧಿ ವಿನೇಯಂ ... ವಾತ್ಸಲ್ಯಮುಂತನುವಾಯ್ತು ತೀರ್ಥಕೃತನಾಮಕರ್ಮವನೀವ ಷೋಡಶಭಾವನೆಯೆ ಭಾವದೊಳ್: **ಅನಂತಾಪು,** ೪. ೩೬)

**ದರ್ಶನಾರಾಧನೆ** – ದರ್ಶನ, ಜ್ಞಾನ, ಚಾರಿತ್ರ ಮತ್ತು ತಪಾರಾಧನೆ ಎಂಬ ನಾಲ್ಕು ಬಗೆಯ ಆರಾಧನೆಗಳಲ್ಲಿ ಒಂದು, ಅಷ್ಟಮಲಗಳನ್ನು ಕಳೆದು ಅಷ್ಟಗುಣಗಳನ್ನು ಹೊಂದುವುದು (ಶಂಕಾದ್ಯಷ್ಟಮಲಂಗಳಂ ಕಳೆದು ನಿಶ್ಶಂಕಾದ್ಯಷ್ಟ ಗುಣಂಗಳಂ ಕೂಡುವುದು ದರ್ಶನಾರಾಧನೆ: **ಜೀವಸಂ,** ೧. ೮ ವ)

**ದರ್ಶನಾವರಣ** – ಆತ್ಮನ ದರ್ಶನಶಕ್ತಿಯನ್ನು ಮರೆಮಾಡುವುದು (ಚರಮದೊಳಯ್ದು ಜ್ಞಾನಾವರಣಮುಮಂ ನಾಲ್ಕು ದರ್ಶನಾವರಣಮುಮಂ ಪರಮೇಶ್ವರ ನೊರ್ಮೊದಲೊಳಪಹರಿಸಿದನಯ್ದು ಅಂತರಾಯಂಗಳುಂ: **ಮಲ್ಲಿನಾಪು,** ೧೪. ೬೫)

**ದರ್ಶನಾವರಣ ಚತುಷ್ಕ** – ನಾಲ್ಕು ದರ್ಶನಾವರಣಗಳು (ಚಕ್ಷು ಅಚಕ್ಷು ಅವಧಿ ಕೇವಲದರ್ಶನಾವರಣೀಯ ಚತುಷ್ಕಮುಮಂ ದಾನ ಲಾಭ ಭೋಗ ಉಪಭೋಗ ವೀರ್ಯಾಂತರಾಯಪಂಚಕಮುಮಂ ನಿರ್ಮೂಳಮಪ್ಪಂತೆ: **ಆದಿಪು,** ೧೦. ೧೪ ವ)

**ದರ್ಶನಾವರಣೀಯ** – ನಾಲ್ಕು ಘಾತಿಕರ್ಮಗಳಲ್ಲಿ ಒಂದು; ನವವಿಧ ದರ್ಶನಾವರಣೀಯ: ಚಕ್ಷು, ಅಚಕ್ಷು, ಅವಧಿ, ದೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ. ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆ (ದರ್ಶನಾವರಣೀಯೋತ್ಕರ ತಾಮಸಕ್ಕೆ ರವಿಬಿಂಬಂ ... ಎಂಬಂತು ಘಾತಿ ರಿಪುವ್ರಾತ ವಿಘಾತಿಯಾಯ್ತು: **ಪುಷ್ಪದಂಪು,** ೧೪. ೩೭) ನೋಡಿ, **'ಘಾತಿಕರ್ಮ'**

**ದರ್ಶನಿಕ** – ಹನ್ನೊಂದು ವರ್ಗದ ಶ್ರಾವಕರಲ್ಲಿ ಮೊದಲನೆಯವನು (ಜಿನೇಂದ್ರಧರ್ಮಂ ... ವಂದ್ಯನೆನಗಾಯ್ತು ಅಂತದೆ ಮೋಕ್ಷಪಥಂ ಎಂಬವಂ ದರ್ಶನಿಕಂ: **ಸಮಯಪ,** ೪. ೧೫೫)

**ದಶಕುಲಧರ್ಮ** – ಶ್ರಾವಕನು ಅನುಸರಿಸಬೇಕಾದ ಹತ್ತು ಬಗೆಯ ಧರ್ಮಗಳು (ಉತ್ತಮಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಮೆಂಬೀ ದಶಕುಲಧರ್ಮದೊಳಂ: **ಅಜಿತಪು,** ೭. ೮ ವ)

**ದಶಗುಣ (ಘಾತಿಕ್ಷಯಜಂಗಳಪ್ಪ)** – ಘಾತಿಗಳನ್ನು ಹೋಗಲಾಡಿಸುವ ತೀರ್ಥಂಕರನ ಹತ್ತು ಗುಣಗಳು (ಒಂದೊಂದು ಲಕ್ಕೆ ಪೂರ್ವಕಾಲ ದಿನಗಮನಮುಂ ಉಪಸರ್ಗಭಾವವಮುಂ ವಿಗತಾಹಾರತ್ವವುಂ ಅಚ್ಛಾಯತ್ವವುಂ ಅಪಕ್ಷ್ಮಸ್ಪಂದತ್ವಮುಂ ಗವ್ಯೂತಿಶತಚತುಷ್ಟಯಸುಭಿಕ್ಷತ್ವಮುಂ ಚತುರಾಸ್ಯತ್ವಮುಂ ಪ್ರಾಣಿವಧಹೀನತ್ವಮುಂ ಸಮಪ್ರಸಿದ್ಧನಖಕೇಶತ್ವಮುಂ ಅನಂತಜ್ಞಾನತ್ವಮುಂ ಎಂಬ ಘಾತಿಕ್ಷಯಜಂಗಳಪ್ಪ ದಶಗುಣಂ: **ಅಜಿತಪು,** ೮. ೨೫ ವ)

**ದಶಧರ್ಮ** – ದಶಕುಲಧರ್ಮ, ಶ್ರಾವಕನು ಅನುಸರಿಸಬೇಕಾದ ವ್ಯವಹಾರಧರ್ಮಗಳು: ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಬ್ರಹ್ಮಚರ್ಯ ಮತ್ತು ಬಡತನ (ಎಂಬಿನಮುತ್ತಮಕ್ಷಮಾಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ದಶಧರ್ಮಧರ** – ದಶಧರ್ಮಗಳನ್ನು ಹೊಂದಿದವನು (ದಶಧರ್ಮಧರನುಮಾಗಿ ಗುರುಗಳಾಜ್ಞೆಯಿಂ ಗುರುಗಳೆನಗಲ್ದು ವಿಹಾರಿಸುತ್ತುಂ ಬಂದು : **ಧರ್ಮಾಮೃತ,** ೧೨.೭೭ ವ)

**ದಶಧರ್ಮಧಾರ** – ದಶಧರ್ಮಧರ (ದಶಧರ್ಮಧಾರರಂ ಪುಷ್ಪಶರಾಟೋಪಸಂಹಾರರಂ ... ಭೂಪನಂದು ಬಂದಿಸಿ: **ಕರ್ಣನೇಮಿ,** ೫. ೯೬)

**ದಶಧರ್ಮಧಾರಿ** – ದಶಧರ್ಮಗಳನ್ನು ಹೊಂದಿದವನು (ಮುನಿನಾಥಂ ದಶಧರ್ಮಧಾರಿ ದೃಢಷಟ್ತ್ರಿಂಶದ್ಗುಣಂ ದಿವ್ಯಬಾಣನಿಧಾನಂ ನಿನಗಿಕ್ಷುಚಾಪಮಳಿನೀ ಜ್ಯಾಸೂತ್ರಮೋರೊಂದೆ ಪೂವಿನ ಬಾಣಂಗಳವಯ್ದೆ ಹೀನನಧಿಕಂಗಾಕ್ಷೇಪಮಂ ಮಾಳ್ಪುದಾವ ನಯಂ ದರ್ಪಕ: **ಪಂಪರಾ,** ೧. ೨೦)

**ದಶಪೂರ್ವಧರ** – ಉತ್ಪಾದಪೂರ್ವ, ಆಗ್ರಾಯಣೀಯ, ವೀರ್ಯಾನುವಾದ ಪ್ರವಾದ, ಅಸ್ತಿನಾಸ್ತಿ ಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ ಎಂಬ ದಶಪೂರ್ವಗಳನ್ನು ಅಭ್ಯಸಿಸಿದವನು (ದಶಪೂರ್ವಧರರಮೇಕಾದಶಾಂಗಧಾರಿಗಳುಮೆನಿಪ ಮುನಿಪದನಖದೀಪ್ತಿ ಶರಚ್ಚಂದ್ರಿಕೆ ದರ್ಶನವಿಶುದ್ಧಿಯಂ ಮಾಡುಗುಮಘತಮೋವಿಘಟನಮಂ: **ಮಲ್ಲಿನಾಪು,** ೧. ೧೨)

**ದಶಪೂರ್ವಿ** – ದಶಪೂರ್ವಧರ (ದಶಪೂರ್ವಿಗಳೀವನುಪಮ ದಶವಿಧ ಸಮ್ಯಕ್ತ್ವ ಮಣಿಗಳೊಲ್ದಂಗೈಕಾದಶಧಾರಿಗಳಿವೇಕಾದಶನಿಳಯದ ಸಂಪದಂಗಳಕ್ಕೆಗೆಂದುಂ: **ಪುಷ್ಪದಂಪು**, ೧. ೧೫)

**ದಶವಿಧಧರ್ಮ** – ಸನ್ಯಾಸಿ ಅನುಸರಿಸಬೇಕಾದ ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಅಕಿಂಚನ್ಯ, ಬ್ರಹ್ಮಚರ್ಯೆಗಳೆಂಬ ಹತ್ತು ಧರ್ಮಗಳು (ಉತ್ತಮಕ್ಷಮಾದಿ ದಶವಿಧಧರ್ಮಮುಮಂ ... ಪಂಚೇಂದ್ರಿಯ ವಿಷಯವಿಚ್ಛಿತಿಯುಂ ತನ್ನೊಳುಂ ಸಚ್ಛನ್ನಮಾಗಿ: **ಪುಷ್ಪದಂಪು**, ೧೪.೧೬ ವ)

**ದಶವಿಧಸತ್ಯ** – ಜನಪದ, ಸಮ್ಮತಿ, ಸ್ಥಾಪನಾ, ನಾಮ, ರೂಪ, ಪ್ರತೀತ್ಯ, ವ್ಯವಹಾರ, ಸಂಭಾವನಾ, ಭಾವ, ಉಪಮಾ ಎಂಬ ಹತ್ತು ಬಗೆಯ ಸತ್ಯಗಳು (ನಾಮಸತ್ಯ ರೂಪಸತ್ಯಾದಿ ದಶವಿಧ ಸತ್ಯಮುಂ: **ಪುಷ್ಪದಂಪು**, ೧೪. ೧೬ ವ)

**ದಶಾಂಗ** – ಹತ್ತು ಪದಾರ್ಥಗಳು (ಮದ್ಯ ವಿಭೂಷಣ ವಸ್ತ್ರ ಆತೋದ್ಯ ಸ್ರಗ್ಭವನ ಭಾಜನ ಅಶನ ದೀಪ ಪ್ರೋದ್ಯಜ್ಜ್ಯೋತಿಸ್ಥಿತಿಯೊಳಂ ಉದ್ದ್ಯೋತಿಸೆ ತುದಿಯೊಳ್ ಅಂಗಮಿಂತು ದಶಾಂಗಂ: **ಆದಿಪು**, ೪. ೩೧)

**ದಶಾಂಗಕಲ್ಪಕುಜ** – ಭೋಗಭೂಮಿಯ ಮದ್ಯ, ಭೂಷಣ, ವಸ್ತ್ರ, ಆತೋದ್ಯ, ಸ್ರಗ್ಭವನ, ಭಾಜನ, ಅಶನ, ದೀಪ, ಪ್ರೋದ್ಯತ್, ಜ್ಯೋತಿಸ್ಥಿತಿ ಎಂಬ ಹತ್ತುಕಲ್ಪವೃಕ್ಷಗಳು (ಇದು ಶಾಲ್ಮಲೀಪಾದಪಂ ಇಂತಿದು ಜಂಬೂವೃಕ್ಷಂ ಇದುವೆ ಕುರುಭೂಮಿ ಗಳೊಪ್ಪಿದುವು ಅರ್ಧಚಂದ್ರನಾಕಾರದಿಂ ಉಚಿತದಶಾಂಗಕಲ್ಪಕುಜನಿಳಯಂಗಳ್; **ಆದಿಪು**, ೨. ೨೬)

**ದಶಾಂಗಕಲ್ಪತರು** – ದಶಾಂಗಕಲ್ಪಕುಜ (ಕುಸುಮ ಸ್ರಗ್ವನಾನ್ನಪಾನ ವಿವಿಧಾತೋದ್ಯಪ್ರಕಾಶ ... ವಿಭೂಷಾನೀಕಮಂ ಕೊಟ್ಟು ಸಂತಸಮಂ ಮಾಡೆ ದಶಾಂಗಕಲ್ಪತರುಗಳ್ ಸ್ವರ್ಗಕ್ಕೆ ಸಂಸಾರಸಾರಸುಖಕ್ಕಗ್ಗಳಮೆನ್ನದಾ ಪ್ರಥಮಕಾಲ ಶ್ರೀಯನೇವಣ್ಣಿಪೆಂ: **ಪಂಪರಾ**, ೧. ೬೬)

**ದಶಾಂಗಭೋಗ** – ಚಕ್ರವರ್ತಿಗಳಿಗೆ ದೊರಕುವ ದಿವ್ಯನಗರ, ಚತುರ್ದಶರತ್ನಗಳು, ನವನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಎಂಬ ಹತ್ತು ಭೋಗಗಳು (ಈ ಪುರುಷ ರತ್ನಾಕರಂ ದಶಾಂಗಭೋಗದೊಳ್ ಕೂಡಿದಂ: **ಆದಿಪು**, ೬. ೨೪ ವ); ಚಕ್ರವರ್ತಿಯ ಹತ್ತು ಭೋಗಾಂಗಗಳು (ಪುರ ನಿಧಿ ಶಯ್ಯಾ ಆಸನ ರಾಜ್ಯ ರತ್ನ ವಾಹನ ವರೂಥಿನೀ ನಾಟ್ಯಸಭಾ ಪರಿಕರಸಹಿತಂ ಭರತೇಶ್ವರಂಗೆ ಸಮಸಂದುದೀ ದಶಾಂಗಂ ಭೋಗಂ: **ಆದಿಪು**, ೧೫. ೫)

**ದಶಾವತಾರ** – ಆದಿಜಿನನ ಹತ್ತು ಅವತಾರಗಳು: (ಜನ್ಮಗಳು): ಮಹಾಬಲ, ಲಲಿತಾಂಗ, ವಜ್ರಜಂಘ, ವಜ್ರಜಂಘಾರ್ಯ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ, ಅಹಮಿಂದ್ರ ಮತ್ತು ಆದಿನಾಥ (ಭಗವಜ್ಜನ್ಮಾಭಿಷೇಕ ಸಂಬಂಧಿಯಾಗೆ ತನ್ನ ಪೊಸತೆ ಸಮೆದ ಸಮವಕಾರ ರೂಪಕಮುಂ ದಶಾವತಾರರೂಪಗರ್ಭ ಸಂದರ್ಭಂಗಳಪ್ಪ ಶೇಷಾಶೇಷ ರೂಪಕಂಗಳುಮಂ: **ಆದಿಪು**, ೭. ೧೧೫ ವ)

**ದಶಾಶೆ** – ಪೂರ್ವ ಆಗ್ನೇಯ ದಕ್ಷಿಣ ನೈರುತ್ಯ ಪಶ್ಚಿಮ ವಾಯುವ್ಯ ಉತ್ತರ ಈಶಾನ್ಯ ಊರ್ಧ್ವ ಮತ್ತು ಅಧೋ ಎಂಬ ಹತ್ತು ದಿಕ್ಕುಗಳು (ಪೊಸರ್ತೆನಿಸಿರ್ದ ತನ್ನ ಘನಕಾಂತಿಪರಂಪರೆಯಂ ದಶಾಶೆಯೊಳ್ ಪಸರಿಸುತುಂ: **ಧರ್ಮಬಾಹು,** ೪. ೨೭)

**ದಾತೃ** – ದಾನಲಕ್ಷಣಗಳಾದ ದಾತೃ ದೇಯ ಮತ್ತು ಪಾತ್ರಗಳಲ್ಲಿ ಒಂದು (ಶ್ರದ್ಧಾದಿ ಸಪ್ತಗುಣಸಂಪನ್ನಂ ದಾತೃಮಕ್ಕುಂ: **ಚಾವುಂಡಜಯ,** ಪು, ೧೭೭)

**ದಾನ** – ನೀಡುವ ಗುಣ, ಇದರಲ್ಲಿ ನಾಲ್ಕು ಬಗೆ (ಆಹಾರದಾನಂ ಅಭಯದಾನ ಶಾಸ್ತ್ರದಾನ ಭೈಷಜ್ಯದಾನಮೆಂಬಿವು: **ಹರಿವಂಶ,** ೧೦. ೧೦ ವ); ಕೊಡುವುದು, ಇದರಲ್ಲಿ ಕೊಡುವವನು, ಕೊಡುವ ವಸ್ತು, ದಾನ ಸ್ವೀಕರಿಸುವವನು ಮತ್ತು ದಾನದ ಫಲ ಎಂಬ ನಾಲ್ಕು ಭಾಗಗಳು (ಕುಡುವೊಂ ಕುಡುವುದು ಪಾತ್ರಂ ಕುಡೆ ಪಡೆವುದತಿವಿಪುಳಫಲಮೆನಲ್ ನಾಲ್ಕು ತೆಱಂ ಗಡ ದಾನಂ: **ಆದಿಪು,** ೧೦. ೯)

**ದಾನಚತುಷ್ಟಯ** – ಶ್ರಾವಕರ ಷಟ್ಕರ್ಮಗಳಲ್ಲಿ ಒಂದಾದ ದಾನದ ನಾಲ್ಕು ಬಗೆಗಳು: ಸುಪಾತ್ರರಿಗೆ ಕೊಡುವ ಆಹಾರ, ಅಭಯ, ಭೈಷಜ್ಯ ಮತ್ತು ಶಾಸ್ತ್ರ ಎಂಬ ದಾನಗಳು (ರಾಜ್ಯಕ್ಕೆ ಚತುರಂಗಮುಂ ಮಂತ್ರಕ್ಕೆ ಚತುರ್ವಿಧೋಪಾಯ ಮುಮೊಪ್ಪುವಂತಾ ದಾನಕ್ಕೆ ಶಾಸ್ತ್ರಾದಿ ದಾನಚತುಷ್ಟಯುವೊಪ್ಪುಗುಂ: **ಧರ್ಮಾಮೃತ,** ೪. ೩೨ ವ)

**ದಾನತೀರ್ಥಪ್ರವರ್ತಕ** – ಚರಿಗೆಗೆ ಬಂದ ಮುನಿಗೆ ವಿಧಿಪೂರ್ವಕವಾಗಿ ಆಹಾರದಾನವನ್ನು ನೀಡುವವನು; ಶ್ರೇಯಾಂಸನು ಆದಿನಾಥನಿಗೆ ಆಹಾರ ದಾನವಿತ್ತು ಆದಿದಾನತೀರ್ಥಪಪ್ರವರ್ತಕ ಎನ್ನಿಸಿದ (ಆದಿತೀರ್ಥಕರ್ತಾರನಂ ಶ್ರದ್ಧಾದಿ ಸಪ್ತಗುಣಸಂಪನ್ನನುಂ ಪ್ರತಿಗ್ರಹಾದಿನವವಿಧಪುಣ್ಯಪುರಸ್ಸರನುಮಾಗಿ ನಿಜೆಸಿ ಕರ್ಮಭೂಮಿಯ ಮೊದಲೊಳಾದಿದಾನತೀರ್ಥಪ್ರವರ್ತಕಂ: **ಆದಿಪು,** ೧೦. ೧ ವ)

**ದಾನಲಕ್ಷಣ** – ದಾತೃ ದೇಯ ಮತ್ತು ಪಾತ್ರಗಳು (ದಾನಲಕ್ಷಣಮಪ್ಪೊಡೆ ದಾತೃವೆಂದು ದೇಯಮೆಂದು ಪಾತ್ರಮೆಂದು ತ್ರಿವಿಧಮಕ್ಕುಂ: **ಚಾವುಂಡಜಯ,** ಪು, ೧೭೭)

**ದಾನವ್ರತ** – ದಾನವಮಾಡುವ ವ್ರತ; ನಾಲ್ಕು ಶಿಕ್ಷಾವ್ರತಗಳಲ್ಲಿ ಒಂದು (ತೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತವಿದು ನಾಲ್ಕು ತೆಱಂ: **ಶಾಂತಿಪು,** ೧. ೯೦)

**ದಾನಾನುಮೋದ** – ದಾನ ನೀಡಲು ಒಪ್ಪಿಗೆ (ಪೇಟೀನಂ ಸುಖಮಂ ಮಾಡದೊ ದಾನದ ದಾನಾನುಮೋದದ ಅನುಪಮಪುಣ್ಯಂ: **ಆದಿಪು,** ೫. ೪೪)

**ದಾರ್ಶನಿಕ** – ದರುಶನಿಕ (ತತ್ಸಮ್ಯಕ್ತ್ವಂಬೆರಸು ಮಹೋತ್ಸವದಿಂ ಬೆಸನಮೇೞುವಂ ಬಿಸುಟು ನಿರ್ಮತ್ಸರದಿಂ ಸದ್ಗುಣದೊಳ್ ವಾತ್ಸಲ್ಯಮನುಂಟುಮಾಡಿ ಕರಮಾದರದಿಂ ಕ್ರೂರತೆಯಿಂ ಪ್ರಾಣಿಗಳಂ ಧಾರಿಣಿಯೊಳ್ಕೊಲ್ಲವೆಂತುಮುಗ್ರತೆಯಿಂ

ನಿಷ್ಕಾರಣಮಾರಯ್ಯದೆ ಕೊಂದೆಂದೆನೆಂದು ಮನದೊಳ್ನೋವಂ: ವ್ರತಮಂ ಕೊಳದಿರ್ದೊಡಮವ್ರತಿಯಾಗಂ ಕ್ಷಿತಿಯೊಳೆಸೆವ ಕುಲಬಲ ಸಂಪತ್ತ್ರಿ ಯೊಳಮಿರ್ದು ಸಜ್ಜನಮತದೊಳ್ದಾರ್ಶನಿಕನೆಂಬನೊಂದನೆಯಾತಂ: **ಧರ್ಮಾಮೃತ,** ೫, ೮೫–೮೭)

**ದಿಕ್ಕನ್ಯೆ** – ರುಚಕಾಚಳದ ಉತ್ತರದ ಶಿಖರಗಳ ದೇವಿಯರು (ತದ್ಗಿರೀಂದ್ರೋತ್ತರ ಕಕುದ್ದೇಶದ ... ಎಂಟು ಕೂಟಂಗಳೊಳಿರ್ಪ ಲಂಬೂಷೆ ಚಿತ್ರರೇಖೆ ಪುಂಡರೀಕಿಣಿ ವಾರುಣಿ ಆದರ್ಶೆ ಶ್ರೀ ಹ್ರೀ ಧೃತಿ ಎಂಬ ಎಣ್ಬರುಂ ದಿಕ್ಕನ್ಯೆಯರಂ: **ಆದಿಪು,** ೭. ೩ ವ)

**ದಿಕ್ಕುಮಾರಿಕಾ ಮಹತ್ತರಿಕೆ** – ಜಿನಜನನಿಯ ಗರ್ಭಶೋಧನಕ್ಕೆ ನಿಯೋಜಿತರಾದ ದೇವತೆಯರು (ವೈಡೂರ್ಯ ರುಚಕ ಮಣಿಪ್ರಭ ರುಚಿಕೋತ್ತರಂಗಳೆಂಬ ವಿಕಟಕೂಟಾಧೀಶೆಯರಪ್ಪ ರುಚಿಕೆ ರುಚಿಕಾಸ್ಯೆ ರುಚಿಕಾಂತೆ ರುಚಕಪ್ರಭೆಯೆಂಬ ನಾಲ್ವರುಂ ದಿಕ್ಕುಮಾರಿಕಾ ಮಹತ್ತರಿಕೆಯರುಮಂ: **ಆದಿಪು,** ೭. ೩ ವ)

**ದಿಕ್ಸ್ವಸ್ತಿಕ** – ಒಂದು ಸಭಾಮಂಟಪ (ದಿಕ್ಸ್ವಸ್ತಿಕವೆಂಬ ಸಭಾಭವನದಿಂ ನಂದ್ಯಾವರ್ತಪ್ರಕಾಶಮೆಂಬ ಶಿಬಿರನಿವೇಶಂಗಳಿಂದಂ: **ಶಾಂತಿಪು,** ೧೧.೮೪ ವ)

**ದಿಗಂಗನೆ** – ಕೂಟಾಷ್ಟಕದಲ್ಲಿ ರಮಿಸುವ ಎಂಟು ಮಂದಿ ದೇವಿಯರು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆ ಎಂಬ ಎಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ದಿಗ್ವನಿತೆ** – ದಿಗಂಗನೆಯರು, ಎಂಟು ಮಂದಿ: ವಿಜಯೆ ವೈಜಯಂತೆ ಜಯಂತೆ ಅಪರಾಜಿತೆ ನಂದೆ ನಂದೋತ್ತರೆ ಆನಂದೆ ನಂದಿವರ್ಧನೆ (ಎಂಟುಂ ಕೂಟಂಗಳೊಳ್ ರಮಿಯಿಸುವ ... ಎಣ್ಬರುಂ ದಿಗ್ವನಿತೆಯರುಂ: **ಆದಿಪು,** ೭. ೩ ವ)

**ದಿಗ್ವಸನ** – ದಿಗಂಬರ (ವಾಸವಂ ನಿಜರಾಜ್ಯಪದಮನಿತ್ತು ಪೋಗಿ ಸಾಗರಸೇನರೆಂಬ ದಿಗ್ವಸನರಂ ಸಾರ್ದು ದಿಗಂಬರನಾದಂ: **ಕರ್ಣನೇಮಿ,** ೧೪. ೨೪ ವ)

**ದಿಗ್ವಾಸ** – [ದಿಕ್+ವಾಸ] ದಿಕ್ಕನ್ನೇ ಬಟ್ಟೆಯಾಗುಳ್ಳವನು, ದಿಗಂಬರ (ಸೀಮಂಧರಜಿನೇಶ ಪದಕುಶೇಶಯ ಅಭ್ಯಸನದೊಳ್ ದಿಗ್ವಾಸನಾಗಿ ಷೋಡಶಭಾವನೆಗಳಂ ಭಾವಿಸಿ: **ಆದಿಪು,** ೩. ೭೮ ವ)

**ದಿಗ್ವಿಜಯ** – ಒಂದು ಗರ್ಭಾನ್ವಯಕ್ರಿಯೆ, ಎಲ್ಲ ದಿಕ್ಕುಗಳ ರಾಜರುಗಳನ್ನೂ ಗೆಲ್ಲುವುದು (ದಿಗ್ವಿಜಯ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ದಿಗ್ವಿಜಯಕ್ರಿಯೆ** – ಚಕ್ರರತ್ನವನ್ನು ಮುಂದಿಟ್ಟುಕೊಂಡು ಷಟ್ಖಂಡವನ್ನೂ ವಶಕ್ಕೆ ಪಡೆಯುವುದು (ಚಕ್ರರತ್ನಮಂ ಮುಂದಿಟ್ಟು ಷಟ್ಖಂಡಮಂ ಬಾಯ್ಕೇಟಿಸುವುದು ದಿಗ್ವಿಜಯಕ್ರಿಯೆ: **ಚಾವುಂಡಜಯ,** ಪು. ೧೮೬)

**ದಿವಸ** – ಒಂದು ಹಗಲು ಮತ್ತು ಒಂದು ರಾತ್ರಿಯಷ್ಟು ಅವಧಿಯ ಕಾಲಪರಿಮಾಣ, ಮೂವತ್ತು ಮುಹೂರ್ತಗಳು ಸೇರಿದರೆ ಒಂದು ದಿವಸ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು**, ೬. ೬೮ ವ)

**ದಿವಿಜವಿಮಾನ** – ಸ್ವರ್ಗದ ಒಂದು ವಿಭಾಗ; ದೇವತೆಗಳು ವಾಸಿಸುವ ಒಂದೊಂದು ಜಿನಮಂದಿರವಿರುವ ಇಂದ್ರಕ, ಶ್ರೇಣಿಬದ್ಧ, ಪ್ರಕೀರ್ಣಕಗಳೆಂಬ ಮೂರು ಪ್ರಕಾರದ ಎಂಬತ್ತನಾಲ್ಕುಲಕ್ಷ ಐವತ್ತೇಳು ಸಾವಿರದ ಮೂವತ್ತಮೂರು ಸ್ಥಾನಗಳು: (ದಿವಿಜವಿಮಾನಂ ಮಾಡದವಿವು ಮಾಡಿದುವೆಂಬ ಭೇದಮಲ್ಲದೆ ಚೆಲ್ವಿಂ ನವರತ್ನರಚನೆಯಿಂ ಭೇದವಿಲ್ಲ ತತ್ಪುರದ ಭವನಮೆನಿತನಿತಱೊಳಂ: **ಪಂಪರಾ**, ೧. ೧೨೩)

**ದಿವ್ಯಜಾತಿ** – ಪಾರಿವ್ರಾಜ್ಯ ಲಕ್ಷಣಗಳನ್ನು ತಿಳಿಸುವ ಜಾತಿ ಎಂಬ ಸೂತ್ರಪದದ ದಿವ್ಯಜಾತಿ ವಿಜಯಜಾತಿ ಪರಮಜಾತಿ ಅನುಪಮಜಾತಿ ಎಂಬ ನಾಲ್ಕು ವಿಭಾಗಗಳಲ್ಲಿ ಒಂದು, ಇಂದ್ರತ್ವ ಅಹಮಿಂದ್ರತ್ವವನ್ನು ಸಿದ್ಧಿಸುವಂಥದು (ಅಲ್ಲಿ ದಿವ್ಯಜಾತಿಯಿಂದ್ರತ್ವಮುಂ ಅಹಮಿಂದ್ರತ್ವಮುಂ ... ಪಡೆಯುಲಕ್ಕುಂ: **ಚಾವುಂಡಜಯ**, ಪು. ೧೯೪)

**ದಿವ್ಯಧ್ವನಿ** – ಸಮವಸರಣಸಮಯದಲ್ಲಿ ಅರ್ಹಂತನಿಗೆ ಪ್ರಾಪ್ತವಾಗುವ ಅಸಾಧಾರಣ ಶಕ್ತಿಯ ಧ್ವನಿ (ಆ ತ್ರಿಲೋಕತಿಲಕಂಗೆ ದಿವ್ಯಧ್ವನಿ ನೆಗಟ್ಟುದು ಈ ಕುಲತಿಲಕಂಗೆ ದಿಗ್ವಿಜಯದುಂದುಭಿಧ್ವನಿ ನೆಗಟ್ಟುದು: **ಆದಿಪು**, ೬. ೨೪ ವ); ಅರ್ಧಮಾಗಧಿ ಯಲ್ಲಿದ್ದರೂ ಬರಬರುತ್ತ ಅನೇಕಭಾಷಾಮಯಿಯಾಗುವ ಅರ್ಹಂತನ ಉಪದೇಶ (ಆ ದಿವ್ಯಧ್ವನಿಯರ್ಧಮಾಗಧೀಭಾಷೆಯೆಂಬ ಪೆಸರಿಂದೇಕರೂಪಮಾಗಿ ಪುಟ್ಟಿದೊಡಮನೇಕಭಾಷಾಮಯಮುಮಾಗಿ ಪರಿಣಮಿಸುವುದದೆಂತೆನೆ: ಮಳೆವನಿಯೊಂದೇ ಪರಿಯಿಂದಿಳೆಯೊಳ್ ಬಿಳ್ತಂದು ಮತ್ತೆ ಭೂಮಿಯ ಗುಣದಿಂ ಪಲವಂದಮಾಗಿ ತೋರ್ಪಂತೊಳಕೊಂಡುದನೇಕ ಜಾತಿಭಾಷೆಯ ತೆಱನಂ: **ಧರ್ಮಬಾಹು**; ೧೬, ೨೫೨ ವ ಮತ್ತು ೨೫೦)

**ದಿವ್ಯಾವಧಿ** – ಶ್ರೇಷ್ಠವಾದ ಅವಧಿಜ್ಞಾನ (ಆಗಳಾ ದಿವ್ಯಾವಧಿಜ್ಞಾನಿಗಳಂ ನಿಧಾನಮಂ ಕಾಣ್ಬಂತೆ ಭೋಂಕನೆ ಕಂಡು: **ಸುಕುಮಾಚ**, ೩. ೮ ವ)

**ದಿವ್ಯಾವಧಿಬೋಧ** – ದಿವ್ಯಾವಧಿ (ನಿರ್ವ್ಯಾಜಮೀತನೆಂದಾ ದಿವ್ಯಾವಧಿಬೋಧರಱಿಂದು ತಪಮಂ ಕೊಟ್ಟರ್: **ಸುಕುಮಾಚ**, ೩. ೩೫)

**ದಿಶಾರಮಣರು** – ಹತ್ತು ಮಂದಿ ದಿಕ್ಪಾಲಕರು (ಸುರೇಶ ಹುತಾಶ ಕೀನಾಶ ನಿರುತಿ ವರುಣ ಸಮೀರಣ ವೈಶ್ರವಣ ಫಣಿಭೂಷಣ ಫಣಿರಮಣ ತಾರಾರಮಣರೆಂಬ ದಿಶಾರಮಣರಂ ಬೇಗದಿಂ ಬರಿಸಿ: **ಆಚವರ್ಧ**, ೧೪, ೨೦ ವ)

**ದೀಕ್ಷಾದ್ಯ** – ಒಂದು ಗರ್ಭಾನ್ವಯಕ್ರಿಯೆ, ಸನ್ಯಾಸ ಸ್ವೀಕಾರ (ದೀಕ್ಷಾದ್ಯ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ದೀಕ್ಷಾನ್ವಯಕ್ರಿಯೆ** – ಜೈನ ದೀಕ್ಷೆ ಕೊಡುವ ಕ್ರಿಯೆ, ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯ ಉಪಯೋಗತ್ವಮೆಂಬ ಎಂಟುಂಬೆರಸು ... ನಾಲ್ವತ್ತೆಂಟು ದೀಕ್ಷಾನ್ವಯ ಕ್ರಿಯೆಗಳುಮಂ: **ಆದಿಪು** ೧೫.. ೧೬ ವ); ಇದರಲ್ಲಿ ದಶವಿಧ (ದೀಕ್ಷಾನ್ವಯಕ್ರಿಯೆಯೊಳವತಾರಮೆಂಬುದು ತನ್ನನಾಶ್ರಯಿಸಿದ ಭವ್ಯಜನಕ್ಕೆ ವೇದ ಪುರಾಣಮುಂ ಧರ್ಮಶಾಸ್ತ್ರಮುಂ ಚಾರಿತ್ರಮುಂ ಕ್ರಿಯಾವಿಧಿಯುಂ ಯಂತ್ರ ದೇವತೆಯುಂ ಲಿಂಗಮುಂ ಆಹಾರಾದಿ ಶುದ್ಧಿಯುಮಹಿಂಸಾಶುದ್ಧಿಯುಮೆಂಬ ದಶವಿಧ: **ಚಾವುಂಡಜಯ,** ಪು. ೧೮೭)

**ದೀಕ್ಷಾಬ್ರಹ್ಮಚಾರಿ** – ಬ್ರಹ್ಮಚಾರಿಗಳ ಐದು ಪ್ರಭೇದಗಳಲ್ಲಿ ಒಂದು, ಬ್ರಹ್ಮಚರ್ಯಾ ದೀಕ್ಷೆಯನ್ನು ಪಡೆದವನು (ದೀಕ್ಷಾಬ್ರಹ್ಮಚಾರಿಯೆಂಬೊಂ ವೇಷಮೊಂದು ಮಿಲ್ಲದಾಗಮಾಭ್ಯಾಸಂಗೆಯ್ದು ಗೃಹಾವಾಸದೊಳ್ನಿಲ್ವೊಂ: **ಚಾವುಂಡಜಯ:** ಪು. ೧೯೩)

**ದೀಕ್ಷೆ** – ಐವತ್ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಸನ್ಯಾಸದೀಕ್ಷೆ (ಬೇಡಿದೊಡೆ ಒಳ್ಳಿತಪ್ಪ ಮುಹೂರ್ತದೊಳೆ ದೀಕ್ಷೆಯಂ ಕೊಟ್ಟು: **ವಡ್ಡಾರಾ,** ಪು. ೬. ಸಾ. ೧)

**ದೀಕ್ಷೆಗುಡು** – ಸನ್ಯಾಸದೀಕ್ಷೆಯನ್ನು ನೀಡು (ಕರಮೊಳ್ಳಿದನಿವನೆಂದೊರ್ವರ ಶಿಷ್ಯನ ನೂಱು ತೋಱಿ ನುಡಿದೊಯ್ಯನೆ ಮಾಣ್ದಿರದೊಯ್ದು ದೀಕ್ಷೆಗುಡುವಂ: **ಧರ್ಮಾಮೃತ:** ೫. ೭೩)

**ದೀಕ್ಷೋಪವಾಸ** – ಯಾವುದಾದರೂ ವ್ರತಾಚರಣೆಗಾಗಿ ದೀಕ್ಷೆ ತೊಟ್ಟು ಮಾಡುವ ಉಪವಾಸ (ಆ ಮುನಿಪೋತ್ತಮಂ ತ್ರಿರಾತ್ರಂ ದೀಕ್ಷೋಪವಾಸಂಗೆಯ್ದು ಲಬ್ಧಸಪ್ತರ್ಷಿಭೂಷಣಂ ಮನಃಪರ್ಯಯಜ್ಞಾನಪ್ರತಿಬಿಂಬದರ್ಪಣನಾಗಿ ಚರ್ಯಮಾರ್ಗಮನಱಿಪಲೆಂದು ಅನಗಾರವೇಳೆಯೊಳ್ ಮಂದಿರಾಜಾಭಿ ಧಾನಪುರಕ್ಕೆ ಚರಿಗೆಗೆ ವರೆ: **ಶಾಂತಿಪು,** ೧೧. ೧೦೬ ವ

**ದೀಪಾಂಗ** – ದೀಪಗಳನ್ನು ನೀಡುವ ಒಂದು ಕಲ್ಪವೃಕ್ಷ, (ಸೊಗಯಿಸುವುವು ದೀಪಾಂಗ ಜ್ಯೋತಿರಂಗ ಕಲ್ಪಕುಜಂಗಳ್: **ಆದಿಪು,** ೫. ೪೦) ನೋಡಿ, **ಕಲ್ಪವೃಕ**

**ದೀಪಾಂಗಕುಜ** – ದೀಪಾಂಗ (ತಳದಳಿಸಿ ತೊಳಗಿ ಬೆಳಗುವ ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ತಳೆದೆಸೆದ ತಾಣದೀವಿಗೆಗಳನವರ್ಗೀಗುಂ ಪ್ರದೀಪ ದೀಪಾಂಗಕುಜಂ: **ಶಾಂತಿಪು,** ೬. ೧೧)

**ದೀಪಾಂಗವೃಕ್ಷ** – ದೀಪಾಂಗ (ವಸ್ತ್ರಾಂಗವಿಭೂಷಣಾಂಗ ವಿಕಸನ್ಮಾಲ್ಯಾಂಗ ದೀಪಾಂಗವೃಕ್ಷದ ದಿವ್ಯಾಂಬರದಿಂದಲಂಕರಣದಿಂ ಪೂಮಾಲೆಯಿಂದ ... ಪೂಜಿಸಿದನಿಂದ್ರಂ ತತ್ಪತಿದ್ವಂದ್ವಮಂ: **ಪುಷ್ಪದಂಪು,** ೧೨. ೧೩)

**ದೀಪ್ತತಪ** – ತಪಸ್ಸಿನಿಂದ ಯೋಗಿಗೆ ಉಂಟಾಗುವ ದೇಹಕಾಂತಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ**, ಪು ೬೯, ಸಾ ೩)

**ದುಃಖ** – ಐದು ಬಗೆಯ ಕ್ಲೇಶಗಳು: ದೇಹ, ಮನಸ್ಸು, ಸ್ಥಲಗಳಿಂದಾಗುವ, ಪರಸ್ಪರರಿಂದ ಉಂಟಾಗುವ ಹಾಗೂ ರಾಕ್ಷಸರಿಂದಾಗುವಂಥವು (ಅಂತು ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂ ಅಯ್ದುಂ ತೆಱದ ದುಃಖಂಗಳೊಳ್ ಒಳರ್ದು: **ಆದಿಪು**, ೫. ೮೮ ವ)

**ದುಃಪಕ್ವಾನ್ನ** – ಐದು ಭೋಗೋಪಭೋಗ ಅತಿಚಾರಗಳಲ್ಲಿ ಬೇಯದ ಆಹಾರ ತಿನ್ನಬೇಕೆಂಬ ಒಂದು ನಿಯಮ (ಕ್ರಮದಿಂ ಸಚಿತ್ತಸಂಬಂಧಮಂತೆ ಸಮ್ಮಿಶ್ರಮಭಿಷವಂ ದುಃಪಕ್ವಾನ್ನಮಿವಯ್ದನ್ನಂಗಳತಿಕ್ರಮಂ ಆ ಭೋಗೋಪಭೋಗಪರಿಮಿತ ಗತಿಯೊಳ್: **ಸುಕುಮಾಚ**, ೬. ೨೪)

**ದುರ್ಭಗ** – ಇತರರ ಮನಸ್ಸಿನಲ್ಲಿ ಅಸಹ್ಯವನ್ನು ಉಂಟುಮಾಡುವ ಸ್ಥಿತಿ, ಎಪ್ಪತ್ತೆರಡು ಬಗೆಯ ನಾಮಪ್ರಕೃತಿಗಳಲ್ಲಿ ಒಂದು (ಸ್ಥಿರಾಸ್ಥಿರ ಶುಭಾಶುಭ ಸುಸ್ವರ ದುಸ್ವರ ಸುಭಗ ದುರ್ಭಗ ಪ್ರತ್ಯೇಕಶರೀರ ಅಯಶಸ್ಕೀರ್ತಿರನಾದೇಯ ನಿರ್ಮಾಣ ಪರ್ಯಾಪ್ತನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ: **ಆದಿಪು**, ೧೬. ೪೯ ವ)

**ದುಶ್ಚರ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು (ದುಶ್ಚರಮೆಂಬುದು ಬಾಲ ವೃದ್ಧ ರೋಗಾರ್ತಾದಿ ಕಾಪುರುಷರಿನೊಂದು ದಿವಸಮಪ್ಪೊಡಂ ನೆಗಟಲಕ್ಕಮಪ್ಪ ಧರ್ಮಂ: **ಚಾವುಂಡಜಯ**, ಪು.. ೮)

**ದುಷ್ಷಮ** – ಕೆಟ್ಟ ಕಾಲ (ಉತ್ಸರ್ಪಿಣಿಯವಸರ್ಪಿಣಿ ನಾಮಮಂ ಪಡೆದುದದೊಂದು ಪತ್ತುಕೋಟಿಕೋಟಿಸಾಗರೋಪಮಸಂಖ್ಯೆಯಂ ತಾಳ್ದಿ ಸುಷಮಸುಷಮಂ ಸುಷಮಂ ಸುಷಮದುಷ್ಷಮಂ ದುಷ್ಷಮಸುಷಮಂ ದುಷ್ಷಮಂ ಅತಿದುಷ್ಷಮಂ ಎಂದು ಒಂದೊಂದುಂ ಷಡ್ಭೇದಭಿನ್ನಮಾದುವು; **ಆದಿಪು**, ೬. ೪೮ ವ)

**ದುಷ್ಷಮಕಾಲ** – ಕೆಟ್ಟ ಕಾಲ (ಎಸೆಯದು ದುಷ್ಷಮಕಾಲದೊಳ್ ಅಸದೃಶ ಕೈವಲ್ಯಬೋಧದಿನಕರಬಿಂಬಂ: **ಆದಿಪು**, ೧೫. ೩೦)

**ದುಷ್ಷಮಯತಿ** – ದುಷ್ಷಮವೆಂಬ ಐದನೆಯ ಕಾಲದಲ್ಲಿ ಅಥವಾ ಕೆಟ್ಟ ಕಾಲದಲ್ಲಿ ಹುಟ್ಟಿದ ಯತಿಗಳು (ಅಧಿಕಬಲಮುನಿಪಧೃತಾತುಳಗುಣಭಾರಮಂ ಆಂಪನಿತು ಅಳವಿಲ್ಲದೆ ಕಿಡುವರಲ್ತೆ ದುಷ್ಷಮಯತಿಗಳ್: **ಆದಿಪು**, ೧೫. ೩೧)

**ದುಷ್ಷಮಸುಷಮ** – ಅವಸರ್ಪಿಣಿಕಾಲದ ಒಂದು ಭಾಗ (ಸುಷಮದುಷ್ಷಮಕಾಲಂ ಚರಿಯಿಸುಗುಂ ನಾಲ್ಕನೆಯದು ಪರಿವಿಡಿಯಿಂದಪ್ಪುದಲ್ತೆ ದುಷ್ಷಮಸುಷಮಂ: **ಪಂಪರಾ**, ೧. ೫೬)

**ದುಸ್ವರ** – ದುಷ್ಟಸ್ವರಕ್ಕೆ ಕಾರಣವಾದ [ಎಪ್ಪತ್ತೆರಡು ಬಗೆಯ] ನಾಮಕರ್ಮಪ್ರಕೃತಿಗಳಲ್ಲಿ ಒಂದು (ಸುಸ್ವರ ದುಸ್ವರ ಸುಭಗ ದುರ್ಭಗ ... ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೪೪ ವ)

**ದೂರಭವ್ಯ** – ಸಮ್ಯಕ್ತ್ವಕ್ಕೆ ಇನ್ನೂ ದೂರವಿರುವವನು (ವಾಯುಭೂತಿಚರನಪ್ಪಾ ಜೀವಂ ಈಗಳ್ ಅಭವ್ಯನೋ ಭವ್ಯನೋ ಮತ್ತಂ ದೂರಭವ್ಯನೋ ಬೆಸಸಿಮಿದಂ: **ಸುಕುಮಾಚ,** ೫. ೨೨)

**ದೃಢಚರ್ಯ** – ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯೆ ಉಪಯೋಗತ್ವಮೆಂಬ ಎಂಟುಂಬೆರಸು ... ನಾಲ್ವತ್ತೆಂಟು ದೀಕ್ಷಾನ್ವಯ ಕ್ರಿಯೆಗಳುಮಂ: **ಆದಿಪು** ೧೫.. ೧೬ ವ)

**ದೃಷ್ಟಿಮೋಹ** – ಸಮ್ಯಗ್ದರ್ಶನವನ್ನು ಹಾಳುಮಾಡುವ ಕರ್ಮ (ಘನ ಮಿಥ್ಯಾತ್ವ ದವಾನಳಪಿನದ್ಧಜೀವಕ್ಕೆ ದೃಷ್ಟಿಮೋಹನಪ್ರವಿನಾಶನಮಿಲ್ಲದಂದು ಪುಟ್ಟದು ಮನದೊಳ್ ಸ್ವಮೋರ್ಕ್ಷಸಾಧನಂ ಸಮ್ಯಕ್ತ್ವಂ: **ಆದಿಪು,** ೫. ೫೨)

**ದೆಸೆವೆಣ್ಗಳ್** – ರುಚಕಾಚಳದ ಪೂರ್ವದಿಸೆಯ ದಿಗಂಗನೆಯರು (ಮೂಡಣದೆಸೆಯ ಕೂಟಂಗಳೊಳಿರ್ಪ ವೈಡೂರ್ಯದ ವಿಜಯೆಯುಂ ಕಾಂಚನದ ವೈಜಯಂತಿಯುಂ ಕನಕದ ಜಯಂತಿಯುಮಮರಿಷ್ಟದಪರಾಜಿತೆಯುಂ ದಿಕ್ಸ್ವಸ್ತಿಕದ ನಂದೆಯುಂ ನಂದನದ ನಂದೋತ್ತರಿಯುಮಂಜನ ಮೂಳಕದ ನಂದಿವರ್ಧನೆಯುಮೆಂಬ ದಿಗ್ದೇವಿಯರೆಣ್ಬರುಮಂ: **ಚಂದ್ರಪ್ರಪು,** ೧೧. ೧೨೧ ವ)

**ದೇಯ** – ದಾನಲಕ್ಷಣಗಳಲ್ಲಿ ಒಂದು, ಕೊಡಬಹುದಾದ ಉಪಯುಕ್ತ ವಸ್ತು (ಆಹಾರಾಭಯ ಭೈಷಜ್ಯ ಶಾಸ್ತ್ರ ವಸತಿ ಸಂಯಮೋಪಕರಣಾದಿಗಳುಪ ಯೋಗ್ಯವಸ್ತು ದೇಯಮಕ್ಕುಂ: **ಚಾವುಂಡಜಯ,** ಪು, ೧೭೭)

**ದೇವಕುರು** – ಮೇರುಪರ್ವತದ ದಕ್ಷಿಣದಲ್ಲಿರುವ ಒಂದು ಭೋಗಭೂಮಿ (ಪುರಂ ವಿರಾಜಿಪುದು ದೇವಕುರುಪ್ರತಿಮಾನವೆಂಬಿನಂ: **ಚಂದ್ರಪ್ರಪು,** ೧೧. ೭೨)

**ದೇವಕೃತ** – ಮೂವತ್ತನಾಲ್ಕು ಅತಿಶಯಗಳಲ್ಲಿ ಒಂದು (ದೇವಕೃತಂಗಳುಮಂ ಸ್ವಾಭಾವಿಕಮುಮಂ ಅಜಿತ ನೀನೆ ತಾಳ್ದಿದೆ: **ಅಜಿತಪು,** ಲ. ೧೨)

**ದೇವತಾಮೂಢ** – ಮೂಢತ್ರಯಗಳಲ್ಲಿ ಒಂದು; ಸಲ್ಲದವನನ್ನು ಪೂಜಿಸುವುದು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ದೇವಾರಣ್ಯ** – ಮೇರುಗಿರಿಯ ತಪ್ಪಲಿನ ಭದ್ರಸಾಲವನ (ದೇವಾರಣ್ಯಂ ದೇವರ ದೇವನ ಮನಕಿಂಬನೀಯೆ ತನ್ನಂದನದೊಳ್: **ಶಾಂತಿಪು,** ಲ. ೧೨೨)

**ದೇವೋತ್ತರಕುರು** – ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿ ಮತ್ತು ನಿಷಧಕ್ಕೆ ಉತ್ತರದಲ್ಲಿ ಇರುವ ಭೋಗಭೂಮಿ (ದೇವೋತ್ತರಕುರುಗಳೆ ನಾನಾವಿಧ

ಕಲ್ಪಾಂಘ್ರಿಪಂಗಳಿಂದಂ ಪತಿಯಂ ತೀವಿ ಬಳಸಿರ್ದುವೆನೆ ಕಲ್ಪಾವನಿರುಹ ಭೂಮಿಭಾಗಂ ಅತಿರಮಣೀಯಂ: **ಆದಿಪು,** ೧೦. ೩೪)

**ದೇಶನಿವೇಶೋಪದೇಶ** – ಜೈನಪುರಾಣಗಳ ಎಂಟು ಅಂಗಗಳಲ್ಲಿ ಒಂದು, ದೇಶದ ವಿನ್ಯಾಸ, ವಿಸ್ತೀರ್ಣ, ರೀತಿ ಮುಂತಾದವನ್ನು ತಿಳಿಸುವುದು (ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಾಮಣಿಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವ್ಯಾವರ್ಣನಮುಂ ತತ್ಫಲಪ್ರಾಪ್ತಿಪ್ರಕಟಮುಂ ಎಂದಿಂತು ಅವಯವಂಗಳ್ ಎಂಟಕ್ಕುಂ: **ಆದಿಪು,** ೧. ೪೨ವ)

**ದೇಶವಿರತ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಹತ್ತನೆಯ ವರ್ಗಕ್ಕೆ ಸೇರಿದವನು (ತನಗೆಂದು ಮಾಡಿಸುತ್ತಂ ತನಗೆಲ್ಲಂ ತನ್ನನಜೆಪಿ ಮಾಡಿದುದಂ ಕೊಳ್ಳೆನೆನಿಪ್ಪ ನಾತಮಮುಮೋದದನವಿರತಂ ದೇಶವಿರತರೊಳ್ಪತ್ತನೆಯವಂ: ಸುಕುಮಾಚ, ೬. ೩೫); ಮೂರು ಬಗೆಯ ಗುಣವ್ರತಗಳಲ್ಲಿ ಒಂದು; ಜೀವನ ಪರ್ಯಂತ ನಿಗದಿತ ಅವಧಿಯಲ್ಲಿ ನಿರ್ದಿಷ್ಟ ಪ್ರದೇಶಗಳ ಹೊರಗೆ ಸಂಚರಿಸದಿರುವ ವ್ರತ ತೊಟ್ಟವನು (ಗುಣಸ್ಥಾನಂ ಪರಿಕಿಪೊಡೆ ಏಟಲ್ತೆ ದೇಶವಿರತನನಿಂ ಅವಜೊಳ್: **ಅನಂತಪು,** ೩. ೫೭)

**ದೇಶಾವಧಿ** – ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು; ದೇಶಕಾಲ ಭಾವಗಳಿಗೆ ಸಂಬಂಧಿಸಿದಂತೆ ಸೀಮಿತ ಪದಾರ್ಥಗಳ ಜ್ಞಾನ (ದೇವೇಂದ್ರನುಮಾಗಳ್ ದೇಶಾವಧಿಯಿಂ ಚಿತ್ರದೊಳ್ ಪ್ರಯೋಗಿಸಿ ನಿಜ ಜನ್ಮಾವಳಿ ಸಮೇತಂ ಆತ್ಮೀಯಭಾವನಜಿದಂ ವ್ಯತೀತ ಭವಸಂತತಿಯಂ: **ಶಾಂತಿಪು,** ೫. ೪)

**ದೇಶಾವಧಿಜ್ಞಾನಿ** – ದೇಶಾವಧಿಜ್ಞಾನವನ್ನು ಪಡೆದಿರುವವನು (ದೇಶಾವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥನತಿವಿಶುದ್ಧ ಪರಿಣಾಮದಿಂ ಸರ್ವಾವಧಿ ಜ್ಞಾನಲೋಚನನಾಗಿ ನಿರ್ವಾಣೋರ್ವರಾಂತರ್ಭಾಗದಿಂ ಪೋಜಿಮಟ್ಟು; **ಸುಕುಮಾಚ,** ೪. ೫೪ ವ)

**ದೈವವಿಮೂಢ** – ಮೂಢತ್ರಯಗಳಲ್ಲಿ ಒಂದಾದ ಮಿಥ್ಯಾದೈವವನ್ನು ನಂಬುವವನು (ಅನಲನನರ್ಕಂ ಶಶಿಯನಿಂದ್ರನನಂತಕಂ ಮರಂಗಳಂ ವನಧಿಯನುರ್ವಿಯಂ ಮಡಕೆಯಂ ತೊಜಿಯಂ ಗೃಹಂಗಳಂ ಜನನಿಯನಯ್ಯನಂ ಪಶುವನೆತ್ತುಗಳಂ ಕುಲದೈವಮೆಂದು ಮೆಲ್ಲನೆ ಪೊಡೆವಟ್ಟು ಪೂಜಿಸುವ ಗಾಂಪನೆ ದೈವವಿಮೂಢನುರ್ವಿಯೊಳ್: **ಧರ್ಮಾಮೃತ,** ೫. ೧೫೨)

**ದ್ರವ್ಯ** – ಐದು ಬಗೆಯ ಸಂಸಾರಗಳಲ್ಲಿ ಒಂದು (ದ್ರವ್ಯ ಕ್ಷೇತ್ರ ಕಾಲ ಭವ ಭಾವ ಭೇದದಿಂ ಪಂಚವಿಧಂ ಸಂಸಾರಂ: **ಆದಿಪು,** ೧೦. ೬೩ ವ); ಆರು ತತ್ವಗಳನ್ನುಳ್ಳುದು (ದ್ರವ್ಯಮೆಂಬುದು ಜೀವಾಜೀವಾಸ್ರವ ಸಂವರ ನಿರ್ಜರ ಬಂಧ ಮೋಕ್ಷಮೆಂಬ ತತ್ವಮನುಳ್ಳುದು: **ಚಾವುಂಡಜಯ,** ಪು. ೬); ಷಡ್ದ್ರವ್ಯಗಳಲ್ಲಿ ಒಂದು (ಜೀವಾದಿ ದ್ರವ್ಯಂಗಳ್ ಆಧಾರಭೂತಮಪ್ಪ ಲೋಕವಿಭಾಗಮೆಂತೆಂದೊಡೆ: **ಅಜಿತಪು,** ೧೧. ೨ ವ); ನೋಡಿ, **'ಸಂಸಾರ'** ಮತ್ತು **'ಷಡ್ದ್ರವ್ಯ'**

**ದ್ರವ್ಯಪರಾವರ್ತನ** – ಸಂಸಾರದಲ್ಲಿ ಪರಿಭ್ರಮಣ ಮಾಡುವ ಜೀವಗಳಿಗೆ ಉಂಟಾಗುವುದೆಂದು ಹೇಳಲಾಗುವ ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವಗಳೆಂಬ ಐದು ರೀತಿಯ ಪರಿವರ್ತನೆಗಳಲ್ಲಿ ಒಂದು; ಪುದ್ಗಲ ಅಥವಾ ದ್ರವ್ಯದ ಮೂಲಕ ಆಗುವ ಭ್ರಮಣಕ್ಕೆ ತಗುಲುವ ಕಾಲಾವಧಿ (ಮುನ್ನೆ ಕೊಂಡ ಪುದ್ಗಲಂಗಳಂ ಬಿಸುಟ್ಟು ಪೆಱವುಂ ಸ್ನಿಗ್ಧರೂಕ್ಷಾದಿ ವಿಕಲ್ಪಂಗಳಂ ಜನ್ಮಜನ್ಮಾಂತರಂಗಳೊಳ್ ಕೊಳುತ್ತುಮಿಂತು ಮೂಱುಂ ಲೋಕದೊಳುಳ್ಳ ರೂಪದ್ರವ್ಯಂಗಳೆಲ್ಲಮಂ ನಿರವಶೇಷಮಾಗೆ ಕೈಕೊಳ್ವುದು ದ್ರವ್ಯಪರಾವರ್ತನಮೆಂಬುದು: **ಸುಕುಮಾಚ,** ೬. ೬ ವ)

**ದ್ರವ್ಯರ್ಷಿ** – ಮಿಥ್ಯಾದರ್ಶನವುಳ್ಳ ಮುನಿ, ಹೊರನೋಟದಲ್ಲಿ ಸನ್ಯಾಸಿವೇಷ ಧರಿಸಿದವನು (ಭರತನ ಮಗಂ ಮರೀಚಿಯುಂ ಮೊದಲಾಗೆ ನಾಲ್ಸಾಸಿರ್ವರರಸುಮಕ್ಕಳ್ ಪೋಗಲೊಲ್ಲದೆ ಅರಸನಾದುದನಪ್ಪೆವೆಂದು ಜಾತರೂಪಮಂ ಕೈಕೊಂಡು ದ್ರವ್ಯರ್ಷಿಯಾಗಿರ್ದರ್: **ಚಾವುಂಡಜಯ,** ಪು ೪೧)

**ದ್ರವ್ಯಸಂಸಾರ** – ಪಂಚಸಂಸಾರಗಳಲ್ಲಿ ಒಂದು, ಪರಮಾಣು ಮುಂತಾದ ಎಲ್ಲ ಶರೀರವನ್ನು ಮೊದಲು ಸ್ವೀಕರಿಸಿ ಅನಂತರ ತ್ಯಜಿಸುವುದು (ಕರ್ಮಪರಿವರ್ತನಕ್ಕೆ ಸೂಕ್ಷ್ಮನಿಗೋದದ ಲಬ್ಧಪರಿಯಾಪ್ತನವಿಗ್ರಹ ಪ್ರಥಮಸಮಯಮಂ ಮೊದಲ್ಮಾಟ್ಟುದು ನೋಕರ್ಮಕ್ಕೀ ಪೇಟ್ದ ಅಪಜ್ಜತನ ಶರೀರೋದಯಮಂ ಪ್ರಥಮಸಮಯಮಂ ಮೊದಲ್ಮಾಟ್ಟುದು: **ಚಾವುಂಡಜಯ,** ಪು. ೨೩೦)

**ದ್ರವ್ಯಾನುಯೋಗ** – ಜೀವಾದಿ ಷಡ್ದ್ರವ್ಯಗಳನ್ನೂ ಏಳು ತತ್ವಗಳನ್ನೂ ನಿರೂಪಿಸುವ ಶಾಸ್ತ್ರಭಾಗ, ನಾಲ್ಕು ಅನುಯೋಗಗಳಲ್ಲಿ ಒಂದು (ದ್ರವ್ಯಾನುಯೋಗಮೆಂಬುದು ನಾನಾದೃಷ್ಟಿವಾದ ನಯಪ್ರಮಾಣ ಭಂಗಸೂಚನದಿಂ ಸ್ವಪಕ್ಷಪಾತಸ್ಥಾಪನಮುಂ ಪರಪಕ್ಷದೂಷಣಮುಂಗೆಯ್ವುದು: **ಚಾವುಂಡಜಯ,** ಪು. ೩೨೫); (ದ್ರವ್ಯಾನುಯೋಗಮೆಂಬುದುಂಟು ಅದು ನಿಮ್ಮನ್ನರಪ್ಪ ನಿಶಿತಮತಿಗಳ್ಗೆ ಪಂಚರಾತ್ರಿಯೊಳೆ ಪ್ರತೀತಿಯಕ್ಕುಂ: **ಸುಕುಮಾಚ,** ೩. ೩೭ ವ); ನೋಡಿ, **'ಅನುಯೋಗ'**

**ದ್ವಾತ್ರಿಂಶತ್ತ್ರಿದಶಪತಿ** – ಮೂವತ್ತೆರಡು ಮಂದಿ ವ್ಯಂತರೇಂದ್ರರು; ಕಿನ್ನರಗುಂಪಿನಲ್ಲಿ ಕಿನ್ನರ ಮತ್ತು ಕಿಂಪುರುಷರೆಂಬ ಇಬ್ಬರು ಇಂದ್ರರು; ಕಿಂಪುರುಷರ ಗುಂಪಿನಲ್ಲಿ ಸತ್ಪುರುಷ, ಮಹಾಪುರುಷ; ಮಹೋರಗರ ಗುಂಪಿನಲ್ಲಿ ಅತಿಕಾಯ, ಮಹಾಕಾಯ ಎಂಬ ಇಬ್ಬರು ಇಂದ್ರರು; ಗಂಧರ್ವರ ಗುಂಪಿನಲ್ಲಿ ಗೀತರತಿ, ಗೀತಯಶ ಎಂಬ ಇಬ್ಬರು ಇಂದ್ರರು; ಯಕ್ಷರ ಗುಂಪಿನಲ್ಲಿ ಪೂರ್ಣಭದ್ರ, ಮಣಿಭದ್ರ ಎಂಬ ಇಬ್ಬರು ಇಂದ್ರರು; ರಾಕ್ಷಸರ ಗುಂಪಿನಲ್ಲಿ ಭೀಮ, ಮಹಾಭೀಮ ಎಂಬ ಇಬ್ಬರು ಇಂದ್ರರು; ಪಿಶಾಚಿಗಳ ಗುಂಪಿನಲ್ಲಿ ಕಾಳ, ಮಹಾಕಾಳ ಎಂಬ ಇಬ್ಬರು ಇಂದ್ರರು; ಭೂತಗಳ ಗುಂಪಿನಲ್ಲಿ ಸುರೂಪ, ಪ್ರತಿರೂಪ ಎಂಬ ಇಬ್ಬರು ಇಂದ್ರರು; ಇವರಲ್ಲಿ ದಕ್ಷಿಣೋತ್ತರಭೇದದಿಂದ ಎರಡರಷ್ಟಾಗಿ ಒಟ್ಟು ಮೂವತ್ತೆರಡು ಮಂದಿ ವ್ಯಂತರೇಂದ್ರರಾಗುತ್ತಾರೆ (**ಮಲ್ಲಿನಾಪು,** ೧೪. ೨೬೮)

**ದ್ವಾತ್ರಿಂಶದಿಂದ್ರ** – ದ್ವಾತ್ರಿಂಶತ್ತ್ರಿದಶಪತಿ (ಶೈಲವಿಶಾಲ ಸ್ಫಟಿಸ್ಥಲೀ ನಿಕಟಮಂ ದ್ವಾತ್ರಿಂಶದಿಂದ್ರರ್ಕಳುತ್ಸವದಿಂದರ್ಚಿಸುವಾಗಲೇಂ ಕಱೆದುದೋ ಕರ್ಣಾಮೃತಾ ಸಾರಮಂ ವಿವಿಧಾತೋದ್ಯಲಯಾನುಗಂ ಸುರಸತೀ ಮಂಜೀರಿಕಾಶಿಂಜಿತಂ: **ಪಂಪರಾ,** ೧೬. ೯೬)

**ದ್ವಾತ್ರಿಂಶದೇಕಕಲ್ಯಾಣ** – ಒಂದು ವ್ರತ (ನಿರ್ವೇಗಮಮಂ ಬೋಧಿಸೆ ಸಮ್ಯಗ್ದರ್ಶನಸಮೇತಂ ಸಕಳಶ್ರಾವಕವ್ರತಂಗಳಂ ಕೆಯ್ಕೊಂಡು ಮನೆಗೆ ವಂದು ದ್ವಾತ್ರಿಂಶದೇಶಕಲ್ಯಾಣಂಗಳಂ ನೋನುತಿರ್ಪನ್ನಗಂ: **ಶಾಂತಿಪು,** ೯. ೮೩ ವ)

**ದ್ವಾದಶಕೋಷ್ಠ** – ಸಮವಸರಣದ ಸುತ್ತಲಿನ ಹನ್ನೆರಡು ಪೌಳಿ ಗೋಡೆಗಳು (ಶ್ರೀಮದ್ವಾದಶಕೋಷ್ಠಸ್ತೋಮಂ ದಳವಾಗೆ ವಿಷ್ಟರಂ ಕರ್ಣಿಕೆ ಪೊಂದಾಮರೆಯೊಂದಂದಂದೆ ಲಕ್ಷ್ಮೀಮಂಡಪಮೆಸೆದುದಸಮಗುಣ ಗಂಧಾರ್ಹಂ: **ಪಾರ್ಶ್ವನಾಪು,** ೧೬, ೭೦)

**ದ್ವಾದಶಗಣ** – ಸಮವಸರಣಸಭೆಯಲ್ಲಿ ಸೇರುವ ಹನ್ನೆರಡು ವರ್ಗಗಳು: ಮುನಿ, ಕಲ್ಪಜಸ್ತ್ರೀ, ಆರ್ಯಕೀರ, ಜ್ಯೋತಿಷಸ್ತ್ರೀ, ವ್ಯಂತರಸ್ತ್ರೀ, ನಾಗಸ್ತ್ರೀ, ನಾಗದೇವತೆ, ವ್ಯಂತರದೇವತೆ, ಜ್ಯೋತಿಷ್ಯದೇವತೆ, ಕಲ್ಪವಾಸಿ, ಮನುಷ್ಯ, ತಿರ್ಯಕ್‌ಪ್ರಾಣಿ (ದ್ವಾದಶಗಣಪರಿವೇಷ್ಟಿತಂ ಆದಿಬ್ರಹ್ಮಂ ಜಿನೇಶ್ವರಂ: **ಸಮಯಪ,** ೮. ೧೮೭)

**ದ್ವಾದಶಚಕ್ರವರ್ತಿ** – ತ್ರಿಷಷ್ಟಿಶಲಾಪುರುಷರಲ್ಲಿನ ಹನ್ನೆರಡು ಮಂದಿ ಚಕ್ರವರ್ತಿಗಳು, ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ (**ಚಾವುಂಡಜಯ,** ಪು. ೩೪೮)

**ದ್ವಾದಶತಪ** – ಸಂವರಮಾರ್ಗದ ಹನ್ನೆರಡು ಬಗೆಯ ತಪಸ್ಸುಗಳು: ಅನಶನ [ಉಪವಾಸ], ಅವಮೋದಾರ್ಯ [ಕಡಿಮೆ ತಿನ್ನುವುದು], ವೃತ್ತಿಪರಿಸಂಖ್ಯಾನ [ಊಟಕ್ಕೆ ಹೋಗುವ ಮನೆಗಳ ನಿಯಮಪಾಲನೆ], ರಸಪರಿತ್ಯಾಗ [ಆರೂ ರಸಗಳನ್ನು ಅಥವಾ ಕೆಲವನ್ನು ಬಿಡುವುದು], ವಿವಿಕ್ತಾವಾಸ [ಏಕಾಂತಸ್ಥಾನದಲ್ಲಿ ಇರುವುದು ಮತ್ತು ಮಲಗುವುದು], ಕಾಯಕ್ಲೇಶ [ಶರೀರಕ್ಕೆ ಕಷ್ಟ ಕೊಡುವುದು] ಎಂಬ ಬಹಿರಂಗ ತಪಸ್ಸುಗಳು ಹಾಗೂ ಪ್ರಾಯಶ್ಚಿತ್ತ [ದೋಷಕ್ಕಾಗಿ ದಂಡ ಕೊಡುವುದು], ವಿನಯ [ರತ್ನತ್ರಯಕ್ಕೂ ಅದನ್ನು ಧರಿಸಿದವರಿಗೂ ಗೌರವ ನೀಡುವುದು], ವೈಯಾವೃತ್ಯ [ಗುರುಮುನಿಗಳ ಸೇವೆ ಮಾಡುವುದು], ಸ್ವಾಧ್ಯಾಯ ಶಾಸ್ತ್ರಗಳ ಅಧ್ಯಯನ], ಧ್ಯಾನ [ಧ್ಯಾನ ಮಾಡುವುದು], ವ್ಯುತ್ಸರ್ಗ [ಬಾಹ್ಯ ಮತ್ತು ಆಂತರಿಕ ಪರಿಗ್ರಹಗಳನ್ನು ಬಿಡುವುದು] ಎಂಬ ಅಂತರಂಗ ತಪಸ್ಸುಗಳು (ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗೞ್ದು ಪ್ರಾಯೋಪಗಮನದಿಂ ಸಂನ್ಯಸನಂಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ವೋದ ... ಮಹಾಪುರುಷರ್ಕಳ ಕಥೆಗಳಂ: **ವಡ್ಡಾರಾ,** ಪು ೧, ಸಾ ೯)

**ದ್ವಾದಶರಾಜಕ** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ ಎಂಬ ಹನ್ನೆರಡು ಮಂದಿ ಚಕ್ರವರ್ತಿಗಳು (ದ್ವಾದಶರಾಜಕಮೆಂಬುದ ನೋದುಗಳೊಳ್ ಕೇಳಲ್ಕಾದುದಲ್ಲದೆ ಕಾಣಲ್ಕಾದುದೆ: **ಆದಿಪು**, ೧೪. ೧೪)

**ದ್ವಾದಶಸಂಗ್ರಹಕೃಷ್ಟಿ** – ಕಷಾಯಗಳ ಫಲ ಕಡಿಮೆ ಮಾಡುವ ಅಪ್ರತ್ಯಾಖ್ಯಾನಕ್ರೋಧ, ಅಪ್ರತ್ಯಾಖ್ಯಾನಮಾನ, ಅಪ್ರತ್ಯಾಖ್ಯಾನಲೋಭ, ಅಪ್ರತ್ಯಾಖ್ಯಾನ ಮಾಯೆ, ಪ್ರತ್ಯಾಖ್ಯಾನಾವರಣಕ್ರೋಧ, ಪ್ರತ್ಯಾಖ್ಯಾನಾವರಣಮಾನ, ಪ್ರತ್ಯಾಖ್ಯಾನಾವರಣ ಲೋಭ, ಪ್ರತ್ಯಾಖ್ಯಾನಾವರಣ, ಪ್ರತ್ಯಾಖ್ಯಾನಾವರಣ ಮಾಯೆ, ಸಂಜ್ವಲನಕ್ರೋಧ, ಸಂಜ್ವಲನಮಾಯೆ, ಸಂಜ್ವಲನ ಲೋಭ (ಅನಂತಹಾನಿ ಗುಣರೂಪದಿಂ ದ್ವಾದಶಸಂಗ್ರಹಕೃಷ್ಟಿಗಳಂ ಮಾಡುತ್ತುಂ: **ಚಂದ್ರಪ್ರಪು**, ೧೪.೭೧ ವ)

**ದ್ವಾದಶಾಂಗ** – ಜೈನಧರ್ಮಗ್ರಂಥಗಳ ಹನ್ನೆರಡು ಭಾಗಗಳು: ಆಚಾರಾಂಗ [ಮುನಿಗಳು ಅನುಸರಿಸಬೇಕಾದ ವಿಧಿಗಳು], ಸೂತ್ರಕೃತಾಂಗ[ಸ್ವಮತ–ಪರಮತ ಕ್ರಿಯೆಗಳ ವರ್ಣನೆ], ಸ್ಥಾನಾಂಗ [ಜೀವಪುದ್ಗಲಾದಿಗಳ ವರ್ಣನೆ], ಸಮವಾಯಾಂಗ [ಶಾಸ್ತ್ರಗಳ ಅಂಗಗಳ ನಿತ್ಯ ಸಂಬಂಧಜ್ಞಾನ], ಜ್ಞಾತೃಧರ್ಮಕಥಾಂಗ [ಜ್ಞಾತಾ ಎಂಬ ಗಣಧರದೇವನ ಪ್ರಶ್ನೆಗಳ ಅನುಸಾರ ಉತ್ತರ ಹೇಳಿದ ವರ್ಣನೆ], ವ್ಯಾಖ್ಯಾಪ್ರಜ್ಞಪ್ತ್ಯಂಗ [ಗಣಧರರಿಂದ ಕೇಳಲಾದ ೬೦ ಸಾವಿರ ಪ್ರಶ್ನೆಗಳಿಗೆ ತೀರ್ಥಂಕರರು ಉತ್ತರ ಹೇಳಿದ ವರ್ಣನೆ, ಉಪಾಸಕಾಧ್ಯಯನಾಂಗ [ಶ್ರಾವಕರ ಆಚರಣೆಯ ವಿವರಣೆ], ಅಂತಕೃದ್ದಶಾಂಗ [ಪ್ರತಿ ತೀರ್ಥಂಕರರ ಕಾಲದಲ್ಲಾದ ಹತ್ತು ಹತ್ತು ಮಂದಿ ಮೋಕ್ಷಗಾಮಿಗಳ ವರ್ಣನೆ], ಅನುತ್ತರೋಪಪಾದಕದಶಾಂಗ [ಪ್ರತಿ ತೀರ್ಥಂಕರನ ಕಾಲದ ಮುನಿಗಳ ಅನುತ್ತರವಿಮಾನಗಳಲ್ಲಿ ಜನ್ಮ ತಾಳುವ ವೃತ್ತಾಂತ], ಪ್ರಶ್ನವ್ಯಾಕರಣಾಂಗ [ಆಕ್ಷೇಪಣೀಯ, ವಿಕ್ಷೇಪಣೀಯ, ಸಂವೇದನೀಯ ಮತ್ತು ನಿರ್ವೇದನೀಯವೆಂಬ ನಾಲ್ಕು ನಾಲ್ಕು ಬಗೆಯ ಧರ್ಮಕಥೆಗಳ ನಿರೂಪಣೆ], ವಿಪಾಕಸೂತ್ರಾಂಗ [ಕರ್ಮಬಂಧ, ಉದಯ, ಫಲ ಇತ್ಯಾದಿಗಳ ವರ್ಣನೆ], ದೃಷ್ಟಿಪವಾದಾಂಗ [೩೬೩ ಮಿಥ್ಯಾವಾದದ ನಿರಾಕರಣೆ] (ಇತ್ತ ಗಂಧಭಾಜನಮುನಿಯುಂ ದ್ವಾದಶಾಂಗ ಚತುರ್ದಶಪೂರ್ವಮಪ್ಪ ಆಗಮಮೆಲ್ಲಮಂ ಕಲ್ತು ಪಲಕಾಲಂ ಉಗ್ರೋಗ್ರ ತಪಶ್ಚರಣಂಗೆಯ್ದು: **ವಡ್ಡಾರಾ**, ಪು ೪೯, ಸಾ ೧೩)

**ದ್ವಾದಶಾನುಪ್ರೇಕ್ಷ** – ಜೈನಮುನಿಗಳ ಹನ್ನೆರಡು ಬಗೆಯ ಧ್ಯಾನಚಿಂತನೆ: ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಲೋಕ, ಬೋಧಿದುರ್ಲಭ, ಧರ್ಮಸ್ವಾಖ್ಯಾತತ್ವ (ಅಂತಿರ್ದು ದ್ವಾದಶಾನುಪ್ರೇಕ್ಷ ಸ್ಮರಣಪರಿಣತಾಂತಃಕರಣಂ: **ಕರ್ಣನೇಮಿ**, ೨. ೬೫ ವ)

**ದ್ವಾರಾಪೇಕ್ಷೆ** – ಅಡುಗೆ ಸಿದ್ಧಪಡಿಸಿ, ಶ್ರಾವಕನು ಚರಿಗೆಗೆ ಬರುವ ಮುನಿಗಳನ್ನು ಎದುರು ನೋಡುವುದು (ಮತ್ತೊಂದು ಪುಣ್ಯದಿನದೊಳ್ ಅನಗಾರ ಸಮಯದೊಳ್ ದ್ವಾರಾಪೇಕ್ಷೆಯೊಳಿರೆ: **ಶಾಂತಿಪು,** ೬. ೬೯ ವ)

**ದ್ವಾವಿಂಶತಿಜಲಧಿ** – ಇಪ್ಪತ್ತೆರಡು ಸಾಗರದಷ್ಟು ಕಾಲಾವಧಿ (ಅಖಿಲಸುಖಮನುಂಡರ್ ದ್ವಾವಿಂಶತಿ ಜಲಧಿವರೆಗಂ ಇಂದ್ರಪ್ರತೀಂದ್ರರ್: **ಶಾಂತಿಪು,** ೭. ೧೧೧)

**ದ್ವಾವಿಂಶತಿಪರೀಷಹ** – ದೇಹಕ್ಕೆ ಉಂಟಾಗುವ ಇಪ್ಪತ್ತೆರಡು ತೊಂದರೆಗಳು ಕ್ಷುತ್, ಪಿಪಾಸೆ, ಶೀತ, ಉಷ್ಣ, ದಂಶಮಂಶ್ಚಿಕ, ನಗ್ನತೆ, ಅರತಿ, ಸ್ತ್ರೀ, ಚರ್ಯೆ, ಶಯ್ಯೆ, ನಿಷದ್ಯೆ, ಆಕ್ರೋಶ, ವಧೆ, ಯಾಚನೆ, ಅಲಾಭ, ಅದರ್ಶನ, ರೋಗ, ಸತೃಣಸ್ಪರ್ಶ, ಪ್ರಜ್ಞೆ, ಅಜ್ಞಾನ, ಮಲ, ಸತ್ಕಾರಪುರಸ್ಕಾರ ಎಂಬ ಇಪ್ಪತ್ತೆರಡು ಬಗೆಯ ಪರೀಷಹಗಳು (ದ್ವಾವಿಂಶತಿ ಪರೀಷಹಮುಮಂ ತನ್ನಂ ಮಿಗಲೀಯದೆ ತಳೆದು: **ಸುಕುಮಾಚ,** ೩. ೪೬ ವ)

**ದ್ವಾಸಪ್ತತಿಪ್ರಕೃತಿಗಳು** – ಆತ್ಮನಿಗೆ ಅಜ್ಞಾನ ಮುಂತಾದ ಫಲವನ್ನುಂಟುಮಾಡುವುದು, ಜೀವನಿಗೆ ವರ್ತಮಾನ ಮತ್ತು ಭವಿಷ್ಯತ್ಕಾಲಗಳಲ್ಲಿ ಫಲವನ್ನು ಕೊಡುವ ಕರ್ಮಸ್ಕಂಧ (ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಚತುರ್ಥಪರಮಶುಕ್ಲಧ್ಯಾನದೊಳ್ ನಿಂದು ಸಂರುದ್ಧಸರ್ವಾಸ್ರವಂ ಸಂಪೂರ್ಣ ಸಕಳಶೀಳಗುಣಸಮಾಜಂ ನಿಜೋಪಾಂತ ಸಮಯದೊಳನ್ಯತರವೇದನೀಯ ದೇವಗತಿ ತತ್ಪ್ರಾಯೋಗ್ಯಾನು ಪೂರ್ವ ಶರೀರಬಂಧನಸಂಘಾತ ವರ್ಣರಸಪ್ರತ್ಯೇಕಪಂಚಕ ಸಂಹನನ ಸಂಸ್ಥಾನಷಟ್ಕ ಗಂಧದ್ವಿತಯ ವಿಹಾಯಾಂಗೋಪಾಂಗ ದ್ವಿತಯ ವಿಹಾಯೋಗತಿದ್ವಿತಯ ಸ್ಪರ್ಶಾಗುರುಲಘುಚತುಷ್ಕ ಶುಭಾಶುಭ ಸ್ಥಿರಾಸ್ಥಿರ ಸುಸ್ವರದುಸ್ವರ ದುರ್ಭಗಪ್ರತ್ಯೇಕ ಶರೀರಾಯಶಸ್ಕೀರ್ತ್ಯನಾದೇಯ ನಿರ್ಮಾಣ ಪರ್ಯಾಪ್ತ ನೀಚೈರ್ಗೋತ್ರಂಗಳೆಂಬ ದ್ವಾಸಪ್ತತಿಪ್ರಕೃತಿಗಳಂ ನಿರವಶೇಷಂ ಮಾಡಿ: **ಆಚವರ್ಧ,** ೧೬. ೬೭ ವ)

**ದ್ವಿಗುಣ ಚತುಃಕೂಟ** – ರುಚಕಾಚಳದ ಪಶ್ಚಿಮದಿಕ್ಕಿನ ಎಂಟು ಶಿಖರಗಳು (ತನ್ಮಹೀಧರ ವರುಣಾಶಾ ವಿಶೇಷಕಮಾಗಿರ್ದ ಲೋಹಿತಾಕ್ಷ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ದ್ವಿತೀಯಕಲ್ಯಾಣ** – ತೀರ್ಥಂಕರನಾಗುವ ಮಗುವಿಗೆ ಸಲ್ಲುವ ಜನ್ಮಾಭಿಷೇಕ (ಪರಮೇಶ್ವರ ದ್ವಿತೀಯಕಲ್ಯಾಣಶರಣೋತ್ಸುಕಾಂತಃಕರಣನೈರಾವತಾರೂಢಂ ಶಚೀಸಮೇತನುಂ ಚತುರ್ವಿಧಾಮರಪರೀತನುಮಾಗಿ: **ಪುಷ್ಪದಂಪು,** ೧೦. ೫ ವ)

**ದ್ವಿತೀಯದ್ವೀಪ** – ಜಂಬೂ, ಧಾತಕೀ, ಪುಷ್ಕರವರ, ವಾರುಣೀವರ, ಕ್ಷೀರವರ, ಘೃತವರ, ಇಕ್ಷುವರ, ನಂದೀಶ್ವರ ಎಂಬ ಅಷ್ಟದ್ವೀಪಗಳಲ್ಲಿ ಎರಡನೆಯದು, ಧಾತಕೀದ್ವೀಪ (ಅಂತಲ್ಲಿಂ ತಳರ್ದು ಬಂದೀ ದ್ವಿತೀಯದ್ವೀಪದ ಯಾಮ್ಯದಿಶೆಯೊಳಗೆ ವಿಷುಕಾರಧಾರಣೀಧರದ ಮೂಡಣ ಭರತದೊಳ್; **ಚಂದ್ರಪ್ರಪು,** ೪. ೨೦ ವ)

**ದ್ವಿತೀಯಪೀಠ** – ಜಿನನು ಸಮವಸರಣದಲ್ಲಿ ಮಂಡಿಸುವ ಮೂರು ಪೀಠಗಳಲ್ಲಿನ ಎರಡನೆಯದು (ಮೇಘರಥಾಧೀಶ್ವರನುಂ ವಂದನಾಭಕ್ತಿಗೆ ಪೋಗಿ ಭವಭಯಹರಣ ಪ್ರದಾಯಮಾನವಿನೇಯಜನೈಕಶರಣಮಂ ಸಮವಸರಣಮಂ ಪೊಕ್ಕು ಪ್ರಥಮದ್ವಿತೀಯ ತೃತೀಯಪೀಠಂಗಳುಮನುಕ್ರಮದಿನರ್ಚಿಸಿ; **ಶಾಂತಿಪು,** ೯. ೬೯ ವ)

**ದ್ವಿಸಪ್ತತಿಪ್ರಕೃತಿ** – ದ್ವಾಸಪ್ತತಿಪ್ರಕೃತಿ, ಅನುದಯವೆಂಬ ಅಸಾತಾವೇದನೀಯ, ದೇವಗತಿ, ದೇವಗತಿ ಪ್ರಯೋಗ್ಯಾನುಪೂರ್ವ್ಯ, ಐದು ಶರೀರ, ಐದು ಬಂಧನ, ಐದು ಸಂಘಾತ, ಐದು ವರ್ಣ, ಐದು ರಸ, ಆರು ಸಂಸ್ಥಾನ, ಆರು ಸಂಹನನ, ಮೂರು ಅಂಗೋಪಾಂಗ, ಎರಡು ಗಂಧ, ಎಂಟು ಸ್ಪರ್ಶ, ಅಗುರುಲಘುತ್ವ, ಎರಡು ವಿಹಾಯೋಗತಿ [ಪ್ರಶಸ್ತ+ಅಪ್ರಶಸ್ತ], ಸ್ಥಿರ, ಅಸ್ಥಿರ, ಶುಭ, ಅಶುಭ, ಸುಸ್ವರ, ದುಸ್ವರ, ಸುಭಗ, ದುರ್ಭಗ, ಪ್ರತ್ಯೇಕಶರೀರ, ಅಯಸ್ಕೀರ್ತಿ, ಅನಾದೇಯ, ನಿರ್ಮಾಣ, ಅಪರ್ಯಾಪ್ತ, ನೀಚೈರ್ಗೋತ್ರ ಎಂಬ ಎಪ್ಪತ್ತೆರಡು ಪ್ರಕೃತಿಗಳು (ಅನ್ಯತರವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವ ಶರೀರಸಂಬಂಧನ ಸಂಘಾತ ವರ್ಣ ರಸ ಪಂಚಕ ಸಂಸ್ಥಾನಸಂಹನನ ಷಟ್ಕಾಂಗೋಪಾಗದ್ವಿಕಂ ಗಂಧದ್ವಿಕಂ ಸ್ಪರ್ಶಾಷ್ಟಕಂ ಅಗುರುಲಘುತ್ವ ಚತುಷ್ಕವಿಹಾಯೋಗತಿದ್ವಿಕ ಸ್ಥಿರಾಸ್ಥಿರ ಶುಭಾಶುಭ ಸುಸ್ವರದುಸ್ವರ ಸುಭಗದುರ್ಭಗ ಪ್ರತ್ಯೇಕಶರೀರಾಯಶಸ್ಕೀರ್ತಿ ರನಾದೇಯನಿರ್ಮಾಣ ಪರ್ಯ್ಯಾಪ್ತನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೨೪ ವ)

**ದ್ವೀಂದ್ರಿಯ** – ಸ್ಪರ್ಶನ, ರಸನ ಎಂಬ ಎರಡು ಇಂದ್ರಿಯಗಳು ಮಾತ್ರ ಇರುವ ಜಂತು (ಸ್ಪರ್ಶನ ರಸನೇಂದ್ರಿಯೋಪೇತಂಗಳಪ್ಪ ಶಂಖಾದಿ ದ್ವೀಂದ್ರಿಯಂಗಳ್: **ಆದಿಪು,** ೧೦. ೬೩ ವ)

**ದ್ವೈಧೀಭಾವ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು ಗುಣ, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ; ದುರ್ಬಲನಾದ ರಾಜನು ಬಲಿಷ್ಠನನ್ನು ಮಾತಿನ ಜಾಣ್ಮೆಯಿಂದಲೇ ಸಂಧಿ ಅಥವಾ ಯುದ್ಧವಿಲ್ಲದಂತೆ ಒಲಿಸಿಕೊಳ್ಳುವುದು ದ್ವೈಧೀಭಾವ (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಳ್ಪುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೇಳ್ವುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹದ್ವ ಯಾವಸ್ಥಾನಂ ದೈಧೀಭಾವನಕ್ಕುಂ: **ಚಾವುಂಡಜಯ,** ಪು. ೨೫೭)

# ಧ

**ಧನು** – ಬಿಲ್ಲು, ಎತ್ತರದ ಒಂದು ಅಳತೆ (ಏೞ್ ಧನು ಮೂಱು ಮೊೞನಿಂ ಪೇೞ್ ಷಡಂಗುಲಮೆ ಮೊದಲ ನಾರಕರ ಒಡಲ್: **ಆದಿಪು,** ೫. ೯೨)

**ಧರಣೇಂದ್ರ** – ಪಾರ್ಶ್ವನಾಥ ತೀರ್ಥಂಕರನ ಯಕ್ಷ; ಭವನವಾಸಿ ದೇವನಾದ ನಾಗೇಂದ್ರ (ಧರಣೇಂದ್ರಂಗಂ ಅಳುಂಬಂ ಪೊಗೞಲ್ಕೆ ರೂಪು ನೀಳಾಂಜನೆಯಾ: **ಆದಿಪು,** ೯. ೧೭)

**ಧರ್ಮಕಥಾಪ್ರಯೋಜನ** – ಧರ್ಮಕತೆಯನ್ನು ಕೇಳುವುದರಿಂದಾಗುವ ಪ್ರಯೋಜನಗಳು (ಧರ್ಮಕಥಾಪ್ರಯೋಜನಮೆಂಬುದು ಪರದರ್ಶನ ವ್ಯಾಕುಳಿತರುಂ ಪರಿಚ್ಛಿನ್ನಾಪವರ್ಗ ಭವ್ಯಜನಂಗಳ್ಗೆ ದರ್ಶನಮುಂ ದೃಢಂ ಮಾೞ್ಪುದು; ದೃಢದರ್ಶನರಾದರ್ಗೆ .... ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಪಾಳಿಸುವುದು: **ಚಾವುಂಡಜಯ,** ಪು ೩೨೫–೨೭)

**ಧರ್ಮಕಥಾವಸ್ತು** – ಧರ್ಮದ ಬಗೆಗಿನ ಕತೆಗಳಲ್ಲಿನ ನಾಲ್ಕು ವಸ್ತುಗಳು (ಧರ್ಮ ಕಥಾವಸ್ತುವೆಂಬ ಅರ್ಥಕಥೆಯೆಂದುಂ ಕಾಮಕಥೆಯೆಂದುಂ ಧರ್ಮಕಥೆ ಯೆಂದುಂ ವ್ಯಾಮಿಶ್ರಮಕಥೆಯೆಂದುಂ ಚತುರ್ವಿಧಮಕ್ಕುಂ: **ಚಾವುಂಪು,** ಪು. ೪೩೯. ಸಾ. ೧೩. ೧೪)

**ಧರ್ಮಕಥೆ** – ಇದರಲ್ಲಿ ಆಕ್ಷೇಪಣಿ, ವಿಕ್ಷೇಪಣಿ, ಸಂವೇದನಿ, ನಿರ್ವೇದನಿ ಎಂದು ನಾಲ್ಕು ಬಗೆ (ಧರ್ಮಕಥೆಯೆಂದು ಆಕ್ಷೇಪಣೀಯಂ ವಿಕ್ಷೇಪಣೀಯಂ ಸಂವೇದನೀಯಂ ನಿರ್ವೇದನೀಯಂ ಎಂದು ಚತುರ್ವಿಧಮಕ್ಕುಂ: **ಚಾವುಂಪು,** ಪು. ೪೩೯, ಸಾ. ೧೯–೨೦)

**ಧರ್ಮಕಥಾಶ್ರೋತೃ** – ಧರ್ಮಕತೆಯನ್ನು ಕೇಳುವವರು, ಅವರಲ್ಲಿ ನಾಲ್ಕು ಬಗೆ: ರಕ್ತ ದುಷ್ಟ ಮೂಢ ಮತ್ತು ಮಧ್ಯಸ್ಥ (ರಕ್ತನೆಂಬೊಂ ದೋಷಯುಕ್ತಮಪ್ಪ ವಚಮಂ ನುಡಿದೊಡಮದಂ ಗುಣದೊಳ್ ದೋಷಮಂ ಸ್ಥಾಪಿಸುವೊಂ, ದುಷ್ಟನೆಂಬೊಂ ಸದ್ಧರ್ಮನಿರಪೇಕ್ಷನುಂ ಇಷ್ಟಬುದ್ಧಿಯಂ ಗುಣಸಹಸ್ರಮಂ ಪತ್ತುವಿಟ್ಟು ಪ್ರಮಾದಮಂ ಪಾರುತ್ತಿರ್ದ್ದಲ್ಪದೋಷದಿಂ ಕಥಾಭಂಗಂ ಮಾೞ್ಪೊಂ, ಮೂಢನೆಂಬೊಂ ಗುಣದೋಷಗ್ರಹಣದೊಳ್ ದೂರೀಕೃತಮತಿಯಾಗಿ ವಿವಿಧ ವಿಷಯದ ಚಾಟುಕಾಱ ವಚವಿನ್ಯಾಸದಿಂ ಸೊಗಸುತ್ತೊಳ್ಳಿತ್ತೆಂದು ನುಡಿವೊಂ, ಮಧ್ಯಸ್ಥನೆಂಬೊಂ ಗುಣದೋಷವಿಚಾರಸಮರ್ಥನಾಗಿ ಗುಣಭಾವದೊಳ್ ಗುಣಮಂ ದೋಷಭಾವದೊಳ್ ದೋಷಮಂ ನಿಯೋಜಿಪೊಂ: **ಚಾವುಂಡಜಯ,** ಪು. ೩೨೭)

**ಧರ್ಮಚಕ್ರ** – ಧರ್ಮದ ರಾಜ್ಯ (ಧರ್ಮಚಕ್ರ ಪರಚಕ್ರಮನಾಕ್ರಮಿಸಲ್ಕೆ ಸಾಲ್ವ ಭಾಸುರತರತೀವ್ರತೇಜದಪರಾಜಿತೆ ಮಾೞ್ಕೆ ಮತಿಪ್ರಕಾಶಮಂ: **ಮಲ್ಲಿನಾಪು,** ೧. ೯); ತೀರ್ಥಂಕರನು ವಿಹಾರ ಮಾಡುವ ಸಮಯದಲ್ಲಿ ಆತನ ಮುಂದೆ ಸಾಗುವ ಅತ್ಯಂತ ಪ್ರಕಾಶಮಾನವಾದ ಚಕ್ರ (ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ: **ಶಾಂತಿಪು,** ೧೨. ೧೪ ವ)

**ಧರ್ಮಚಕ್ರವಾಳ** – ಒಂದು ವ್ರತ (ನೋಂಪೆನೆಂದಡೆ ಉಡುಗದೆ ಸಲೆ ಧರ್ಮಚಕ್ರವಾಳಮನಾಗಳ್ ಬೇಡಿ: **ಶಾಂತಿಪು,** ೪. ೬೭ ಮತ್ತು ೬೭ ವ)

**ಧರ್ಮದ್ರವ್ಯ** – ಜೀವ ಪುದ್ಗಲ ಧರ್ಮ ಅಧರ್ಮ ಕಾಲ ಮತ್ತು ಆಕಾಶವೆಂಬ ಆರು ಬಗೆಯ ದ್ರವ್ಯಗಲಲ್ಲಿ ಒಂದು, (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮ ದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಂ: **ಸುಕುಮಾಚ,** ೩. ೫೯ ವ)

**ಧರ್ಮಧ್ಯಾನ** – ಧರ್ಮದ ವಿಷಯಗಳನ್ನು ಕುರಿತು ಸದಾ ಚಿಂತಿಸುವುದು; ಧ್ಯಾನಚತುಷ್ಟಯಗಳಲ್ಲಿ ಒಂದು, (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦. ೧೪ ವ); ಇದರಲ್ಲಿ ಬಾಹ್ಯ ಮತ್ತು ಆಧ್ಯಾತ್ಮಿಕ ಎಂಬ ಎರಡು ಪ್ರಭೇದಗಳು (ಧರ್ಮಧ್ಯಾನಂ ಬಾಹ್ಯಮಾಧ್ಯಾತ್ಮಿಕಮೆಂದು ದ್ವಿಪ್ರಕಾರಮಕ್ಕುಂ; ಅಲ್ಲಿ ಬಾಹ್ಯಮೆಂಬುದು ... ಪರಾನುಮೇಯಮಪ್ಪುದಜಿಂ ಬಾಹ್ಯಂ ... ಸ್ವಸಂವೇದ್ಯಮಪ್ಪಾಧ್ಯಾತ್ಮಿಕಧ್ಯಾನಮುಂ ದಶವಿಧಮಕ್ಕುಂ: **ಚಾವುಂಡಜಯ,** ಪು. ೩೮೬) ನೋಡಿ, **'ಧ್ಯಾನಚತುಷ್ಟಯ'**

**ಧರ್ಮಪ್ರಭಾವನೆ** – ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು, ಜೈನಧರ್ಮದ ಬಗ್ಗೆ ಇತರರಲ್ಲಿ ಪ್ರಚಾರ ಮಾಡುವುದು (ನಿಶ್ಶಂಕೆಯುಂ ನಿಷ್ಕಾಂಕೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಂ ಎಂದು: **ಧರ್ಮಾಮೃ,** ೧. ೭೨ ವ)

**ಧರ್ಮಸಂತತಿ** – ಧರ್ಮದ ಮುಂದುವರಿಕೆ (ಗೃಹಸ್ಥಧರ್ಮದಿಂದಂ ನೀನೆಂತಂತೆ ಸಲೆ ನೆಗಟ್ಟಿ ಜಗತೀಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ: **ಆದಿಪು,** ೮. ೧೩)

**ಧರ್ಮಾಸ್ತಿಕಾಯ** – ಪಂಚಾಸ್ತಿಕಾಯಗಳಲ್ಲಿ ಒಂದು; ಬಹುಪ್ರದೇಶದಲ್ಲಿ ವ್ಯಾಪಿಸಿರುವ ಧರ್ಮದ್ರವ್ಯ ಪಂಚಾಸ್ತಿಕಾಯಗಳಲ್ಲಿ ಒಂದು (ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಆಕಾಶಾಸ್ತಿಕಾಯವೆಂಬ ಪಂಚಾಸ್ತಿಕಾಯ ನಿಕಾಯಮುಂ: **ಸುಕುಮಾಚ,** ೩. ೫೯ ವ)

**ಧಾತಕೀಷಂಡ** – ಪುಷ್ಕರದ್ವೀಪದ ಒಂದು ಭಾಗ; ಧಾತಕೀವೃಕ್ಷ (ಮರಾಟಿಮೊಗ್ಗು) ಹೇರಳವಾಗಿರುವ ಜಾಗ (ಧಾತಕೀಷಂಡಂ ಈಕ್ಷಣಭದ್ರಂ ಸಮುದ್ರಮಂ ಬಳಸಿ ಜಂಬೂದ್ವೀಪವಿನ್ಯಾಸಮಂ: **ಚಂದ್ರಪ್ರಪು,** ೧. ೭೨)

**ಧಾತುಮಳ** – ಇಂದ್ರಿಯಗಳಿಂದ ಹುಟ್ಟುವ ಕೊಳೆ, ಬೆವರು ಮುಂತಾದವು (ಧಾತುಮಳ ದೋಷರಹಿತಂ ವೀತನಖ ಶ್ಮಶ್ರು ಕೇಶ ಲೋಮಂ ಶೋಭಾನ್ವಿತಪರಿಪೂರ್ಣ ಯೌವನಂ: **ಆದಿಪು,** ೬. ೩೮)

**ಧೂಮಪ್ರಭೆ** – ಏಳು ನರಕಗಳಲ್ಲಿ ಒಂದು ನರಕ (ಮೂಱು ಲಕ್ಕೆ ಬಿಲದಿಂ ಪುದಿದಿರ್ದನೆಯ್ದನೆಯದೆನಿಪ ಧೂಮಪ್ರಭೆಯೊಳ್: **ಮಲ್ಲಿನಾಪು,** ೧೩. ೧೧೯)

**ಧೂಳೀಶಾಲ** – ಸಮವಸರಣ ಮಂಟಪದ ಮೊದಲನೆಯ ಪ್ರಾಕಾರ (ಕೈಳಾಸಾಚಲಮನೇಱಿ ಧೂಳೀಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತಮಪ್ಪ ವೃಷಭಾಸ್ಥಾನ ಮಂಟಪಮಂ ನೋಡುತ್ತುಂ: **ಆದಿಪು,** ೧೩. ೮೨ ವ)

**ಧೂಳೀಶಾಳ** – ಧೂಳೀಶಾಲ (ಬೆಳಗಿಂದಂ ಬೆಳಪುದಲ್ಲಿ ಧೂಳೀಶಾಳಂ: **ಆದಿಪು,** ೧೦. ೨೩)

**ಧೃತಿ** – ಜಿನಜನನಿಯನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

**ಧೃತಿಕ್ರಿಯೆ** – ಗರ್ಭಿಣಿಗೆ ಏಳನೆಯ ತಿಂಗಳಲ್ಲಿ ಗರ್ಭವೃಧ್ಧಿಗಾಗಿ ನಡೆಸುವ ಮಂಗಳಕಾರ್ಯ (ಏೞನೆಯ ತಿಂಗಳೊಳ್ ಪೂರ್ವಸ್ಥಿತಿಯಿನಾದರಂ ಬೆರಸು ಗರ್ಭವೃದ್ಧಿನಿಮಿತ್ತಮವ್ಯಗ್ರಚಿತ್ತರಪ್ಪ ಗೃಹಮೇಧಿಗಳಂ ನೆಗೞಲ್ಪಡುವುದು ಧೃತಿಕ್ರಿಯೆ: **ಚಾವುಂಡಜಯ,** ಪು. ೧೮೧)

**ಧ್ಯಾನಚಕ್ರ** – ಚಿಂತನೆಯಿಂದ ಹುಟ್ಟುವ ಚಕ್ರ (ಆ ಮುನಿಯ ಮನೋಗಾರದೊಳ್ ಧ್ಯಾನಚಕ್ರಂಂ ಪುಟ್ಟಿತ್ತು ಆ ರಾಜ್ಯಾಶ್ರಮಮುನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು: **ಆದಿಪು,** ೬. ೨೪ ವ)

**ಧ್ಯಾನಚತುಷ್ಟಯ** – ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳು (ಆರ್ತ ರೌದ್ರ ಧರ್ಮ ಶುಕ್ಲಾಭಿಧಾನಚತುಷ್ಟಯಮುಮಂ: **ಸುಕುಮಾಚ,** ೩. ೩೯ ವ)

**ಧ್ಯಾನಯೋಗ** – ನಾಲ್ಕು ಅಂಗಗಳನ್ನುಳ್ಳ ಧ್ಯಾನ (ಧ್ಯಾನಯೋಗಮರ್ಹತ್ಸಮಯದೊಳ್ ಧ್ಯಾನಾಧ್ಯೇಯಂ ಧಾತೃಫಲಮೆಂದು ಚತುರಂಗಮಕ್ಕುಂ; ಅವಱೊಳ್ ಚಿಂತಾಪ್ರಬಂಧಲಕ್ಷಣಂ ಧ್ಯಾನಮೆಂಬುದು, ಯಥಾವಸ್ಥಿತ ವಸ್ತುಸ್ವರೂಪಂ ಧ್ಯೇಯಮೆಂಬುದು, ಕಷಾಯಕಲುಷಿತನುಂ ಗುಪ್ತಿತ್ರಯನುಂ ಧಾತೃವೆಂಬೋಂ, ಸಂಸಾರಭ್ರಮಣಮುಂ ಸ್ವರ್ಗಾಪವರ್ಗಮುಂ ಫಲಮೆಂಬುದಕ್ಕುಂ; ಇಂತೀ ಧ್ಯಾನಂ ಅಪ್ರಶಸ್ತಂ: **ಅಜಿತಪು,** ೮. ೨೮ ವ)

## ನ

**ನಂದನ** – ಮೇರುಪರ್ವತದ ಭದ್ರಶಾಲ, ನಂದನ, ಸೌಮನಸ ಮತ್ತು ಪಾಂಡುಕ ಎಂಬ ವನಗಳಲ್ಲಿ ಒಂದು (ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ ಸಂಧಿಸಿ ನಿಂದ ನಂದನದಿಂದೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಂ ಅಟ್ಟಿಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨)

**ನಂದನಚರ** – ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರಚಕ್ರದಲ್ಲಿ ಸುತ್ತುತ್ತಿರುವವನು (ನವಿಲಂಕೊಳ್ಳೆಂದರೆ ಗೆತ್ತು ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀಳ್ದಿ ನಂದನಚರನಂ: **ಯಶೋಧಚ,** ೩. ೪೨)

**ನಂದನವಿಮಾನ** – ಸ್ವರ್ಗಲೋಕದಲ್ಲಿರುವ ಒಂದು ಸ್ಥಳದ ಹೆಸರು (ವರಾಹಾರ್ಯನುಂ ನಂದನವಿಮಾನದೊಳ್ ಮಣಿಮಕುಟಕೇಯೂರಮಣಿಕುಂಡಲ ವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜನಾದಂ: **ಆದಿಪು,** ೫. ೭೦ ವ)

**ನಂದೀಶ್ವರ** – ಆಷಾಢ, ಕಾರ್ತಿಕ, ಫಾಲ್ಗುಣ ಮಾಸಗಳಲ್ಲಿ ದೇವತೆಗಳು ಸೌಧರ್ಮಾದಿ ಇಂದ್ರರ ಸಾನ್ನಿಧ್ಯದಲ್ಲಿ ಜಿನಪೂಜೆಗಾಗಿ ನಂದೀಶ್ವರದ್ವೀಪಕ್ಕೆ ಹೋಗುವ ಕಾಲ (ವಂದಾರು ಬಂದ ಫಾಲ್ಗುಣ ನಂದೀಶ್ವರದೊಳ್ ತ್ರಿಪೃಷ್ಠತನಯಂ ತನುವಂ ತಂದುಪವಾಸಕ್ಕಾ ನಿಜನಂದನದ ಸಹಸ್ರಕೂಟ ಚೈತ್ಯಾಲಯದೊಳ್: **ಶಾಂತಿಪು,** ೭. ೪೮)

**ನಂದೀಶ್ವರದ್ವೀಪ** – ಈ ದ್ವೀಪದಲ್ಲಿ ೧೬ ವಾಪಿಗಳು, ೪ ಅಂಜನಗಿರಿಗಳು, ೧೬ ದಧಿಮುಖ ಮತ್ತು ೩೨ ರತಿಕರವೆಂಬ ೫೨ ಪರ್ವತಗಳಿವೆ; ಒಂದೊಂದೂ ಪರ್ವತದಲ್ಲಿ ಒಂದೊಂದು ಚೈತ್ಯಾಲಯ. ಆಷಾಢ, ಕಾರ್ತಿಕ, ಫಾಲ್ಗುಣ ಮಾಸಗಳಲ್ಲಿ ದೇವತೆಗಳು ಆ ದ್ವೀಪಕ್ಕೆ ಹೋಗಿ ಚೈತ್ಯಾಲಯಗಳ ಪೂಜೆ ಮಾಡುತ್ತಾರೆ: ಇಂತಿರ್ವರೊರ್ಮೆ ನಂದೀಶ್ವರದ್ವೀಪದೊಲೋರೊರ್ವರಂ ಕಂಡು ಅಜಿದೊಡನೆ ಜಿನೇಂದ್ರಮಹಿಮೆಯಂ ಮಾಡಿ: **ಶಾಂತಿಪು,** ೪. ೯೭ ವ)

**ನಂದ್ಯಾವರ್ತವಿಮಾನ** – ಒಂದು ಸ್ವರ್ಗದ ಹೆಸರು (ವಾನರಾರ್ಯನುಂ ನಂದ್ಯಾವರ್ತ ವಿಮಾನದೊಳ್ ಮನೋರಥಾವಾಪ್ತದಿವ್ಯಭೋಗಂ ಮನೋರಥನೆಂಬಂ ಕಲ್ಪಜನಾದಂ: **ಆದಿಪು,** ೫. ೭೦ ವ)

**ನದೀನಾಥ** – ಸಾಗರ, ಒಂದು ದೀರ್ಘಾವಧಿ (ಇಂತಿರ್ವರುಂ ಪೂಣ್ದು ಅಲಂಪಿನೊಳುಂಡರ್ ಕಡೆಯೆಯ್ದೆ ಷೋಡಶನದೀನಾಥೋಪಮ ಆಯುಷ್ಯಮಂ: **ಆದಿಪು,** ೩. ೭೬)

**ನಪುಂಸಕವೇದ** – ಸ್ತ್ರೀ–ಪುರುಷ ಎರಡೂ ಭಾವನೆಗಳಿಲ್ಲದಂತಾಗುವ ಸ್ಥಿತಿ; ಒಂದು ಬಗೆಯ ನೋಕಷಾಯ; ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯ ಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ನಮಸ್ಕಾರಮಂತ್ರ** – ಪಂಚನಮಸ್ಕಾರಗಳ ಮಂತ್ರಗಳು (ಜಿನನ ನಮಸ್ಕಾರಮಂತ್ರಂಗಳೊಳ್ ಭಾವನೆಯಂ ತಾಳ್ದು ಅಟ್ಟಿಯಿಂ ಜಿನಮಹಿಮೆಗಳಂ ಮಾಡು: **ಆದಿಪು,** ೩. ೭)

**ನಮಸ್ಕ್ರಿಯಾವಿಧಿ** – ನಮಸ್ಕಾರನಿಯಮ (ನಂದೀಶ್ವರಾದ್ಯುದಿತದೀಪ ನಮಸ್ಕ್ರಿಯಾದಿ ವಿಧಿಗಳಂ ನೀಂ ಮಾಡು ದೇವಾಧಿದೇವಾ: **ಶಾಂತಿಪು,** ೭. ೨೫)

**ನಮಸ್ಸಿದ್ಧೇಭ್ಯಃ** – ಸಿದ್ಧರಿಗೆ ನಮಸ್ಕಾರ (ಮನದ ಪರಿಚ್ಛೇದದಿನಂದು ನಮಸ್ಸಿದ್ಧೇಭ್ಯಃ ಎಂದು ಕರ್ಮಂಗಳ ಬೇರನೆ ಪಱಿವ ತೆಱದೆ ಪಱಿದಂ ಮನಸ್ವಿ ಚಳದಳಿವಿನೀಳ ಕೇಶಾವಳಿಯಂ: **ಆದಿಪು,** ೯. ೭೭)

**ನಮಿ** – ಇಪ್ಪತ್ತೊಂದನೆಯ ತೀರ್ಥಂಕರ (ಮುಚುಕುಂದಂ ತಾಮ ನಮಿಸ್ವಾಮಿಗಳ್ಗೊಲವಿಂದಾಬ್ಜಕೆ ಸೇವ್ಯಮಾನಮೆನಲುಂ ಪೂಜಾವಿಧಾನೋತ್ಕರಂ: **ಪುಣ್ಯಾಸ್ರ,** ೧. ೧೦೩)

**ನಮೋಸ್ತುಗೆಯ್** – ನಮಸ್ಕರಿಸು (ಯತೀಂದ್ರನಂ ಕಂಡು ನಮೋಸ್ತುಗೆಯ್ದು: **ಪುಣ್ಯಾಸ್ರ,** ೩. ೭೨ ವ)

**ನಯ** – ಪ್ರತಿಪಕ್ಷವನ್ನು ನಿರಾಕರಿಸದೆ ವಸ್ತುವಿನ ಅಂಶವನ್ನು ಗ್ರಹಿಸುವ ಜ್ಞಾತೃವಿನ ಅಭಿಪ್ರಾಯ (ಆಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ: **ನೇಮಿನಾಪು,** ೧. ೪)

**ನಯವಾದ** – ಸಮ್ಯಜ್ಞಾನ ಪಡೆಯಲು ವಸ್ತುವಿನ ಪ್ರತಿ ಅಂಶವನ್ನೂ ಗ್ರಹಿಸುವುದು (ನಯವಾದಂ ನಯಮಾಗಿ ಕೂಡೆ ಪೊಳೆಯಲ್ ... ಪೇಟ್ವರೀಗೆ ಉಪಾಧ್ಯಾಯರ್ ಸುಖೋಪಾಯಮಂ: **ಪುಷ್ಪದಂಪು,** ೧. ೪)

**ನಯಶಾಸ್ತ್ರ** – ಆರು ವಿಭಾಗಗಳನ್ನೊಳಗೊಂಡ ರಾಜನು ಅನುಸರಿಬೇಕಾದ ನೀತಿ (ನಯಶಾಸ್ತ್ರಮಿದುರ್ಮದಱಿಂ ಬುದ್ಧಿಶಕ್ತ್ಯುಪಾಯ ಜಯ ಗುಣ ಪ್ರಕೃತಿ ವಿಭಾಗಂಗಳನಱಿದು ನೆಗೞ್ವಂ ನೃಪಸುತಂಗುದ್ಯೋಗಂಗೆಯ್ಯಲ್ವೇೞ್ದು: **ಚಾವುಂಡಜಯ,** ಪು. ೨೫೬)

**ನರಕ** – ಏಳು ಬಗೆಯ ನರಕಗಳು: ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಃಪ್ರಭೆ (ಏೞೆಂಬ ನರಕಮಾವುದೊ ಪೇೞ್ ಎಂಬ ದುರಂತದುಃಖದೊಳೆ ಪೇೞಿಸಿನಿಂದೇೞು ಧಾತುಗಳೇೞುಂ ನರಕಂಗಳ್ ಅವಱೊಳೇಗುಂದದವೋಲ್: **ಅಜಿತಪು,** ೨. ೫೪)

**ನರಕಗತಿ** – ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು, ಇದರಿಂದ ನಾರಕೀಯ ಅವಸ್ಥೆ ಉಂಟಾಗುತ್ತದೆ (ಅಂತರ್ಮುಹೂರ್ತದಿಂ ... ನರಕಗತಿ ... ತಿರ್ಯಗ್ಗತಿ ... ಎಂಬ ಪದಿನಾಱುಂ ಕರ್ಮಪ್ರಕೃತಿಗಳಿಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ)

**ನರಕಬಿಲ** – ನರಕ (ಅಲ್ಲಿಂದತ್ತಮೇಕರಜ್ಜುಪ್ರಮಾಣಾಣಂತರದೊಳಮರಿಷ್ಟೆಯೆಂಬ ಪೆಸರನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱುಲಕ್ಕಮಕ್ಕು: **ಅಜಿತಪು,** ೧೧. ೭ ವ)

**ನರಕಾಂತಕ** – ವಾಸುದೇವ (ಅಂತಾ ವಿದ್ಯೆಗಳಂ ನರಕಾಂತಕಂ ಅಲಸದೆ ವಿಷಂ ದಿವ್ಯೌಷಧಮೆಂಬಂತಿರೆ ವಿದ್ಯೆಗಳಿಂ ಗೆಲ್ದಂ: **ಶಾಂತಿಪು,** ೫. ೬೨)

**ನರಕಾಯುಷ್ಯ** – ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು, ಧನ-ಧಾನ್ಯ ಸಂಗ್ರಹದ ಅತಿಮೋಹ, ಹಿಂಸೆ ಮೊದಲಾದ ಪಾಪಕರ್ಮಗಳಲ್ಲಿ ಆಸಕ್ತಿ – ಇವುಗಳಿಂದ ಉಂಟಾಗುವ ಕರ್ಮಬಂಧ, ನರಕವಾಸದ ಅವಧಿ (ಆ ಸಮಯದೊಳ್ ಏೞನೆಯ ನರಕಾಯುಷ್ಯಂ ನೆಱೆಯೆ: **ಪುಣ್ಯಾಸ್ರ:** ೩. ೫೪ ವ)

**ನವಕೇಶವರು** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಒಂಬತ್ತು ಮಂದಿ ವಾಸುದೇವರು (ದ್ವಿಪೃಷ್ಠ ತ್ರಿಪೃಷ್ಠ ಸ್ವಯಂಭು ಪುರುಷೋತ್ತಮ ಪುರುಷಸಿಂಹ ಪುರುಷವರ ಪುಂಡರೀಕ ದತ್ತನಾರಾಯಣ ಕೃಷ್ಣರೆಂಬ ನವಕೇಶವರುಂ: **ಚಾವುಂಡಜಯ,** ಪು. ೩೪೮)

**ನವಖಂಡ** – ಇಂದ್ರ, ಶ್ವೇತ, ತಾಮ್ರ, ಗಭಸ್ತಿ, ನಾಗ, ಸೌಮ್ಯ, ಗಂಧರ್ವ, ಚಾರಣ, ಭರತ ಎಂಬ ಭೂಮಿಯ ಒಂಬತ್ತು ಭಾಗಗಳು (ನವಖಂಡಾವನಿಯೊಳಗಿರ್ಪವನೀಶರ ಹೃದಯಮೆಯ್ದೆ ಶತಖಂಡಮೆನಿಪ್ಪವೊಲೆಡೆಯೆ ಭೂರಿಭೇರೀರವಮೊಗೆದುದು: **ಪಾರ್ಶ್ವನಾಪು,** ೮. ೩೦)

**ನವಗ್ರೈವೇಯಕ** – ಸ್ವರ್ಗಗಳ ಮೇಲಿರುವ ಒಂಬತ್ತು ಕಾಲಾತೀತ ಸ್ವರ್ಗಗಳು: ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿತಾಳ, ಸುಮನಸ, ಸೌಮನಸ, ಪ್ರೀತಿಕರ (ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು: **ಅಜಿತಪು,** ೧೧. ೨೯ ವ)

**ನವತತ್ತ್ವಭಾವನೆ** – ಒಂಬತ್ತು ಬಗೆಯ ತತ್ವಗಳು (ಜೀವಾಜೀವ ಪುಣ್ಯಪಾಪಾಸ್ರವ ಸಂವರ ಬಂಧ ನಿರ್ಜರ ಮೋಕ್ಷಮೆಂಬ ನವತತ್ತ್ವಭಾವನೆಯಂ ಭಾವಿಸುತ್ತಂ: **ಹರಿವಂಶ,** ೧೪. ೫೩ ವ)

**ನವನಿಧಿ** – ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರ ಎಂಬ ಕುಬೇರನ ಒಂಬತ್ತು ನಿಧಿಗಳು (ರತ್ನಾಭರಣ ತೋರಣ ಘಂಟಾಜಾಳ ಮುಕ್ತಾಲಂಬನ ಪುಷ್ಪದಾಮ ಅಷ್ಟಮಂಗಳ ನವನಿಧಿಪ್ರಧಾನಂಗಳುಂ: **ಆದಿಪು,** ೧೦. ೩೨ ವ); ಚಕ್ರವರ್ತಿಯ ಬಳಿಯೂ, ಸಮವಸರಣದಲ್ಲಿ ಕೇವಲಜ್ಞಾನಿಯ ಸನ್ನಿಧಿಯಲ್ಲಿಯೂ ಇರುವ ಕಾಳ [ನೀಲ], ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನ ಎಂಬ ಒಂಬತ್ತು ರತ್ನಗಳು (ಬಹುರಂತರ್ವೇಧಿಕಾಶ್ರಿತ ನೈಸರ್ಪ ಪಾಂಡುಕ ಪದ್ಮ ಪಿಂಗಳ ಕಾಳ ಮಹಾಕಾಳ ಮಾಣವಕ ಶಂಖ ಸರ್ವರತ್ನಮೆಂಬ ನವನಿಧಿಗಳುಂ: **ಅನಂತಪು,** ೧೦. ೨೦ ವ)

**ನವನೋಕಷಾಯ** – ಸುಖದುಃಖಗಳಿಗೆ ಕಾರಣವಾದ ಒಂಬತ್ತು ಕಿಂಚಿತ್ ಕಷಾಯಗಳು: ಹಾಸ್ಯ, ರತಿ, ಆರತಿ, ಶೋಕ, ಭಯ, ಜಿಗುಪ್ಸೆ, ಸ್ತ್ರೀವೇದ, ಪುಂವೇದ, ನಪುಂಸಕವೇದ (ಕ್ರೋಧಮಾನಮಾಲೋಭಮೆಂಬೆಂಟುಂ ಕಷಾಯಮುಮಂ

ನವನೋಕಷಾಯಮುಮಂ ... ಎಡೆಯುಡುಗದೆ ಕಿಡಿಸಿ; **ಸುಕುಮಾಚ,** ೮. ೬೨ ವ), ನೋಡಿ. **ನೋಕಷಾಯ**

**ನವಪದಾರ್ಥ** – ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ ಎಂಬ ಒಂಬತ್ತು ತತ್ವಗಳು (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಜಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯)

**ನವಪ್ರತಿಶತ್ರುಗಳು** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಒಂಬತ್ತು ಮಂದಿ ಪ್ರತಿ ವಾಸುದೇವರು (ಅಶ್ವಗ್ರೀವ ತಾರಕ ಮೇರಕ ನಿಶುಂಭ ಮಧು (ಮಧುಕ್ರೀಡೆ) ಬಲಿ ಪ್ರಹರಣ ರಾವಣ ಜರಾಸಂಧರೆಂಬ ನವಪ್ರತಿಶತ್ರುಗಳಾದರ್: **ಚಾವುಂಡಜಯ,** ಪು. ೩೪೮)

**ನವಬಂಧ** – ನವನೋಕಷಾಯಗಳು (ಪುಂವೇದಾದಿ ನವಬಂಧಮುಮಂ ಮತ್ತಂ ಪ್ರತಿಸಮಯಪ್ರವರ್ತಮಾನ ಸಂಜ್ವಲನ ಚತುಃಕಷಾಯ ಘಾತಿತಾಶೇಷ ಅನುಭಾಗ ಅಶ್ವಕರ್ಣ ಕರಣಾಪೂರ್ವಕರಣ ಸ್ಪರ್ಧಕಾಭಿಘಾತದಿಂ ಅಂತರ್ಮುಹೂರ್ತ ಕಾಲದಿಂ ಕಿಡಿಸಿ: **ಆದಿಪು,** ೧೦. ೧೪ ವ)

**ನವವಿಧಪುಣ್ಯ** – ಚರಿಗೆ ನೀಡುವಾಗ ಅನುಸರಿಸಬೇಕಾದ ಒಂಬತ್ತು ಕ್ರಮಗಳು: ತ್ರಿಪ್ರದಕ್ಷಿಣೆ, ಉಚ್ಚಾಸನ ಸಮರ್ಪಣೆ, ಪಾದಪೂಜೆ, ಅರ್ಚನೆ, ಪ್ರಣಾಮ, ವಚನಶುದ್ಧಿ, ಕಾಯಶುದ್ಧಿ, ಮನಶ್ಶುದ್ಧಿ, ಏಷಣಾಶುದ್ಧಿ (ಇದಿರ್ಗೊಳ್ವುದು ಕಾಲ್ಗರ್ಚುವುದು ಉದಾತ್ತಮಪ್ಪೆಡೆಯೊಳ್ ಇರಿಪುದು ಎಱಗಿರ್ಪುದು ಕರಣಶುದ್ಧವಡೆವುದು ಪದೆದು ಅನ್ನವನೀವುದು ಎಂಬ ನವವಿಧಪುಣ್ಯಂ: **ಆದಿಪು,** ೪. ೯೬)

**ನವವಿಧಬ್ರಹ್ಮಚರ್ಯ** – ಮನಸ್ಸು, ದೇಹ, ಮಾತುಗಳಲ್ಲಿ ಪ್ರತಿಯೊಂದರಲ್ಲಿಯೂ ಕೃತ, ಕಾರಿತ, ಅನುಮೋದನ ಎಂಬ ಬಗೆಗಳು (ಅಷ್ಟಮಲವ್ಯಪೇತನುಂ ನವವಿಧ ಬ್ರಹ್ಮಚರ್ಯೋಪೇತನುಂ ... ಆಗಿ: **ಅಜಿತಪು,** ೩. ೧ ವ)

**ನಳಿನ** – ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ನಾಕಲೋಕ** – ಸ್ವರ್ಗ, ಇದರಲ್ಲಿ ಅರುವತ್ತಮೂರು ಪಟಲಗಳು (ನಾಕಲೋಕಮಱುವತ್ತು ಮೂಱು ಪಟಲಂ: **ಶಾಂತಿಪು,** ೧೨, ೬ ವ)

**ನಾಕಲೋಕದಾಕಾರ** – ಸ್ವರ್ಗದ ರಚನೆ (ಆ ನಾಕಲೋಕದಾಕಾರಮೆಂತೆಂದೊಡೆ ಮಂದರಶೈಳಮೂಳದಿಂ ಲೋಕಾಗ್ರಕ್ಕಮಗ್ರಮೆನಿಸಿದ ಸಪ್ತರಜ್ಜ್ವಾಯಾಮಕ್ಕೆ ವ್ಯೋಮದೊಳೇಕಲಕ್ಷಯೋಜನಂ ಕುಂದಿದೊಂದುವರೆರಜ್ಜುವರಂ ಷಷ್ಟಿಲಕ್ಷಸಂಖ್ಯಾನ ವಿಮಾನಂಗಳನೊಳಕೊಂಡು ಗಗನಮಂಡಳಮಂಡನನೆನಿಸಿ ಸೌಧರ್ಮೇಶಾನಕಲ್ಪದ್ವಯಂ ಅಲ್ಲಿಂ ಮೇಲೆ ತತ್ಪ್ರಮಾಣಾಯಾಮ ರಜ್ಜುವಿನೊಳ್

ವಿಂಶತಿಲಕ್ಷತ್ರಿದಶಸದನಶೋಭಿತ ಸನತ್ಕುಮಾರ ಮಾಹೇಂದ್ರ ಕಲ್ಪದ್ವಂದ್ವಂ ತತ್ಪ್ರಿಮಿತನಭೋಭಾಗದೊಳನುಕ್ರಮದಿಂದಾಙೆಡೆಯೊಳರ್ಧಾರ್ಧರಜ್ಜು ವಿಸ್ತಾರಿಗಳಾಗಿ ಚತುರ್ಲಕ್ಷವಿಬುಧಾಲಯೋಪಲಕ್ಷಿತ ಬ್ರಹ್ಮಬ್ರಹ್ಮೋತ್ತರಕಲ್ಪದ್ವಿತಯಂ ಪಂಚಾಶತ್ಸಹಸ್ರ ನಿರ್ಜರನಿವಾಸಾಂಚಿತ ಲಾಂತವಕಾಪಿಷ್ಠಕಲ್ಪಯುಗ್ಮಂ ಚತ್ವಾರಿಂಶತ್ಸಹಸ್ರದೇವಗೇಹಮಹಿತ ಶುಕ್ರಮಹಾಶುಕ್ರಕಲ್ಪಯುಗ್ಮಂ ಷಟ್ಸಹಸ್ರದಿವಿಜಭವನವಿನುತ ಶತಾರಸಹಸ್ರಾರಕಲ್ಪಯುಗಳಂ ಸಪ್ತಶತಾಮರಶಾಮಾಭಿರಾಮಾನನತ ಪ್ರಾಣಕಲ್ಪಯುಗಂ ಅರಣಾಚ್ಯುತಕಲ್ಪಯುಗದೊಳ್ ಶತಚತುಷ್ಟಯಂ ತದಗ್ರಿಮಭಾಗದೊಳೇಕರಜ್ಜುರಜ್ಜೂಚ್ಛ್ರಯ ವಿಯತ್ತಳದೊಳ್ ಮೇಲೆ ಮೇಲೆ ಲೀಲೆವಡೆದೇಕಾದಸೋತ್ತರಶತಾಮರ್ತ್ಯಹರ್ಮ್ಯರಮ್ಯಾಧಸ್ಥ ನವಗ್ರೈವೇಯಕತ್ರಯಂ ಸಪ್ತಾಧಿಕಶತಸುಮನಶ್ಶರಣಸಮುದಿತ ಮಧ್ಯಮಗ್ರೈವೇಯಕತ್ರಿತಯಮೇಕಾಗ್ರನವತಿನಾಕಿನಿವಸಲಸಿತೋಪರಿಮ ಗ್ರೈವೇಯಕತ್ರಯಂ ನವರತ್ನರಂಜಿತನವಾನುದಿಶೆ ಪಂಚರತ್ನಾಂಚಿತ ಪಂಚಾಣೂತ್ತರೆ ಚೆಲ್ವುವೆತ್ತಿರ್ಕುಂ ಇವೆಲ್ಲಂ ಕೂಡಿ ಚತುರಶೀತಿಲಕ್ಷಸಪ್ತಸನವತಿಸಹಸ್ರತ್ರಯೋವಿಂಶತಿ ಸಂಖ್ಯಾನಂಗಳು ಮಿಂದ್ರಕಶ್ರೇಡೀಬದ್ಧ ಪ್ರಕೀರ್ಣಕಾಭಿಧಾನಂಗಳುಂ ಸಂಖ್ಯಾತಾಸಂಖ್ಯಾತೋಭಯ ವಿಸ್ತಾರಂಗಳುಮಮರ ಸಮಿತಿರುಚಿರಚಿತ ನಿತ್ಯಪೂಜಾವಿರಾಜಿತಾವಳಯ ಜಿನನಿಳಯವಿಳಸಿತಂಗಳುಮಾಗಿರ್ಪುವು: **ಪಾರ್ಶ್ವನಾಪು,** ೫. ೬೭ ವ)

**ನಾಗಶಯ್ಯೆ** – ಮಧುರಾನಗರದ ಚೈತ್ಯಾಲಯದಲ್ಲಿ ಹುಟ್ಟಿದ ಹಾವಿನ ಹಾಸಿಗೆ, ಇದನ್ನು ಕೃಷ್ಣನು ವಶಪಡಿಸಿಕೊಳ್ಳುತ್ತಾನೆ (ಹರಿಯದೊಂದು ಪುಣ್ಯೋದಯದಿಂ ಶುಚಿ ನಾಗಶಯ್ಯೆಯುಂ ಶಾರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ: **ನೇಮಿನಾಪು,** ೮. ೨೬)

**ನಾಭಿನಗ** – ಮೇರುಪರ್ವತ (ನಾಲ್ಕು ನಾಭಿನಗಂಗಳಿಂದಂ ... ಚತುರ್ದಶಮಹಾವಾಹಿನಿಗಳಿಂದಂ ಎಸೆದು: **ಆದಿಪು,** ೧. ೪೮ ವ)

**ನಾಭಿರಾಜ** – ಆದಿತೀರ್ಥಂಕರನ ತಂದೆ (ನಾಭಿರಾಜ ಧರಣಿಯುವತಿಗೆ ಮರುದೇವಿಯೆದಲ್ ಸವತಿಯೆನಲ್ ಸುಖದಿಂದರಸುಗೆಯ್ಯುತಿರ್ದಂ: **ಪಂಪರಾ,** ೧. ೯೮)

**ನಾಭೇಯ** – ನಾಭಿರಾಜನ ಮಗ (ನಾಭೇಯ ಜಿನಮಹಾಜನ್ಮಾಭಿಷವ ಕ್ಷೀರವಾರಿಧಾರಾಪ್ರಸರಂ ಶೋಭಿಪ ನಿಜಕೀರ್ತಿಪತಾಕಾ ಭಾವದಿನೆಸೆದುದಂದು ಮಂದರಶೈಲಂ: **ಅಜಿತಪು,** ೨. ೬)

**ನಾಮಕರ್ಮ** – ನಾಮಕರಣ, ಒಂದು ಗರ್ಭಾನ್ವಯಕ್ರಿಯೆ, ಮಗುವಿಗೆ ಹೆಸರಿಡುವ ಕ್ರಿಯೆ (ನಾಮಕರ್ಮ ... ಅಗ್ರನಿರ್ವೃತಿಯೆಂಬಯ್ವತ್ತೊಂಬು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ); ನಾಲ್ಕು ವಿಧವಾದ ಅಘಾತಿಕರ್ಮಗಳಲ್ಲಿ ಒಂದು, ಆತ್ಮನಿಗೆ ಅನೇಕ ಪ್ರಕಾರವಾದ ಶರೀರ, ಅವಯವ, ರೂಪುಗಳನ್ನು ಉಂಟುಮಾಡುವ ಹಾಗೂ ತೊಂಬತ್ತಮೂರು

ಪ್ರಕೃತಿಗಳನ್ನು ಹೊಂದಿರುವ ಕರ್ಮ (ನಾಮಕರ್ಮಮುಂ ಪಿಂಡಾಪಿಂಡ ನಾಮದಿಂ ತೊಂಬತ್ತುಮೂಱು ತೆಱನಕ್కుం: **ಶಾಂತಿಪು,** ೧೨. ೧೧ ವ)

**ನಾಮಕರ್ಮಕ್ರಿಯೆ** – ನಾಮಕರಣ (ಪುಟ್ಟಿದೆರಡನೆಯ ದಿವಸಕ್ಕೆ ತಾಯಿಗಂ ತಂದೆಗಂ ಸುಖಾವಹಮಾಗೆ ಕೂಸಿನನುಕೂಲದೊಳ್ ಭಾವಾನುಸಾರದಿಂ ಬೆಳಯಿಸಿ ದೇವಋಷಿದ್ವಿಜರಿಂ ಪೂಜಿಸಿ ಸಂತಾನವೃದ್ಧಿನಿಮಿತ್ತಂ ಪ್ರಶಸ್ತನಾಮಮನ್ನಿಡುವುದಲ್ಲದಂದಷ್ಟೋತ್ತರ ಸಹಸ್ರನಾಮಮಂ ಓಲೆಗಳೊಳ್ ಬರೆದು ಕೊಡದೊಳಿಕ್ಕಿ ಒಂದು ಪೆಸರಂ ಕೈಕೊಳ್ವುದು ನಾಮಕರ್ಮಕ್ರಿಯೆ: **ಚಾವುಂಡಜಯ,** ಪು. ೧೮೧)

**ನಾಮಪರಾವರ್ತನ** – ಬೇರೆ ಬೇರೆ ಜನ್ಮಗಳಲ್ಲಿ ಬೇರೆ ಬೇರೆ ಹೆಸರುಗಳನ್ನು ಹೊಂದುವುದು (ಒಂದು ಪೆಸರನೊಮ್ಮೆ ಕೊಂಡು ಮತ್ತಂ ಪೆಸರ್ಗಳವೆನಿತುಮನೆಯ್ದೆ ಕೊಂಡು ಮುನ್ನಿನ ಕೊಂಡ ಕೆಲದ ಪೆಸರಂ ಕೊಂಡೊಡದೊಂದು ನಾಮಪರಾವರ್ತನಂ: **ಜೀವಸಂ,** ೫. ೨ ವ)

**ನಾರಕ** – ಜನ್ಮರೀತಿಗಳಲ್ಲಿ ಒಂದು, ನರಲೋಕದ ಜನ್ಮ (ನಾರಕ ತಿರ್ಯಕ್ ನರಬೃಂದಾರಕವೆನೆ ಗತಿಚತುಷ್ಟಂಯಂಗಳೆ ಸಲೆ ಸಂಸಾರದ್ರವ್ಯ ಕ್ಷೇತ್ರಾದ್ಯಾರೋಪಿತಭೇದದಿಂದಮದು ಪಂಚಾತ್ಮಂ: **ಪುಷ್ಪದಂಪು,** ೧೩. ೫೬), ನೋಡಿ **'ಚತುರ್ಗತಿ'**

**ನಾರಕಪಟಲ** – ಏಳು ನರಕಗಳ ಒಟ್ಟು ನಲವತ್ತೊಂಬತ್ತು ಸ್ತರಗಳು, ಒಂದೊಂದು ನರಕಕ್ಕೂ ಎರಡೆರಡು ಹೆಸರುಗಳು (ನಾರಕಪಟಲಂಗಳೆಂತೆನೆ ... ರತ್ನಪ್ರಭೆಯುಂ ಘಮೇಯಮೆಂಬ ಪ್ರಥಮಭೂಮಿಯುಂ ಶರ್ಕರಾಪ್ರಭೆಯುಂ ವಂಶೆಯೆಂಬೆರಡನೆಯ ಭೂಮಿಯುಂ ವಾಳೂಕಾಪ್ರಭೆಯುಂ ಶೈಲೆಯುಮೆಂಬ ತೃತೀಯ ಭೂಮಿಯುಂ ಪಂಕಪ್ರಭೆಯುಮಂಜನೆಯೆಂಬ ನಾಲ್ಕನೆಯ ಭೂಮಿಯುಂ ಧೂಮಪ್ರಭೆಯುಂ ಅರಿಷ್ಟೆಯುಮೆಂಬಯ್ದನೆಯ ಭೂಮಿಯುಂ ಶಮಃಪ್ರಭೆಯುಂ ಮಘವಿಯುಮೆಂಬಾಱನೆಯ ಭೂಮಿಯುಂ ತಮಃಪ್ರಭೆಯುಮಾಘವಿಯೆಂಬೆೞನೆಯ ಭೂಮಿಯುಮೊಂದೊಂದಕ್ಕೆಡೆರೆರಡು ಪೆಸರಕ್ಕುಂ: **ಶಾಂತಿಪು,** ೭. ೮೪ ವ)

**ನಾಲ್ವತ್ತೊಂದು ಪ್ರಕೃತಿಗಳು** – ಆತ್ಮನನ್ನು ಬಂಧಿಸುವ ಅಂಶಗಳು (ದರ್ಶನಾವರಣೀಯದೊಳ್ ಸ್ತ್ಯಾನಗೃದ್ಧಿತ್ರಯಮುಂ ಮೋಹನೀಯದೊಳ್ ಮಿಥ್ಯಾತ್ವತ್ರಿತಯಮುಮನಂತಾನುಬಂಧಿ ಚತುಷ್ಟಯಮುಂ ನಪುಂಸಕವೇದಮುಂ ಸ್ತ್ರೀವೇದಮುಂ ಆಯುಷ್ಯದೊಳ್ ನರಕತಿರ್ಯಗಾಯುಷ್ಯಮುಂ ನಾಮಕರ್ಮದೊಳ್ ನರಕದ್ವಿಕಮುಂ ತಿರ್ಯಕ್ದ್ವಿಕಮುಂ ಮೊದಲಿಂದ್ರಿಯಚತುಷ್ಕಮುಂ ಕಡೆಯಯ್ದುಂ ಸಂಸ್ಥಾನಮುಂ ಕಡೆಯಯ್ದುಂ ಸಂಹನನಮುಂ ಉದ್ಯೋತಮುಂ ಪ್ರಶಸ್ತ ವಿಹಾಯೋಗತಿಯುಂ ಸ್ಥಾವರಮುಂ ಸೂಕ್ಷ್ಮತ್ರಯಮುಂ ದುರ್ಭಗತ್ರಯಮುಂ ಗೋತ್ರಕರ್ಮದೊಳ್ ನೀಚೈರ್ಗೋತ್ರಮುಮೆಂಬ ನಾಲ್ವತ್ತೊಂದು ಪ್ರಕೃತಿಗಳ ಬಂಧಾನುಬಂಧನೆಂದಿಂಗಮೊಲ್ಲೆನ್: **ಆಚವರ್ಧ,** ೧೨. ೩೮ ವ)

**ನಿಃಕಾಂಕ್ಷೆ** – ಆಸೆಯನ್ನು ಬಿಡುವುದು (ಇಹಲೋಕ ವಿಷಯೋಪಭೋಗಕಾಂಕ್ಷೆಯುಮುಮಂ ಪರಶ್ರುತಿಕಾಂಕ್ಷೆಯುಮಂ ಪತ್ತುವಿಡುವುದು ನಿಃಕಾಂಕ್ಷೆ: **ಚಾವುಂಡಜಯ,** ಪು. ೨೦೬)

**ನಿಃಪ್ರವೀಚಾರ** – ದೇಹಸಂಪರ್ಕವಿಲ್ಲದೆ ಸುಖವನ್ನು ಅನುಭವಿಸುವವನು (ನಿಃಪ್ರವೀಚಾರಸುಖನುಂ ಸಪ್ರವೀಚಾರಾಂತಗುಣನುಂ ... ಆಗಿ ... ದಿವ್ಯಸುಖಮಂ ಅನುಭವಿಸುತ್ತುಮಿರ್ದಂ: **ನೇಮಿನಾಪು,** ೪. ೬೫ ವ)

**ನಿಃಶಲ್ಯ** – ಮುಳ್ಳಿನಂತೆ ನೋವನ್ನುಂಟುಮಾಡುವ ಮಿಥ್ಯಾ ಮಾಯಾ ನಿದಾನ ಎಂಬ ಮೋಹಗಳನ್ನು ನಿವಾರಿಸಿಕೊಂಡವನು (ಶಲ್ಯಂಗಳಿರ್ದೊಡಂ ವೈಕಲ್ಯಕ್ಕೆಡೆಗುಡದೆ ಧೃತಿಯನವಳಂಬಿಸಿ ನಿಃಶಲ್ಯನೆನಿಸಿದ ವಾತ್ಸಲ್ಯಪರಂ ಪರಮತತ್ತ್ವಮಂ ಭಾವಿಸಿದಂ: **ಪಾರ್ಶ್ವನಾಪು,** ೧೨. ೮೯

**ನಿಃಶೀಲವ್ರತ** – ಸಪ್ತಶೀಲವ್ರತಗಳನ್ನು ಆಚರಿಸದಿರುವುದು (ನಿಃಶೀಲವ್ರತಮನುಷ್ಯ ತಿರ್ಯಗ್ಜೀವಂಗಳ್ ದಾನಾನುಮೋದನದಿಂ ಪರಸ್ಪರವಿರೋದವಿರಹಿತ ಪಂಚೇಂದ್ರಿಯತಿರ್ಯಗ್ಜಾತಿಗಳಾಗಿ ಪುಟ್ಟಿ: **ಸುಕುಮಾಚ,** ೧೧. ೫೪ ವ), ನೋಡಿ, **'ಸಪ್ತಶೀಲ'**

**ನಿಕೃತಿವಿಚ್ಛೇದಿನಿ** – ಮಾಯಾನಿವಾರಣ ವಿದ್ಯೆ (ಅವಳೋಕಿನೀ ರೋಹಿಣಿ ಗರುಡವಾಹಿನಿ ವಿದ್ಯೆ ನಿಕೃತಿವಿಚ್ಛೇದಿನಿಯೆಂ(?)ದಿವು ಮೊದಲಾಗಿರೆ ಪಲವುಮನವದಾತಯಶಂಗೆ ಕೇಶವಂಗಂದಿತ್ತಂ: **ವರ್ಧಮಾಪು,** ೪. ೩೦)

**ನಿಕ್ಷೇಪ** – ನಾಮ, ಸ್ಥಾಪನ, ದ್ರವ್ಯ ಮತ್ತು ಭಾವಗಳೆಂಬ ನಾಲ್ಕು ಸಾಧನಗಳ ಮೂಲಕ ಸಮಸ್ತ ವಸ್ತುಸ್ವರೂಪವನ್ನು ಅರಿಯುವ ಬಗೆ (ಪ್ರಮಾಣ ನಯ ನಯ ನಿಕ್ಷೇಪಂಗಳಿಂ ಯಥಾವಸ್ಥಿತಿ ಸಮಸ್ತವಸ್ತುಸ್ವರೂಪಮಂ ನಿಶ್ಚಯಮಾಗಿರಲಱಿವುದು ಸಮ್ಯಜ್ಞಾನಮೆಂಬುದಕ್ಕುಂ: **ಸುಕುಮಾಚ,** ೬.೮ ವ)

**ನಿಖಿಲಸಮತೆ** – ಶಿಕ್ಷಾವ್ರತಗಳಲ್ಲಿ ಒಂದು, ಭೇದವಿಲ್ಲದೆ ಎಲ್ಲ ಜೀವಗಳನ್ನೂ ಸಮಾನಭಾವನೆಯಿಂದ ಕಾಣುವುದು (ತೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತಂ ಇದು ನಾಲ್ಕು ತೆಱಂ: **ಶಾಂತಿಪು,** ೧. ೯೦)

**ನಿಗೋದ** – ಅನಂತಜೀವಗಳಿಗೆ ಒಂದೇ ನಿವಾಸವನ್ನು ನೀಡುವುದು ನಿಗೋದ, ಒಂದೇ ವಿಧವಾದ ಕರ್ಮವನ್ನು ಮಾಡಿರುವ ಅನೇಕ ಜೀವಗಳಿಗೆಲ್ಲ ಒಂದೇ ಶರೀರವಿರುತ್ತದೆ; ಬದುಕಿನ ಎಲ್ಲ ಅನುಭವಗಳೂ ಸಮಾನರೂಪವಿರುತ್ತದೆ, ಒಂದು ಜೀವ ಯಾತನೆಯನ್ನು ಅನುಭವಿಸಿದರೆ ಎಲ್ಲ ಜೀವಗಳೂ ಯಾತನೆಯನ್ನನುಭವಿಸಬೇಕು; ಏಳು ನರಕಭೂಮಿಗಳ ಕೆಳಗೆ ಒಂದು ರಜ್ಜುಪ್ರಮಾಣಕ್ಷೇತ್ರದಲ್ಲಿ ತಮೋಮಯವಾದ ಶೂನ್ಯದಲ್ಲಿ ಈ ನಿಗೋದಶರೀರವಿರುತ್ತದೆ (ಸಂಭಿನ್ನ ಮಹಾಮತಿಗಳ್ ಗಂಭೀರ ನಿಗೋದದೊಳ್ ತಮೋಮಯದೊಳ್ ದುಃಖಾಂಬೋಧಿಯ ಕಡೆಗಾಣದೆ ಜೃಂಭಿತ ದುಷ್ಕರ್ಮದಿಂದೆ ನಮೆದಪರಿನ್ನು: **ಆದಿಪು,** ೫. ೭೬)

**ನಿತ್ಯನಿಗೋದ** – ಏಳನೆಯ ನರಕಕ್ಕಿಂತ ಕೀಳಾದ ಜಾಗ (ಆ ನರಕಂಗಳೇೞಱಿಂ ಕೆೞಗೆ ನಿತ್ಯನಿಗೋದಮೆಂಬ ನರಕಮಿರ್ಪುದು: **ಮಲ್ಲಿನಾಪು,** ೧೩. ೧೨೨ ವ)

**ನಿದಾನ** – ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂಬ ಆಸೆ (ಪಲಕಾಲಂ ತಪಂಗೆಯ್ದುವಸಾನಕಾಲದೊಳ್ ನಿದಾನಪೂರ್ವಕಂ ಸತ್ತಶನಿಘೋಷನಾಗಿ ಪುಟ್ಟಿ: **ಶಾಂತಿಪು,** ೭. ೪೪ ವ)

**ನಿದಾನಂಗೆಯ್** – ಮುಂದಿನ ಜನ್ಮದಲ್ಲಿ ಇಂಥದೇ ಸುಖಪಡೆಯಬೇಕೆಂದು ಆಶಿಸು (ನಂದಯಶೆಗಂತಿಯರ್ ಎಮಗೆ ಮಱುಭವದೊಳಂ ಇವರರೆ ಮಕ್ಕಳಕ್ಕೆಂದು ನಿದಾನಂಗೆಯ್ಯೆ: **ಕರ್ಣನೇಮಿ,** ೬. ೫೮ ವ)

**ನಿದಾನಫಲ** – ಹಿಂದಿನ ಜನ್ಮದ ಕೊನೆಯಲ್ಲಿ ಕೈಗೊಂಡ 'ನಿದಾನ'ದ ಪರಿಣಾಮ (ಇಂತು ವಿಗತಜೀವಿತೆಯಾಗಿ ನಿದಾನಫಲದಿಂದಾ ತ್ರಿವೇದಿಯ ಗರ್ಭದೊಳ್ ನೆಲಸುವುದುಂ: **ಸುಕುಮಾಚ,** ೫. ೪೮ ವ)

**ನಿದಾನಶಲ್ಯ** – ವ್ರತಗಳನ್ನು ಆಚರಿಸುವವನಿಗೆ ಉಂಟಾಗುವ ಮೂರು ಬಗೆಯ ಶಲ್ಯಗಳಲ್ಲಿ – ಮಾಯಾಶಲ್ಯ, ಮಿಥ್ಯಾಶಲ್ಯ ಮತ್ತು ನಿದಾನಶಲ್ಯ – ಒಂದು; ಭವಿಷ್ಯಜನ್ಮದಲ್ಲಿ ಇಂಥ ವಿಷಯೋಪಭೋಗಗಳು ದೊರೆಯಲೆಂದು ಆಶಿಸುವುದು (ಅನ್ಯ ಜನ್ಮದೊಳಪ್ಪೊಡಂ ನಿನ್ನಂ ಕೊಲ್ವೆನಕ್ಕೆ ಎಂದು ನಿದಾನಶಲ್ಯದಿಂ ಮುಡಿಪಿ: **ಚಾವುಂಡಜಯ** ಪು. ೧೨೦, ಸಾ ೧೬)

**ನಿದಾನೆ** – ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂದು ಆಸೆ ಹೊಂದಿದವಳು (ಮಱುಭವದೊಳುಮಿವರೆ ಮಕ್ಕಳಕ್ಕೆಂದು ನಿದಾನಂಗೆಯ್ಯೆ ... ತಾನುಂ ನಿದಾನೆಯಾದಳ್: **ಕರ್ಣನೇಮಿ,** ೬. ೫೮ ವ)

**ನಿದ್ರಾದರ್ಶನಾವರಣೀಯ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು, ನಡೆಯುವವರನ್ನು ನಿಲ್ಲುವಂತೆ, ನಿಂತವರನ್ನು ಕುಳ್ಳಿರುವಂತೆ, ಕೂತವರನ್ನು ಮಲಗುವಂತೆ ಮಾಡುವುದು (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ನಿದ್ರಾ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ನಿದ್ರಾನಿದ್ರಾ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿಒಂದು, ನಿದ್ರೆಯ ಅತಿಯಿಂದ ಕಣ್ಣೇ ತೆರೆಯದಂತೆ ಮಾಡುವುದು (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ನಿದ್ರಾಪ್ರಬೋಧಿನಿ** – ನಿದ್ದೆಯಿಂದ ಎಚ್ಚರಗೊಳಿಸುವಂಥದು (ನಿದ್ರಾಪ್ರಬೋಧಿನಿಯೆಂಬ ದಿವ್ಯ ಬಾಣದಿಂ ಸುಗ್ರೀವಂ ಹನುಮಂ ಮೊದಲಾಗೆ ಮಿಕ್ಕ ನಾಯಕರ ನಿದ್ರಾಮುದ್ರೆಯಂ ಕಳೆವುದುಂ: **ಪಂಪರಾ,** ೧೩. ೧೩೨ ವ)

**ನಿಧಿ** – ಐಶ್ವರ್ಯ (ನಿಧಿಯೆಂಬುದು ಪರಮಗುಣನಿಧಿಯನರ್ಹದ್ದೇವನನಾರಾಧಿಸಿ ತನ್ನ ನಿಧಿದ್ರವ್ಯಂಗಳಂ ಪತ್ತುವಿಟ್ಟು ದೀಕ್ಷೆಯೊಳ್ ನೆಗಟಿಳ್ದೊಡೆ ದಿವ್ಯವಿಜಯ ಪರಮನಿಧಿಗಳ್ಗಧೀಶನಕ್ಕುಂ: **ಚಾವುಂಡಜಯ,** ಪು. ೧೯೩)

**ನಿಧಿಪುರುಷ** – ನವನಿಧಿಗಳುಳ್ಳವನು, ಚಕ್ರವರ್ತಿ (ನಿಧಿಪುರುಷಂ ಪುಟ್ಟುವುದುಂ ನಿಧಿಗಂಡುದು ನಿಖಿಳಲೋಕಮೆನೆ ಜನನದೊಳತ್ಯಧಿಕೋತ್ಸವದಿಂದಧನರ್ಗಧನತೆ ತಲೆದೋಱದಂತು ಪಾರ್ಥಿವನಿತ್ತಂ: **ಪಾರ್ಶ್ವನಾಪು,** ೭. ೮೪)

**ನಿಧಿಸಮಿತಿ** – ನವನಿಧಿಗಳ ಗುಂಪು (ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷರಕರೆಸೆಗುಂ: **ಚಂದ್ರಪ್ರಪು,** ೧೫. ೫೪)

**ನಿಧೀಶ** – ಚಕ್ರವರ್ತಿ (ಬಾಹುಬಲಿ ತನ್ನಿಂದಂ ನೀಧೀಶಂಗೆ ವಂಶಜರಾಜ್ಯಾಂಭಿಷವೋತ್ಸವಮಂ ನೆಗಟ್ದುದೆಂದಾಶಂಕೆಯಂ ಮಾಡಿದಂ: **ಆದಿಪು,** ೧೪. ೧೩೩)

**ನಿಮೇಷ** – ಒಂದು ಕಾಲ ಪರಿಮಾಣ, ಇದಕ್ಕೆ ಲವ ಎಂತಲೂ ಹೆಸರಿದೆ, ಏಳು ಸ್ತೋಕಗಳಷ್ಟು ಕಾಲ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬.೬೮ ವ);

**ನಿಯತಿ** – ವಿಧಿ (ನಿಯತಿಯನಾರ್ ಮೀಱಿದಪರ್ ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ: **ಯಶೋಧಚ,** ೧. ೪೯)

**ನಿರನ್ವೇಷಣ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು, ಭೋಗಗಳನ್ನಪೇಕ್ಷಿಸದೆ ನಡೆದುಕೊಳ್ಳುವುದು (ನಿರನ್ವೇಷಣಮೆಂಬುದು ಭೋಗೋಪಭೋಗ ಪೂಜಾವಂದನೈಶ್ವರ್ಯಾದಿಗಳನಪೇಕ್ಷಿಸದೆ ಭವ್ಯ ಪುಂಡರೀಕ ನಡೆವ ಧರ್ಮಂ: **ಚಾವುಂಡಜಯ,** ಪು.. ೮)

**ನಿರಯ** – ಏಳನೆಯ ನರಕ (ದುರಘಕುಳಮೆನಿಪ ನಿರಮಯನಿಯದೆಯ್ದಿಪ ನಿರಯದೂತಿ ನಿದ್ರಾಮಿಷದಿಂದ ಇರದುಯ್ವಂತಿರೆ ನಿದ್ರಾಭರದಿಂದ ಅತ್ಯಯ ಮನೆಯ್ದಿದಂ ಚಕ್ರಧರಂ: **ಶಾಂತೀಶ್ವಪು,** ೫. ೨೨)

**ನಿರಯಕ್ಷೇತ್ರ** – ನರಕಪ್ರದೇಶ (ಖರಪಂಕಸಲಿಲಭಾಗಂ ನಿರಯಕ್ಷೇತ್ರಕ್ಕೆ ಮೂದೆಱಂಬಿಲ: **ಮಲ್ಲಿನಾಪು,** ೧೩. ೯೯)

**ನಿರಾಕಾರ** – ಯಾವುದೇ ಫಲಾಪೇಕ್ಷೆಯಿಲ್ಲದೆ ಮರಣಾಂತಿಕವಾಗಿ ಮಾಡುವ ಉಪವಾಸ (ಸಾಕಾರ ನಿರಾಕಾರವಿರಹಿತಂ ಉಪವಾಸಂ: **ಶಾಂತಿಪು,** ೬. ೪೯ ವ)

**ನಿರಾಸ್ರವ** – ಕರ್ಮದಿಂದ ಬಿಡುಗಡೆಗೊಂಡವನು (ಕಾಲಾಂತರದೊಳಾ ಜಿನಂ ವೃಜಿನಮಂ ತವಿಸುತ್ತೆ ನಿರಾಸ್ರವಂ ತ್ರಿಲೋಕಾಂತಮನೆಯ್ದೆ: **ಶಾಂತಿಪು,** ೧೨. ೪೬), ನೋಡಿ, 'ಆಸ್ರವ'

**ನಿರಿಂದ್ರಿಯಸುಖ** – ಇಂದ್ರಿಯಗಳಿಗೆ ಹೊರತಾದ ಸುಖ (ದುರೀಂದ್ರಿಯಸುಖಕ್ಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ ನಿರಿಂದ್ರಿಯಸುಖಕ್ಕೆ ನಾಡೆ ಮನವಿಟ್ಟು ಸರ್ವಸ್ವಮಂ ಜರತ್ ತೃಣಸಮಾನವಾಗೆ ಬಗೆದು: **ಸುಕುಮಾಚ,** ೧೦. ೩೧)

**ನಿರುಪಾದಾನ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು, ಸುಖವಸ್ತುಗಳನ್ನು ಅಪೇಕ್ಷಿಸದ ಮನೋಭಾವ (ನಿರುಪಾದಾನಮೆಂಬುದು ಶಯನಾಸನ ವಸ್ತ್ರಚ್ಛತ್ರೋಪಾನತ್ಕನಕ ಭಾಜನಾದಿಗಳುಮಂ ಪೆಱವುಂ ಸುಖಾಪಾದನಂಗಳುಮನಪೇಕ್ಷಿಸದೆ ಪ್ರವರ್ತಿಸುವ ಧರ್ಮಂ: **ಚಾವುಂಡಜಯ,** ಪು.. ೮)

**ನಿರ್ಗ್ರಂಥ** – ಬತ್ತಲೆ (ಬಸಿರ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡೆ: **ವಡ್ಡಾರಾ,** ೯೦. ಸಾ ೧೨); ಬತ್ತಲೆ ಜೈನಮುನಿದೀಕ್ಷೆ (ಹಿಂಸೆಯಿಲ್ಲದಿಪುದೆ ಧರ್ಮಂ ಭಾವಿಸೆ ನಿರ್ಗ್ರಂಥಮೆ ತಪಂ: **ಕರ್ಣನೇಮಿ,** ೧. ೮೪)

**ನಿರ್ಗ್ರಂಥಯತಿ** – ಜೈನಸನ್ಯಾಸಿ (ಮತ್ತೊಂದು ದಿವಸಮೊರ್ಮೆ ನಿರ್ಗ್ರಂಥಯತಿಗೆ ಭೈಕ್ಷಭಾಜನಮಂ ಕೊಂಡು: **ವಡ್ಡಾರಾ,** ಪು. ೯೨, ಸಾ. ೯)

**ನಿರ್ಗ್ರಂಥರೂಪು** – ದಿಗಂಬರತ್ವ, ಬತ್ತಲೆ (ವಜ್ರನಾಭಿ ನಿಜದ ರೂಪುಮಂ ನಿರ್ಗ್ರಂಥರೂಪುಮಂ ಕೈಗೊಂಡು ನೆಗಲ್ದಂ: **ಆದಿಪು,** ೬. ೨೭)

**ನಿರ್ಜರಾತತ್ತ್ವ** – ಏಳು ತತ್ವಗಳಲ್ಲಿ ಒಂದು (ಜೀವತತ್ತ್ವಮಜೀವತತ್ತ್ವಮಾಸ್ರವತತ್ತ್ವಂ ಬಂಧತತ್ತ್ವಂ ಸಂವರಾತತ್ತ್ವಂ ನಿರ್ಜರಾತತ್ತ್ವಂ ಮೋಕ್ಷತತ್ತ್ವಮೆಂಬ ಸಪ್ತತತ್ತ್ವರೂಪಮುಮಂ ... ಕೈಕೊಂಡು; **ಸುಕುಮಾಚ,** ೩. ೩೯ ವ)

**ನಿರ್ಜರಾವಿಧಿ** – ಕರ್ಮಗಳನ್ನು ನಾಶಪಡಿಸುವ ಕ್ರಮ (ಯಥಾಪ್ರಯೋಗಸಮಯ ಪ್ರತಿಸಮಯಂಗಳನಂತಗುಣಹಾನಿರೂಪ ನಿರ್ಜರಾವಿಧಿಯಿನಾಯುಃ ಕರ್ಮಮುಱಿಯಲುಱಿದ ಕರ್ಮಂಗಳ ಪ್ರಕೃತಿಸ್ಥಿತ್ಯನುಭಾಗಂಗಳಂ ಕಱಿಲ್ಚಿ ಕಳೆಯುತ್ತುಂ: **ಸುಕುಮಾಚ,** ೮. ೬೨ ವ)

**ನಿರ್ಜರಿಸು** – ಕರ್ಮಕ್ಷಯಿಸುವಂತೆ ಮಾಡು (ಕರಣಮನುಪಶಮಿಸುವ ನಿರ್ಜರಿಸುವ ಕರ್ಮಂಗಳಂ ಶುಭಧ್ಯಾನಮನುದ್ಧರಿಸುವ ಬಗೆಯಿಂ ತಳೆದು ಗುರುವರ ಧೃತಿನಾಮಧೇಯಮಪ್ಪತಶನಮಂ: **ಮಲ್ಲಿನಾಪು,** ೧೧. ೧೫)

**ನಿರ್ಜರೆ** – ಸಪ್ತತತ್ವಗಳಲ್ಲಿ ಒಂದು, ನಿರ್ಜರಾತತ್ವ, ಕಾಲಾನುಗುಣವಾಗಿ ಅನುಭವಿಸುವುದಕ್ಕೂ ತಪೋನಿಮಿತ್ತಕ್ಕೂ ಸವಿಪಾಕ ಅವಿಪಾಕರೂಪದಿಂದ ಪೂರ್ವಾರ್ಜಿತ ಕರ್ಮವನ್ನು ತೊಡೆದುಹಾಕುವಂಥದು (ನಿರವದ್ಯ ಮಹಾವ್ರತದಿಂ ವರಸಮಿತಿಗಳಿಂ ತ್ರಿಗುಪ್ತಿಯಿಂದ ಆಸ್ರವಮಂ ದುರಿತಾರಾತಿಗಳಂ ನಿರ್ಜರಿಸುವ ತಾತ್ಪರ್ಯಮದುವೆ ನಿರ್ಜರೆಯೆನಿಕುಂ: **ಸುಕುಮಾಚ,** ೧೨. ೩೬)

**ನಿರ್ಮಾಣ** – ಒಂದು ಬಗೆಯ ನಾಮಕರ್ಮ, ಯಾವುದರಿಂದ ಶರೀರದ ಅಂಗೋಪಾಂಗಗಳು ನಿಯಮಿತ ಸ್ಥಳದಲ್ಲಿ ರಚನೆಯಾಗಲು ಕಾರಣವಾಗುತ್ತದೋ ಅದು (ಅಗುರುಲಘುತ್ವ ಚತುಷ್ಕವಿಹಾಯೋಗತಿದ್ವಿಕಸ್ಥಿರಾಸ್ಥಿರಶುಭಾಶುಭ ಸುಸ್ವರದುಸ್ವರ ಸುಭಗದುರ್ಭಗ ಪ್ರತ್ಯೇಕಶರೀರಾಯಶಸ್ಕೀರ್ತಿರನಾದೇಯನಿರ್ಮಾಣ ಪರ್ಯಾಪ್ತನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ; **ಆದಿಪು,** ೧೬. ೨೩ ವ)

**ನಿರ್ಮುಕ್ತಿ** – ಬಿಡುಗಡೆ, ಮೋಕ್ಷ (ಶ್ರೀಪ್ರಭವಮುನಿಪ್ರಭುವ ಪಾದಮೂಲದೊಳ್ ನಿಷ್ಕೃತ ದಿಗಂಬರಶ್ರೀಕನಾಗೆ ನಿಖಿಲಕರ್ಮನಿರ್ಮುಕ್ತಿಯಿಂ ಪ್ರಾಪ್ತ ಸಪ್ತಪರಮಸ್ಥಾನನಾದಂ: **ಚಂದ್ರಪ್ರಪು,** ೪. ೨೪ ವ)

**ನಿರ್ಯಾಪಕಾಚಾರ್ಯ** – ಸಲ್ಲೇಖನ ವ್ರತವನ್ನು ಉಪದೇಶಿಸುವ ಗುರು (ಆಗಳ್ ಆ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯನಾಗಿ ಪಂಚಗುರುಸಮಕ್ಷದೊಳ್ ... ಮಹಾಬಳನಂ ಜಾತರೂಪಧರನಂ ಮಾಡಿ: **ಆದಿಪು,** ೨. ೫೧ ವ)

**ನಿರ್ವಾಣಪದ** – ಮೋಕ್ಷಪದವಿ (ನಿರ್ವಾಣಪದಸ್ಥಿತನಂ ... ಸರ್ವೇಶ್ವರನಂ ಪೊಗೞ್ವುದಪೂರ್ವ ಗುಣಸ್ತುತಿಶತಂಗಳಿಂ ಮತಿವಂತಂ: **ಸಮಯಪ,** ೧. ೫೩)

**ನಿರ್ವಾಣಪೂಜೆ** – ನಿರ್ವಾಣಕ್ಷೇತ್ರದ ಪೂಜೆ (ಅಂತು ನಿರ್ವಾಣಪೂಜೆಗೆ ನಿಖಿಲ ಗೀರ್ವಾಣಪತಿಗಳೆಟ್ಟಿರ್ಪಾಗಳ್: **ಪಂಪರಾ,** ೧೬. ೮೫ ವ)

**ನಿರ್ವಾಣಭೂಮಿ** – ನಿರ್ವಾಣಕ್ಷೇತ್ರ (ನಿರ್ವಾಣಭೂಮಿಯನನೇಕ ಸುರಭಿ ಸುರತರುಕುಸುಮ ಗಂಧಾಕ್ಷತಂಗಳಿಂದಮರ್ಚಿಸಿ: **ಆದಿಪು,** ೧೬. ೨೫ ವ)

**ನಿರ್ವಾಣಸುಖ** – ಮೋಕ್ಷಸುಖ (ವಸುಧೇಶಸುಖಂ ಗೀರ್ವಾಣಸುಖಂ ನಿರ್ವಾಣ ಸುಖಮುಮಂ ಕ್ರಮದಿಂ ಪೊರ್ದಿಸಲಾರ್ಪ ಧರ್ಮಮಂ: **ಸಮಯಪ,** ೪. ೯೩)

**ನಿರ್ವಿಚಿಕಿತ್ಸೆ** – ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಒಂದು; ಮುನಿಗಳು ಮುಂತಾದವರ ರೋಗಾದಿಗಳನ್ನು ಅಸಹ್ಯಪಟ್ಟುಕೊಳ್ಳದೆ ಶುಶ್ರೂಷೆಗೈಯುವುದು (ನಿರ್ವಿಚಿಕಿತ್ಸೆಯೊಳ್ ಅಱಿದು ಆರ್ತುರ್ವರೆ ಕೈಕೊಂಡು ಬಣ್ಣಿಸಲ್ನೆಗಟ್ದ ನರಂ ನಿರ್ವಾಣ ಪದದೊಳಿರಿಸುವ ಸರ್ವಜ್ಞಶ್ರೀಗೆ ಮೊತ್ತಮೊದಲಿನಕ್ಕುಂ: **ಧರ್ಮಾಮೃ,** ೪. ೨)

**ನಿರ್ವೇಗ** – ಜುಗುಪ್ಸೆ, ಬೇಸರ (ಆ ಪುರುಷನತಿಪರುಷವಚನಂಗಳಿಂ ತಿರಸ್ಕರಿಸಿ ನುಡಿದೊಡದುವೆ ನಿರ್ವೇಗಂ ಸಂವೇಗದಿಂ ಪುಟ್ಟಿ: **ಸುಕುಮಾಚ,** ೫. ೭ ವ):

ವೈರಾಗ್ಯಭಾವನೆ, ವಿರಕ್ತಿ (ಧರೆಯಂ ರಾಮಂಗಿತ್ತಂ ಗುರುವಾನಳಿಪಿಂದ ಮೊದೊರ್ಡೆನಗಕ್ಕುಂ ಕಿಂಕರಭಾವಮೆಂಬ ಬಗೆಯಿಂ ಭರತಂಗೊಡರಿಸಿ ದುದಕ್ಕುಮೀ ನಿರ್ವೇಗಂ: **ಪಂಪರಾ,** ೬. ೮೯)

**ನಿರ್ವೇಗತ್ರಯ** – ಮೂರು ಬಗೆಯ ವೈರಾಗ್ಯ: ಸಂಸಾರನಿರ್ವೇಗ, ಶರೀರನಿರ್ವೇಗ, ಭೋಗನಿರ್ವೇಗ (ಧಾತ್ರಿಗೆ ನೆಗಟ್ದಿ ವಿದೇಹಕ್ಷೇತ್ರದೊಳ್ ಅರ್ಹಾಭಿಧಾನಯಪ್ಪಂದಿರ ರತ್ನತ್ರಯಮಂದಿನ ನಿರ್ವೇಗತ್ರಯಂ ಒಡನೊಡನೆ ಬಂದುವಾಗಡೆ ಜಿನನಾ: **ಅಜಿತಪು,** ೬. ೪೯)

**ನಿರ್ವೇಗರಸ** – ವೈರಾಗ್ಯಭಾವನೆ (ಮುನ್ನಾವ ಶೋಕರಸಮೆಲ್ಲಂ ಪೋಗಿ ನಿರ್ವೇಗರಸಂ ಪುಟ್ಟಿ ಸಿದ್ಧರಸಮಂ ಮುಟ್ಟಿದ ಲೋಹದಂತೆ ಶುದ್ಧಾಂತರಂಗನಾಗಿ: **ಆದಿಪು,** ೩. ೫೬ ವ); ವಿರಕ್ತ (ಅದಂ ಕಂಡಪಗತಮೋಹರಸನುಪಗತನಿರ್ವೇಗನುಮಾಗಿ ಹೇಯಂ ಸಾಮ್ರಾಜ್ಯಮುಪಾದೇಯಂ ಪ್ರವ್ರಜ್ಯಮೆಂದು ಮಾಣದೆ ರಾಜ್ಯಶ್ರೀಯಂ ಕೊಟ್ಟಂ: **ಆದಿಪು,** ೧೬. ೩೪ ವ ಮತ್ತು ೩೫)

**ನಿರ್ವೇದನಿ** – ನಾಲ್ಕು ಬಗೆಯ ಧರ್ಮಕತೆಗಳಲ್ಲಿ ಒಂದು; ಪಾಪಫಲವನ್ನು ನಿರೂಪಿಸುವುದು (ದರ್ಪದಿಂ ಪ್ರಮಾದದಿಂದಾದ ಪಾಪಫಲಮಂ ಪೇಳ್ವುದು ನಿರ್ವೇದನಿಯುಮೆಂಬುದು: **ಚಾವುಂಡಜಯ,** ಪು. ೩೨೬), ನೋಡಿ, **'ಧರ್ಮಕಥೆ'**

**ನಿಶ್ಚಯಸಮ್ಯಕ್ತ್ವ** – ಸಮ್ಯಕ್ತ್ವವನ್ನು ಸಾಧಿಸುವ ಮನೋಭಾವ (ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳಂ ಏಜೆಸಿಕೊಂಡು ಪಡಿಕಮಣಂಗೇಳ್ದ ತದನಂತರಂ ನಿಶ್ಚಯಸಮ್ಯಕ್ತ್ವಮಂ ಕೈಕೊಂಡು: **ವಡ್ಡಾರಾ,** ಪು ೨೮, ಸಾ ೨೬)

**ನಿಶ್ಚಲಪಕ್ಷ್ಮ** – ಮಿಟುಕಿಸದ ರೆಪ್ಪೆಯವನು (ಲಲಿತಮುಖಸರಸಿಜಂ ನಿಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕಣ್ಣೊಳೆ ತವೆ ಪೀರ್ವವೊಲೇ ನಿಶ್ಚಳತನು ನಡೆ ನೋಡೆ ಭರತರಾಜಂ ಸೋಲ್ತಂ: **ಆದಿಪು,** ೧೪. ೧೦೫)

**ನಿಶ್ಶಂಕೆ** – ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಮೊದಲನೆಯದು, ಜಿನಮತದಲ್ಲಿ ಸಂಶಯವಿಲ್ಲದಿರುವುದು (ಆ ದರ್ಶನಸೌಖ್ಯಕ್ಕೆ ಅಷ್ಟಾಂಗಮುಂ ಶರೀರಕ್ಕೆ ಅವಯವಮುಂ ಶಾಖೆಯುಂ ಎಂತು ಅಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಆಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯೆಂದು ಎಸೆವಂಗಮೆಂಟಜೆಂ: **ಧರ್ಮಾಮೃ,** ೧. ೭೨ ವ ಮತ್ತು ೧. ೭೩)

**ನಿಶ್ಶಲ್ಯ** – ವ್ರತಾಚರಣೆಯ ಅಡ್ಡಿಗಳಿಲ್ಲದ್ದು: ಇವು ಮಾಯಾ, ಮಿಥ್ಯಾತ್ವ, ನಿದಾನಗಳೆಂದು ಮೂರು ಬಗೆ (ನೆಲಮನೆಯಂ ಪೊಜಿಮಟ್ಟು ಸ್ವಜನ ಪರಿಜನ ಬಂಧುವರ್ಗ್ಗಕ್ಕೆಲ್ಲಂ ನಿಶ್ಶಲ್ಯಂಗೆಯ್ದು: **ವಡ್ಡಾರಾ,** ಪು ೪೪, ಸಾ ೨೭)

**ನಿಶ್ಶಲ್ಯಂ** – ಅಂಟಿಕೊಳ್ಳದವನು (ಸುಗ್ರೀವಂಗೆ ರಾಜ್ಯಮಂ ಕೊಟ್ಟು ಪರಿಜನಕ್ಕೆ ನಿಶ್ಶಲ್ಯನಾಗಿ ... ಚಾರಣರ ಪಕ್ಕದೊಳ್ .... ತಪಂಬಟ್ಟು ... ಋದ್ಧಿಪ್ರಾಪ್ತನಾದಂ: **ಪಂಪರಾ,** ೧೦. ೧೭೩ ವ)

**ನಿಷದ್ಯ** – ಐವತ್ಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ತೀರ್ಥಂಕರ ಶಿಶುವಿಗೆ ವಿವಿಧ ಬಗೆಯ ಅರ್ಚನೆಗಳನ್ನು ಮಾಡುವುದು (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ ನಿಷದ್ಯ ಅನ್ನಪ್ರಾಶನ ... ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ನಿಷಿದ್ಧಾಕ್ರಿಯೆ** – ಉತ್ತರೋತ್ತರ ಮಗುವಿಗೆ ಆರ್ಹತ್ವ ಪ್ರಾಪ್ತವಾಗಲೆಂದು ಮಾಡುವ ವಿಧಿ (ಮಂಗಳಾಳಂಕೃತಮಪ್ಪ ವಿಸ್ತೀರ್ಣಮಪ್ಪ ಕಲ್ಪದೊಳ್ ಸಿದ್ಧಾರ್ಚನಾ ವಿಧಿಪೂರ್ವಕಂ ದಿವ್ಯಾಸನಾರ್ಹಂತ್ಯಂ ಉತ್ತರೋತ್ತರಮಕ್ಕುಮೆಂದು ಬಾಲಕನನಿಱಿಸುವುದು ನಿಷಿದ್ಧಾಕ್ರಿಯೆ; **ಚಾವುಂಡಜಯ,** ಪು. ೧೮೧)

**ನಿಷ್ಕಷಾಯ** – ಕ್ರೋಧ, ಮಾನ, ಮಾಯೆ, ಲೋಭಗಳಿಲ್ಲದ ಮನಸ್ಸಿನವನು (ಜಿತೇಂದ್ರಿಯರೆಂಬುದು ನಿಷ್ಕಷಾಯರೆಂಬುದು ಗುರುಭಕ್ತರೆಂಬುದು ... ವಾರಿಧಿವೇಷ್ಟಿತ ಭೂರಿಭೂತಳಂ: **ಸುಕುಮಾಚ,** ೧. ೨೩)

**ನಿಷ್ಕಷಾಯತ್ವ** – ರಾಗದ್ವೇಷಗಳಿಂದ ಮುಕ್ತನಾಗಿರುವಿಕೆ (ಕುಂಭಕರ್ಣಾದಿಗಳ್ ರಾಮಲಕ್ಷ್ಮಣರ ನಿಷ್ಕಷಾಯತ್ವಮುಮಂ ಸಂಸಾರಭೀರುತ್ವಮುಮಂ ಧೈರ್ಯಮುಮಂ ಬಾಹುವೀರ್ಯಮುಮಂ ಮೆಚ್ಚಿ: **ಪಂಪರಾ,** ೧೪. ೨೦೪ ವ)

**ನಿಷ್ಕಾಂಕ್ಷೆ** – ಸಮ್ಯಗ್ದರ್ಶನದ ಒಂದು ಅಂಗ, ಭೋಗಗಳನ್ನು ಬಯಸದಿರುವುದು (ಆ ದರ್ಶನಸೌಖ್ಯಕ್ಕೆ ಅಷ್ಟಾಂಗಮುಂ ಶರೀರಕ್ಕೆ ಅವಯವಮುಂ ಶಾಖೆಯುಂ ಎಂತು ಅಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢ ದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯೆಂದು ಎಸೆವಂಗಮೆಂಟಱಿಂ: **ಧರ್ಮಾಮೃ,** ೧. ೭೨ ವ ಮತ್ತು ೧. ೭೩)

**ನಿಷ್ಕಿಂಚನತ್ವ** – ದಾನ ಸ್ವೀಕರಿಸದುದು, ಅಪರಿಗ್ರಹ (ಪಂಚೇಂದ್ರಿಯವಿಷಯಂಗಳಂ ... ಉಟಿದ ತಪೋನಿಯಮಂ ನಿಷ್ಕಿಂಚಿನತ್ವಂ ಅರ್ಹನ್ಮತದೊಳ್: **ಶಾಂತಿಪು,** ೬. ೫೬)

**ನಿಷ್ಕ್ರಾಂತಿಕ್ರಿಯೆ** – ಒಂದು ಗರ್ಭಾನ್ವಯಕ್ರಿಯೆ, ಮನೆ ಬಿಟ್ಟು ಹೋಗುವುದು (ಪರಿಷ್ಕ್ರಮಣಾಭಿಷೇಕಪೂರ್ವಕಂ ಮಹಾದಾನಂಗೆಯ್ದು ಸಾಮ್ರಾಜ್ಯಮಂ ತೊಱೆದು ತಮ್ಮ ಮನೆಯಿಂದ ತಪೋವನಕ್ಕೆ ಪೋಪುದು ನಿಷ್ಕ್ರಾಂತಿಕ್ರಿಯೆ: **ಚಾವುಂಡಜಯ,** ಪು. ೧೮೭)

**ನಿಷ್ಪ್ರವೀಚಾರ** – ಸಂಭೋಗರಾಹಿತ್ಯ (ಒದವುವುದು ನಿಷ್ಪ್ರವೀಚಾರಮವರ್ಗೆ ಮನೋಜ ಪರಮಸುಖಮಿನ್ನವರಭ್ಯದಯಮುಮವನಿನ್ನೇವೇಟ್ಟುದೋ ದೇವರ ದೇವರಪ್ಪ ಭವಸಂಭವದಿಂ: **ಶಾಂತಿಪು,** ೯. ೧೨೮); ಸಂಭೋಗರಹಿತನಾದವನು (ನಿಷ್ಪ್ರವೀಚಾರನುಮಾಗಿ ನಿರುಪಮಾನೂನ ಸುಖಮಂ ತಳೆದು: **ಕರ್ಣನೇಮಿ,** ೨. ೬೬ ವ)

**ನಿಷ್ಪ್ರವೀಚಾರತೆ** – ನಿಷ್ಪ್ರವೀಚಾರ (ಪೊಱಮಡದೆ ಗಜೇಂದ್ರಂ ನಿಷ್ಪ್ರವೀಚಾರತೆಯಿಂ ನೆಱೆದ ಸುಖಾಂಬೋಧಿಯೊಳವಚಱಿನುಟಿದವಗಾಹಮಿರ್ದನಹಮಿಂದ್ರಂ: **ಚಂದ್ರಪ್ರಪು,** ೧೧. ೩೯)

**ನಿಸಿದಿ** – ಸನ್ಯಸನದಿಂದ ಮುಡಿಪಿದವರ ಸಮಾಧಿ (ನಿಸಿದಿಯೆಂದು ನಿವೇದಿತ ಚೈತ್ಯನಿವಾಸನುಮಾಗಿ ನಾನಾವಿಧಾರ್ಚನೆಗಳಿಂ ಪೂಜಿಸಿ ಪರಮಜಿನನಾದಂ: **ಶಾಂತೀಶ್ವಪು,** ೨. ೩೭ ವ)

**ನಿಸಿದಿಗೆ** – ನಿಸಿದಿ (ಚಂದ್ರಗುಪ್ತಮುನಿಯುಂ ಭಟ್ಟಾರರ ನಿಸಿದಿಗೆಯಂ ಬಂದಿಸುತ್ತಂ: **ವಡ್ಡಾರಾ,** ಪು. ೯೦, ಸಾ. ೧೨)

**ನಿಸ್ಸಂಗತ್ವಾತ್ಮಭಾವನೆ** – ಒಂದು ಗರ್ಭಾನ್ವಯಕ್ರಿಯೆ; ಎಲ್ಲ ಸಂಗದಿಂದ ತಾನು ಬಿಡುಗಡೆಗೊಂಡಿದ್ದೇನೆಂಬ ಭಾವನೆ ತಳೆಯುವುದು (ಬಹಿರ್ಯಾನ ನಿಷದ್ಯ ಅನ್ನಪ್ರಾಶನ ... ನಿಸ್ಸಂಗತ್ವಾತ್ಮಭಾವನಾ ಯೋಗನಿರ್ವಾಣಸಂಪ್ರಾಪ್ತಿ ... ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ನಿಸ್ಸಂಗತಾತ್ಮಭಾವನಾಕ್ರಿಯೆ** – ಏಕಾಗ್ರದಿಂದ ಚರ್ಯಾಶುದ್ಧಿಯಲ್ಲಿ ನಡೆಯುವುದು (ಸರ್ವಸಂಗ ನಿವೃತ್ತಿಗೈದೇಕವಿಹಾರದಿಂ ಮಹಾತಪದೊಳ್ ನಿಗಟ್ಬಾದ್ಧಾತ್ಮಸಂಸ್ಕಾರ ಪೂರ್ವಕಂ ವೀತರಾಗರಾಗಿ ಶಿಷ್ಯಪ್ರವಚನಂಗಳೊಳ್ ಮಮತ್ವಮಿಲ್ಲ ದೇಕಾಗ್ರಚಿತ್ತದಿಂ ಚರ್ಯಾಶುದ್ಧಿಯೊಳ್ ನಡೆವುದು ನಿಸ್ಸಂಗತಾತ್ಮಭಾವನಾಕ್ರಿಯೆ; **ಚಾವುಂಡಜಯ,** ಪು. ೧೮೪)

**ನಿಱಿಶ್ರಾವಕಿ** – ಧರ್ಮಿಷ್ಠ ಜೈನಗೃಹಿಣಿ (ಮತ್ತಮೇನುಮಿಲ್ಲ ನಿಱಿಶ್ರಾವಕಿ ಕಂಡು: **ಧರ್ಮಾಮೃ,** ೪. ೬೮ ವ)

**ನೀಚೈರ್ಗೋತ್ರ** – ಜೀವನಿಗೆ ಅಂಟಿಕೊಳ್ಳುವ ಇಬ್ಬಗೆಯ ಗೋತ್ರಕರ್ಮಗಳಲ್ಲಿ ಒಂದು; ಹೀನಕುಲದಲ್ಲಿ ಹುಟ್ಟಲು ಕಾರಣವಾಗುವ ಕರ್ಮ (ಉಚ್ಚೈರ್ಗೋತ್ರ ನೀಚೈರ್ಗೋತ್ರ ಭೇದದಿಂ ದ್ವಿವಿಧಮಪ್ಪ ಗೋತ್ರಮುಮಂ: **ಸುಕುಮಾಚ,** ೩. ೩೯ ವ)

**ನೀಲಲೇಶ್ಯೆ** – ಆರು ಬಗೆಯ ಲೇಶ್ಯೆಗಳಲ್ಲಿ ಒಂದು; ಆಲಸ್ಯಕ್ಕೆ ಕಾರಣವಾದ ಕರ್ಮ (ಕೃಷ್ಣ ನೀಲ ಕಪೋತ ಲೇಶ್ಯಾಬಹ್ವಾರಂಭಪರಿಗ್ರಹತ್ವಾದ್ಯುಭಪರಿಣಾಮಂಗಳಿಂ ಜೀವಂ ನೆಲಸಿ: **ಆದಿಪು,** ೫. ೮೩ ವ), ನೋಡಿ, **'ಲೇಶ್ಯೆ'**

**ನೆಲೆ** – ಗುಣನಿಲಯ, ಗೃಹಸ್ಥ ಶ್ರಾವಕರ ದಾರ್ಶನಿಕ, ವ್ರತಿಕ, ಸಾಮಯಿಕ, ಪ್ರೋಷಧೋಪವಾಸ, ಸಚ್ಚಿತ್ತವಿರತ, ರಾತ್ರಿಭಕ್ತ, ಬ್ರಹ್ಮಚಾರಿ, ಆರಂಭನಿವೃತ್ತ, ಪರಿಗ್ರಹವಿರತ, ಅನುಮತಿವಿರತ ಮತ್ತು ಉದ್ದಿಷ್ಟವಿರತ ಎಂಬ ಹನ್ನೊಂದು ನೆಲೆಗಳು (ತಪನೀಯಸೂತ್ರದೊಳ್ ಏಕಾದ್ಯೇಕೋತ್ತರ ದಶಾಂತಂಬರಂ ಅವರವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರಮಾಡಿ: **ಆದಿಪು,** ೧೫. ೧೧ ವ); ಗಂತವ್ಯ, ಸೇರಬೇಕಾದುದು (ಅಖಿಳಮಲವಿಲೇಪನದಿಂದಂ ಪುರುಪರಮೇಶ್ವರಂ ಐದಿದ ಪರಮಪದಂ ಸಮಗದುವೆ ನೆಲೆ ಪೆಱಿತುಂಟೇ: **ಆದಿಪು,** ೧೬. ೫೭)

**ನೈಗಮ** – ದ್ರವ್ಯಾರ್ಥಿಕನಯದ ಒಂದು ಬಗೆ, ವಸ್ತುವಿನ ಉದ್ದೇಶ ಗ್ರಹಿಸುವ ತಿಳಿವಳಿಕೆ (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದ ಸಮಭಿರೂಢೈವಂಭುತಾದಿ ನಯವಿಭೇದದೀ: **ಸುಕುಮಾಚ,** ೩. ೩೯ ವ) ನೋಡಿ, **'ದ್ರವ್ಯಾರ್ಥಿಕನಯ'**

**ನೈರ್ಗ್ರಂಥ್ಯ** – ನಿಗ್ರಂಥತನ, ಸನ್ಯಾಸ (ಬಗೆ ತತ್ವಾರ್ಥವಿನಿಶ್ಚಯಂಬಡೆಯೆ ನೈರ್ಗ್ರಂಥ್ಯಂ ಪೊಯ್ದುತ್ತು: **ಪುಷ್ಪದಂಪು,** ೧. ೫)

**ನೈಷ್ಠಿಕಬ್ರಹ್ಮಚಾರಿ** – ಬ್ರಹ್ಮಚಾರಿಯ ಐದು ಪ್ರಭೇದಗಳಲ್ಲಿ ಒಂದು, ಭಿಕ್ಷಾವೃತ್ತಿನಿರತನಾದವನು (ನೈಷ್ಠಿಕಬ್ರಹ್ಮಚಾರಿಯೆಂಬೊಂ ಶಿಖೋಧರನುಂ ಧವಳ ರಕ್ತವಸ್ತ್ರ ಖಂಡಕೌಪೀನಧರ ಕುಲಿಂಗನುಂ ಸ್ನಾತಕನುಂ ಯಜ್ಞೋಪವೀತತನುಲಕ್ಷಿತ ವಕ್ಷಸ್ಥಲನುಂ ಭಿಕ್ಷಾವೃತ್ತಿನಿತರನುಂ ದೇವತಾರ್ಚನಾಪರನುಮಕ್ಕುಂ: **ಚಾವುಂಡಜಯ,** ಪು ೧೯೩)

**ನೈಸರ್ಪ** – ಚಕ್ರವರ್ತಿಯ ನವನಿಧಿಗಳಲ್ಲಿ ಒಂದು, ಭವನ, ಶಯ್ಯೆ, ಆಸನ ಮುಂತಾದವುಗಳನ್ನು ನೀಡುವಂಥದು (ದಿವ್ಯ ಶಯ್ಯಾಸನಪ್ರಭೇದಂಗಳಂ ಪಡೆವ ನೈಸರ್ಪಮುಂ: **ವರ್ಧಮಾಪು,** ೧೦. ೩ ವ), ನೋಡಿ, **'ನವನಿಧಿ'**

**ನೋಂಪಿ** – ವ್ರತ (ತಕ್ಕ ಪ್ರಾಯಶ್ಚಿತ್ತಮಂ ಕೊಂಡು ಸಿಂಹನಿಷ್ಕ್ರೀಡಿತಮೆಂಬ ನೋಂಪಿಯಂ ನೋಂತು ವಿಹಾರಿಸುತ್ತುಂ: **ವಡ್ಡಾರಾ,** ಪು ೧೭೨, ಸಾ ೧೨)

**ನೋಕಷಾಯ** – ಚಾರಿತ್ರಮೋಹನೀಯದಲ್ಲಿ ಒಂದು ಬಗೆ, ಕಿಂಚಿತ್ ಕಷಾಯ; ಇದು ಒಂಬತ್ತು ವಿಧ – ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪೊಂವೇದ ಮತ್ತು ನಪುಂಸಕವೇದ (ಕಿಜಿಕಿಜಿದು ಬೇಗದಿಂ ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱು ಪ್ರಕೃತಿಗಳುಮಂ ಅಂತಃಕರಣಂ ಮಾಡಿ: **ಆದಿಪು,** ೧೦. ೧೪ ವ)

**ನೋಕಷಾಯಷಟ್ಕ** – ಹಾಸ್ಯ ರತಿ ಅರತಿ ಶೋಕ ಭಯ ಜುಗುಪ್ಸೆ ಎಂಬ ಆರು ಬಗೆಯ ನೋಕಷಾಯಗಳು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ನೋದುಃಖ** – ದುಃಖರಹಿತತೆ (ಅವರಾರ್ಯಚರಿತರ್ ನೋಕರ್ಮ ನೋದುಃಖ ಭೀಷಣಮೆಂದು ಸುರನಿರ್ವಿಶೇಷ ಸುಖಸರ್ವಸ್ವಂ ಕುರೂರ್ವೀತಳಂ: **ಶಾಂತಿಪು,** ೬. ೧೨೨)

**ನೋನಿಸು** – ವ್ರತವನ್ನು ಹಿಡಿಯುವಂತೆ ಮಾಡು (ಈಗಳ್ ನೀನಿರ್ದು ನೋನಿಸೆ ನೋಂತು ಮಹಾಬಲಂ ಲಲಿತಾಂಗಂ ... ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಭರತದೊಳಿನ್ನಾದಿದೇವನಪ್ಪೊಂ: **ಆದಿಪು,** ೨. ೪೪)

# ಪ

**ಪಂಕಪ್ರಭೆ** – ರತ್ನಪ್ರಭೆ ಶರ್ಕರಾಪ್ರಭೆ ವಾಲುಕಾಪ್ರಭೆ ಪಂಕಪ್ರಭೆ ಧೂಮಪ್ರಭೆ ತಮಃಪ್ರಭೆ ಮತ್ತು ಮಹಾತಮಃಪ್ರಭೆ ಎಂಬ ಏಳರಲ್ಲಿ ನಾಲ್ಕನೆಯ ನರಕ, (ಪಂಕಪ್ರಭೆಯೊಳ್ ದಶಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು: **ಆದಿಪು,** ೫. ೪)

**ಪಂಕಭಾಗ** – ರತ್ನಪ್ರಭೆ ಎಂಬ ನರಕದ ಮೂರು ಭಾಗಗಳಲ್ಲಿ ಒಂದು, ಎಂಬತ್ತನಾಲ್ಕು ಸಾವಿರ ಯೋಜನ ಪ್ರಮಾಣವಿರುವ ಪ್ರದೇಶ (ರತ್ನಪ್ರಭೆಯೆಂಬ ಪೃಥ್ವಿ ... ಪೃಥ್ವಿ ವಜ್ರಖರ ಪಂಕಜಲಬಹುಳಭಾಗದಿಂ ತ್ರಿವಿಧಮಕ್ಕುಂ ... ಪಂಕಭಾಗಂ ಎಣ್ಬತ್ತನಾಲ್ಕುಸಾಸಿರ ಯೋಜನಂ: **ಸುಕುಮಾಚ,** ೧೧. ೪೧ ವ)

**ಪಂಚಕಲ್ಯಾಣ** – ಜಿನನಿಗೆ ಮಾಡುವ ಐದು ಮಹೋತ್ಸವಗಳು: ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣವೆಂಬ ಐದು ಕಲ್ಯಾಣಗಳ ಆಚರಣೆಗಾಗಿ ಇಂದ್ರಾದಿಗಳು ನಡೆಸುವ ಉತ್ಸವ (ಸುರವೃಂದಾರಕವೃಂದ ಅನಂತಜಿನಪಶ್ರೀ ಪಂಚಕಲ್ಯಾಣ ಭಾಸ್ವರಪೂಜಾವಿಧಿಯಂ ನೆಗೞ್ಚಿ: **ಅನಂತಪು,** ೧೪. ೭೪)

**ಪಂಚಕಲ್ಯಾಣೋತ್ಸವ** – ಪಂಚಕಲ್ಯಾಣ (ಆಕೆವೆರಸೊರ್ಮೆ ನಂದೀಶ್ವರಮಹಾಮಹಿಮೆಗಂ ಪಂಚಕಲ್ಯಾಣೊತ್ಸವಕ್ಕಂ ಅಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು: **ಆದಿಪು,** ೨. ೭೭ ವ)

**ಪಂಚಗುರು** – ಪಂಚಪರಮೇಷ್ಠಿಗಳು: ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸರ್ವಸಾಧುಗಳು (ಪಂಚಗುರುಸಮಕ್ಷದೊಳ್ ಬಾಹ್ಯಾಂಭ್ಯಂತರಪರಿಗ್ರಹ ಪರಿತ್ಯಾಗಪುರಸ್ಸರಂ ವೀರಸಂಸ್ಥಾನಾರೂಢನಂ ಮಹಾಬಳನಂ ಜಾತರೂಧರನಂ ಮಾಡಿ: **ಆದಿಪು,** ೨. ೫೧ ವ)

**ಪಂಚತ್ವ** – ಪಂಚತೆ, ಸಾವು (ಖಳಂ ಪಂಚತ್ವಮನ್ನೆಯ್ದಿ ಮರುಚ್ಚಂಚಳಮನನೀಗಳಲ್ತೆ ವಾನರನಾದಂ: **ಆದಿಪು,** ೫. ೧೮)

**ಪಂಚದಶಪ್ರಮಾದ** – ಧಾರ್ಮಿಕತೆಯಲ್ಲಿ ಅನಾದರವುಂಟುಮಾಡುವ ಕ್ರೋಧ, ಮಾನ, ಮಾಯೆ, ಲೋಭ [ಎಂಬ ಕಷಾಯಗಳು]; ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ರಾಜಕಥೆ [ಎಂಬ ನಾಲ್ಕು ವಿಕಥೆಗಳು]; ಸ್ಪರ್ಶ, ರಸನ, ಘ್ರಾಣ, ಚಕ್ಷುಃ, ಕರ್ಣ ಎಂಬ ಐದು ಇಂದ್ರಿಯಗಳು; ನಿದ್ರೆ, ಸ್ನೇಹ ಎಂಬ ಒಟ್ಟು ಹದಿನೈದು ಪ್ರಮಾದಗಳು] (ಪಂಚದಶಪ್ರಮಾದ ವರ್ಜಿತರುಮಾಗಿ ... ತೀರ್ಥಕರಪುಣ್ಯಕಾರಣಂಗಳಂ ಭವಿಸುತ್ತುಂ: **ವರ್ಧಮಾಪು,** ೧೦. ೫೬ ವ)

**ಪಂಚಧನುಶ್ಶತ** – ಐನೂರು ಧನುಸ್ಸು (ಪಂಚಧನುಶ್ಶತಂ ಪವಣ್ಣೆಲೆ ನರರ್ಗೆಂದೊಡೆ ಇನ್ನಿಮಿರೆ ಬಣ್ಣಿಸಲಾನಱೆಯೆಂ ವಿದೇಹಮಂ: **ಆದಿಪು,** ೧. ೫೨)

**ಪಂಚನದೀಸಂಗಮ** – ವಿದೇಹದಲ್ಲಿನ ಐದು ನದಿಗಳ ಕೂಡುವಿಕೆ (ಹರಿವಂತಿ ಗಜಾವತಿ ಕಮಳಾವತಿ ಪುಷ್ಪಾವತಿ ಚಂಡವೇಗೆಯೆಂಬ ಪಂಚನದೀಸಂಗಮದೊಳ್ ತಂದಿಕ್ಕುವುದು: **ಧರ್ಮಾಮೃತ,** ೮. ೭೦ ವ)

**ಪಂಚನಮಸ್ಕಾರ** – ಪಂಚಪರಮೇಷ್ಠಿಗಳಿಗೆ ಮಾಡುವ ನಮಸ್ಕಾರ ಹಾಗೂ ಹೇಳುವ ಮಂತ್ರ, ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಅಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಳೋಏ ಸಬ್ಬಸಾಹೂಣಂ ಎಂಬುದು (ಪಂಚನಮಸ್ಕಾರಮಂ ಆಲಿಸುತ್ತುಂ ಅವನೋದುತ್ತುಂ ಮನಂದಂದು ದೇವನೆ ತಾನಾಗಿ ಸಮಾಧಿಯೊಳ್ ನೆಱೆದು: **ಸಮಯಪ,** ೬. ೧೧೫)

**ಪಂಚನಮಸ್ಕೃತಿ** – ಪಂಚನಮಸ್ಕಾರ (ಮುನಿವೃಂದೋಚ್ಚಾರಿತ ಪಂಚನಮಸ್ಕೃತಿಗಾಂತು ಕಿವಿಯನರ್ಹತ್ವದಮಂ ನೆನೆಯುತ್ತುಂ: **ಆದಿಪು,** ೨. ೫೭)

**ಪಂಚಪದಂಗಳ್** – ಪಂಚನಮಸ್ಕಾರ (ಮಂಗಳಕಾರಣ ಪಂಚಪದಂಗಳಂ ಅಪವರ್ಗ ಮಾರ್ಗವಿರಚಿತ ಸೋಪಾನಂಗಳಂ: **ಆದಿಪು,** ೨. ೫೪)

**ಪಂಚಪರಮೇಶ್ವರರು** – ಅರ್ಹತ್, ಸಿದ್ಧ, ಅಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು (ಸ್ವಪ್ನಫಲಮಂ ಪೇೞ್ದ ಪುರೋಹಿತರಂ ... ಅರ್ಚಿಸಿ ಪಂಚಪರಮೇಶ್ವರರ ಪೂಜಾಪ್ರಭಾವ ತತ್ಪರೆಯಾಗಿರೆ: **ನೇಮಿನಾಪು,** ೨. ೨೨ ವ)

**ಪಂಚಪರಮೇಷ್ಠಿ** – ಪಂಚಪರಮೇಶ್ವರರು (ಪಂಚಪರಮೇಷ್ಠಿಗಳಂ ಪುಜಿಸಿದಂ ಬೞಿಯಂ: **ಪಂಪರಾ,** ೧೦. ೧೪೭ ವ)

**ಪಂಚಮಕಾಲ** – ಅವಸರ್ಪಿಣಿಯ ಐದು ಕಾಲಭೇದಗಳಲ್ಲಿ ಐದನೆಯದು (ಧರಣೀಪಾಳಕ ಮುನಿವರರ್ ಪಂಚಮಕಾಲದೊಳಣಮಾಗರಲ್ತೆ ಋದ್ಧಿಪ್ರಾಪ್ತರ್: **ಆದಿಪು,** ೧೫. ೪೧), ನೋಡಿ **'ಅವಸರ್ಪಿಣಿ'**

**ಪಂಚಮಗತಿ** – ಐದನೆಯ ಅವಸ್ಥೆ, ದೇವ, ಮಾನುಷ, ತಿರ್ಯಂಚ ಮತ್ತು ನಾರಕ ಎಂಬ ಚತುರ್ಗತಿಗಳನ್ನು ಮೀರಿದುದು, ಮೋಕ್ಷ (ಪಂಚಮಚಕ್ರಿಯೆನಿಪ್ಪಂ ಪಂಚಮಗತಿಗೆ ಅತಿಲಬ್ಧವಿಭುಗೆ ಯೋಗ್ಯಂ ಪಂಚಮಜಳಧಿಜಳಂ ತನ್ನಿಂ ಚೆಚ್ಚರಮೆಂದು ಸುರರ್ಗೆ ಸುರಪತಿ ಬೆಸಸಲ್: **ಶಾಂತೀಶ್ವಪು,** ೧೪. ೧೧೯)

**ಪಂಚಮಚಕ್ರಿ** – ಶಲಾಕಾಪುರುಷರಲ್ಲಿ ಐದನೆಯ ಚಕ್ರವರ್ತಿ, ಶಾಂತಿ (ಪಂಚಮಚಕ್ರಿಯೆನಿಪ್ಪಂ ಪಂಚಮಗತಿಗೆ ಅತಿಲಬ್ಧವಿಭುಗೆ ಯೋಗ್ಯಂ ಪಂಚಮಜಳಧಿಜಳಂ ತನ್ನಿಂ ಚೆಚ್ಚರಮೆಂದು ಸುರರ್ಗೆ ಸುರಪತಿ ಬೆಸಸಲ್: **ಶಾಂತೀಶ್ವಪು,** ೧೪. ೧೧೯)

**ಪಂಚಮಜಲಧಿ** – ಲವಣೋದ ಕಾಲೋದ ಪುಷ್ಕರೋದ ವಾರುಣೋದ ಕ್ಷೀರೋದ ಘೃತೋದ ಮತ್ತು ಕ್ಷೋಧೋದ ಎಂಬ ಸಪ್ತಜಲಧಿಗಳಲ್ಲಿ ಐದನೆಯದು, ಹಾಲ್ಗಡಲು (ನೀರೊಳ್ ಪಂಚಮಜಲಧಿಯ ನೀರೆ ಪವಿತ್ರಂ ಪವಿತ್ರಮಲ್ಲವು ಪೆಱವೆಂದೋರಂತು ತದಂಭೋಧಿಯ ನೀರಂ ತರವೇೞ್ದನಮರರಿಂದಮರೇಂದ್ರಂ: **ಶಾಂತಿಪು,** ೧೦. ೩೮)

**ಪಂಚಮಜಲನಿಧಿ** – ಪಂಚಮಜಲಧಿ (ಪಂಚಮಜಲನಿಧಿಯಲ್ಲದೆ ಪಂಚಮಗತಿಪತಿಯ ಸದನಕೆಯ್ದಿಸವು ಪಯಃಸಂಚಯಮನುಟೆದ ತೊಱೆ ಕೆಱೆ ಬೆಂಚೆ ಕೊಳಂ ಕೂಪಂ: **ಪುಷ್ಪದಂಪು,** ೧೧. ೭)

**ಪಂಚಮಜಳಧಿ** – ಸಪ್ತಜಲಧಿಗಳಲ್ಲಿ ಐದನೆಯದು, ಕ್ಷೀರಸಮುದ್ರ (ಪಂಚಮಚಕ್ರಿಯೆನಿಪ್ಪಂ ಪಂಚಮಗತಿಗೆ ಅತಿಲಬ್ಧವಿಭುಗೆ ಯೋಗ್ಯಂ ಪಂಚಮಜಳಧಿಜಳಂ ತನ್ನಿಂ ಚೆಚ್ಚರಮೆಂದು ಸುರರ್ಗೆ ಸುರಪತಿ ಬೆಸಸಲ್: **ಶಾಂತೀಶ್ವಪು,** ೧೪. ೧೧೯), ನೋಡಿ '**ಸಪ್ತಜಲಧಿ**'

**ಪಂಚಮಸಮುದ್ರ** – ಪಂಚಮಜಲಧಿ (ಪಂಚಮಸಮುದ್ರದೊಳ್ ಕೂಡಿ ಮುನೀಂದ್ರನನಭಿನಂದಿಸಿ ಬಲಗೊಂಡು ನಾಕಪತಿಗಳ್ ದಿವಕ್ಕೆ ತಳರ್ವುದುಂ: **ಶಾಂತಿಪು,** ೯. ೬೭)

**ಪಂಚಮಹಾಕಲ್ಯಾಣ** – ಜಿನನಿಗೆ ನಡೆಯುವ ಐದು ಕಲ್ಯಾಣಗಳು (ಸಕಳ ಶ್ರಾವಕವ್ರತಂಗಳಂ ಷೋಡಶ ತೀರ್ಥಕರಭಾವನೆಗಳಂ ಚತುಸ್ತ್ರಿಂಶದತಿಶಯಂ ಗಳುಮಂ ಅಷ್ಟಮಹಾ ಪ್ರಾತಿಹಾರ್ಯಂಗಳುಮಂ ಪಂಚಮಹಾಕಲ್ಯಾಣಂಗಳುಮಂ: **ಆದಿಪು,** ೩. ೪೦ ವ)

**ಪಂಚಮಹಾಪಾತಕ** – ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ, ಋಷಿವಧೆ (ಈ ಪಂಚಮಹಾಪಾತಕಂಗಳಂ ಗೆಯ್ದುವರುಂ ಅಗಮ್ಯಾಗಮನಂ ಅಪೇಯಾಪೇಯಂ ಅಭಕ್ಷ್ಯಾಭಕ್ಷ್ಯಂ ಮೊದಲಾಗೊಡೆಯ ಪೊಲ್ಲಮೆಗಳೊಳ್ ನೆಗಟ್ದು: **ವಡ್ಡಾರಾ,** ಪು ೯೬, ಸಾ ೨೨)

**ಪಂಚಮಹಾಬ್ರತ** – ಶ್ರಾವಕರು ಆಚರಿಸಬೇಕಾದ ಪಂಚಾಣುವ್ರತಗಳನ್ನು ಮುನಿಗಳು ಮತ್ತಷ್ಟು ಗಾಢವಾಗಿ ಆಚರಿಸುವುದು (ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳಂ ಏಱಿಸಿಕೊಂಡು ಪಡಿಕಮಣಂಗೇಳ್ದ ತದನಂತರಂ ನಿಶ್ಚಯಸಮ್ಯಕ್ತ್ವಮಂ ಕೈಕೊಂಡು: **ವಡ್ಡಾರಾ,** ಪು ೨೮, ಸಾ ೨೬)

**ಪಂಚಮಹಾವ್ರತ** – ಪಂಚಮಹಾಬ್ರತ (ಕಸವರಮಂ ಕಸಮಂ ಪೂಜಿಸುವನುಂ ಏಳಿಸುವನುಂ ಸಮಾನಂ ಪ್ರತಿಭಾಷಿಸೆ ಪಂಚಮಹಾವ್ರತ ಪಂಚಸಮಿತಿ ಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ: **ಶಾಂತಿಪು,** ೯. ೧೧೧);

**ಪಂಚಮಾಂಬುಧಿ** – ಕ್ಷೀರಸಮುದ್ರ (ಪಂಚಮಹಾಂಬುಧಿಪವಿತ್ರಜಳ ಪರಿಪೂರ್ಣಸುವರ್ಣಕಲಶಂಗಳಿಂದಂ ಅಭಿಷೇಕಂಗೆಯ್ದು: **ಆದಿಪು,** ೯.೬೩ ವ)

**ಪಂಚಮುಷ್ಟಿ** – ದೇಹದ ಐದು ಅಂಗಗಳಿಂದ ಕೂಡಿದ ನಮಸ್ಕಾರ (ಅಂತರ್ಚಿಸಿ ಗುರುಭಕ್ತಿಪೂರ್ವಕಂ ಪಂಚಮುಷ್ಟಿಯಿಂ ವಂದಿಸುವುದು: **ಪುಷ್ಪದಂಪು,** ೯. ೫ ವ); ಎರಡೂ ಮುಷ್ಟಿಗಳಿಂದ ತಲೆಗೂದಲು, ಮೀಸೆ, ಗಡ್ಡಗಳನ್ನು ಕಿತ್ತುಕೊಳ್ಳುವುದು (ಆ ಜಗತ್ಪತಿ ... ಆತ್ಮಕೇಶಕಳಾಪಂ ಬರೆ ಪಂಚಮುಷ್ಟಿಗೆ ಜಿನಶ್ರೀದೀಕ್ಷೆಯಂ ತಾಳ್ದಿದಂ: **ಶಾಂತಿಪು,** ೮. ೧೨೩)

**ಪಂಚವಿಂಶತಿಮಳ** – ಇಪ್ಪತ್ತೈದು ಬಗೆಯ ದೋಷಗಳು: ಮಿಥ್ಯಾದರ್ಶನ, ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರ, ಮಿಥ್ಯಾದೃಷ್ಟಿ, ಮಿಥ್ಯಾಜ್ಞಾನವುಳ್ಳವನು, ಮಿಥ್ಯಾಚಾರಿತ್ರವಂತ [ಈ ಆರು ಅನಾಯತನಗಳು], ದೇವಮೂಢ, ಗುರುಮೂಢ, ಸಮಯಮೂಢ [ಈ ಮೂರು ಮೂಢಗಳು], ಜ್ಞಾನ, ಕುಲ, ಬಲ, ಪೂಜೆ, ಜಾತಿ, ಐಶ್ವರ್ಯ, ತಪ, ಶರೀರ [ಈ ಎಂಟು ಮದಗಳು], ಶಂಕೆ, ಕಾಂಕ್ಷೆ, ವಿಚಿಕಿತ್ಸೆ, ಮೂಢದೃಷ್ಟಿ, ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ, ಅಪ್ರಭಾವನೆ [ಈ ಎಂಟು ದೋಷಗಳು] (ಬಳಕೊಂಡ ಪಂಚವಿಂಶತಿ ಮಳದಿಂದಂ ಪಿಂಗಿ ತತ್ವರುಚಿಯಂ ತಾಳ್ದು ಉಜ್ವಳಗುಣಗಣಂಗಳಿಂದಂ ಬೆಳಗುಗುಂ ಈ ತೆಱದೆ ನಿನ್ನ ದರ್ಶನರತ್ನಂ: **ಸುಕುಮಾಚ**, ೬. ೪೬)

**ಪಂಚವಿಧಾಹಾರ** – ಮುನಿಗಳು ಸ್ವೀಕರಿಸಬೇಕಾದ ಆಹಾರಸ್ವರೂಪದ ಐದು ಗುಣಗಳು (ಭೈಕ್ಷಾಸಿದ್ಧಿಯೊಳು ಷಟ್ಚತ್ವಾರಿಂಶದ್ದೋಷವಿರಹಿತಮುಂ ನವಕೋಟಿಪರಿಶುದ್ಧಮುಂ ಗೋಚಾರಮುಮಕ್ಷಮ್ರಕ್ಷಣಮುಮುಂ ಉದರಾಗ್ನಿಪ್ರಶಮನಮುಂ ಭ್ರಮರಾಹಾರಮುಂ ಶ್ವಭ್ರಪೂರಣಮೆಂಬ ಪಂಚವಿಧಾಹಾರದಿಂ: **ಅಜಿತಪು**, ೭. ೧ ವ)

**ಪಂಚಸಮಿತಿ** – ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ, ಉತ್ಸರ್ಗ ಎಂಬ ಐದು ಬಗೆಯ ಧಾರ್ಮಿಕ ಪ್ರವೃತ್ತಿಗಳು (ಈರ್ಯಾಸಮಿತಿಯುಂ ಭಾಷಾಸಮಿತಿಮೇಷಣಾಸಮಿತಿಯುಂ ಆದಾನನಿಕ್ಷೇಪಣಾಸಮಿತಿಯುಂ ಉತ್ಸರ್ಗಸಮಿತಿಯುಮೆಂಬ ಪಂಚಸಮಿತಿಯೊಳಂ: **ಅಜಿತಪು**, ೧೨.) ೪ ವ)

**ಪಂಚಾಗ್ನಿ** – ದಾರಿದ್ರ್ಯ, ಕ್ಷುಧೆ, ಕೋಪ, ಶೋಕ, ಅಂಗಜ ಎಂಬ ಐದು ಬೆಂಕಿಗಳು (ದಾರಿದ್ರ್ಯಾಗ್ನಿ ಮಹಾಕ್ಷುಧಾಗ್ನಿ ವಿಚಳತ್ಕೋಪಾಗ್ನಿ ಶೋಕಾಗ್ನಿ ದುರ್ವಾರ ಪ್ರಸ್ಫುರದಂಗಜಾಗ್ನಿ ಎನಿಪೀ ಪಂಚಾಗ್ನಿಯಿಂ: **ಸಮಯಪ**, ೧೫. ೧೦೩)

**ಪಂಚಾಚಾರ** – ದರ್ಶನ, ಜ್ಞಾನ, ಚಾರಿತ್ರ, ತಪ, ವೀರ್ಯ ಎಂಬ ಐದು ಆಚಾರಗಳು (ಮನಮಂ ಕಟ್ಟಿ ಗುಣಂಗಳಂ ತುಟಿದು ಪಂಚಾಚಾರದಿಂ ಪಂಚಬಾಣನ ಬಾಹಾಬಲಮಂ: **ಪಂಪರಾ**, ೧. ೩)

**ಪಂಚಾಣುವ್ರತ** – ಶ್ರಾವಕರು ಆಚರಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ವ್ರತಗಳು (ಕೊಲ್ಲದ, ಹುಸಿಯದ, ಕಳ್ಳದ, ಪರಸ್ತ್ರೀಯರ್ಗೆಳಸದ, ನಿಯಮಿತ ಪರಿಗ್ರಹಮೆಂಬ ಪಂಚಾಣುವ್ರತಂಗಳ ಕೂಟಮಾನುಳ್ಳೆ: **ಧರ್ಮಾಮೃ**, ೫. ೮೮ ವ)

**ಪಂಚಾಣೂತ್ತರೆ** – ಲೋಕಾಕಾಶದ ತುದಿಯ ನೆಲೆಯಲ್ಲಿರುವ ವಿಜಯ, ವೈಜಯಂತ, ಜಯಂತ, ಅಪರಾಜಿತ, ಸರ್ವಾರ್ಥಸಿದ್ಧಿ ಎಂಬ ಐದು 'ವಿಮಾನಗಳು (ಅಂತು ಮುಡುಪಿ ಪಂಚಾಣೂತ್ತರೆಗಳ ನಾಭಿಯಪ್ಪ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಂ: **ಶಾಂತಿಪು**, ೯. ೧೨೦ ವ)

**ಪಂಚಾತಿಚಾರ** – ಸಮ್ಯಗ್ದೃಷ್ಟಿಗೆ ಅಡ್ಡಿಯಾಗುವ ಶಂಕೆ, ಕಾಂಕ್ಷೆ, ನಿರ್ವಿಚಿಕಿತ್ಸೆ, ಅನ್ಯದೃಷ್ಟಿಪ್ರಶಂಸೆ, ಅನ್ಯದೃಷ್ಟಿಸಂಸ್ತವನ ಎಂಬ ಅತಿಚಾರಗಳು (ಯತಿಪಂ ಪಂಚಾತಿಚಾರ ಪ್ರಕೃತಿಯುಮದಿಂ ... ಅರ್ಹತ್ಪ್ರತಿಬಿಂಬಭ್ರಾಂತಿಯುಂ ಮಾಡಿ: **ಚಂದ್ರಪ್ರಪು**, ೫. ೧೨೫)

**ಪಂಚಾವಸ್ಥೆಗೆದಱು** – ಪಂಚತ್ವವನ್ನುಂಟು ಮಾಡು, ಮರಣವನ್ನುಂಟುಮಾಡು (ಪಾಂಚಾಳನುಂ ಪಂಚಾವಸ್ಥೆಗೆದಱಲುಂ ಕರಂ ಚೆನ್ನೆಯರಾಗಿಯುಂ: **ಶಾಂತಿಪು**, ೮. ೭೨ ವ)

**ಪಂಚಾಶ್ಚರ್ಯ** – ಆಹಾರದಾನ ಸಮಯದಲ್ಲಿ ಆಗುವ ಐದು ಅತಿಮಾನುಷ ಸೋಜಿಗಗಳು: ದೇವದುಂದುಭಿ ಸ್ವನ, ಪುಷ್ಪವೃಷ್ಟಿ, ಸುವರ್ಣವೃಷ್ಟಿ, ಮೆಲುಗಾಳಿ, ದೇವಪ್ರಶಂಸೆ (ಸುರಿಯೆ ವಸುಧಾರೆ ನಭದೊಳ್ ಸುರವೃಂದಂ ಪೊಗೞೆ ಪೊಱಗೆ ಸುರದುಂದುಭಿ ತಣ್ಣೆರಲೆಸಗೆ ಕುಸುಮವರ್ಷಂ ದೊರೆಕೊಳೆ ಸಾಶ್ಚರ್ಯಮಾಯ್ತು ಪಂಚಾಶ್ಚರ್ಯಂ: **ಅಜಿತಪು**, ೭. ೩)

**ಪಂಚಾಸ್ತಿಕಾಯ** – ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಎಂಬ ಐದು ಅಸ್ತಿಕಾಯಗಳು [ಬಹುಪ್ರದೇಶವುಳ್ಳ ದ್ರವ್ಯಗಳು] (ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯಮುಮಂ ... ವ್ಯಾಖ್ಯಾನಂಗೆಯ್ಯಲ್: **ಸುಕುಮಾಚ**, ೩. ೩೯ ವ)

**ಪಂಚಾಸ್ರವ** – ಐದು ಬಗೆಯ ಆಸ್ರವಗಳು (ಚಾರಿತ್ರವಂತನೆಂಬೊಂ ಜಿನಮತಗತ ವಿವಿಧಾರ್ಥ ಸಲಿಲ ಧೌತಮತಿಯುಂ ... ಪಂಚಸಮಿತಿಸಮೇತನುಂ ವಿರುದ್ಧ ಪಂಚಾಸ್ರವನುಂ ... ಚತುರಶೀಲ ಲಕ್ಷಗುಣಭೂಷಣನುಮಕ್ಕುಂ: **ಚಾವುಂಡರಾಯ**, ಪು ೬)

**ಪಂಚೇಂದ್ರಿಯಂಗಳ್** – ಐದು ಇಂದ್ರಿಯಗಳನ್ನು ಹೊಂದಿರುವ ಜೀವಿಗಳು, ಇದರಲ್ಲಿ ಮೂರು ಬಗೆ: ನೀರಲ್ಲಿ ವಾಸಿಸುವ ಭೂಮಿಯಲ್ಲಿ ಚಲಿಸುವ ಮತ್ತು ಆಕಾಶದಲ್ಲಿ ಹಾರುವ ಜೀವಿಗಳು (ಪಂಚೇಂದ್ರಿಯಂಗಳ್ ಜಳಚರಸ್ಥಳಚರಗಗನಚರಪ್ರಕಾರದಿಂ ಮೂಱೆಱನಕ್ಕುಂ: **ಶಾಂತಿಪು**, ೧೨, ೧೧ ವ)

**ಪಂಡಿತಮರಣ** – ಜ್ಞಾನಿಯಾಗಿ ಸಲ್ಲೇಖನದಿಂದ ಪಡೆಯುವ ಮರಣ (ಸನ್ಯಸನವಿಧಿಯಿಂ ದಂಡಿತಕರಣನಾಗಿ ಪಂಡಿತಮರಣದಿಂ ಮುಡಿಪಿ: **ಅನಂತಪು**, ೧೨. ೪೩ ವ)

**ಪಂಡಿತಮೃತಿ** – ಪಂಡಿತಮರಣ (ಅಂದಿನ ಮೂರ್ತಿವೃತ್ತಿ ಪಂಡಿತಮೃತಿಯಿಂದಲ್ಲದೆ ಅದು ನೀಗದು: **ಶಾಂತಿಪು**, ೭. ೪೦)

**ಪಂಡಿತ ಸಮಾಧಿವಿಧಿ** – ಸಲ್ಲೇಖನ (ಮುಮುಕ್ಷುಜ್ಯಾಯಂ ಪಂಡಿತಸಮಾಧಿವಿಧಿಯಿಂ ತಳೆದಂ: **ಅನಂತಪು**, ೪. ೩೭)

**ಪಂಥಾತಿಚಾರನಿಯಮ** – ಗಮನ ಪ್ರಾಯಶ್ಚಿತ್ತ, ನಡೆಯುವಾಗ ಆಗಬಹುದಾದ ಹಿಂಸೆಗೆ ಶ್ರವಣರು ಮಾಡಿಕೊಳ್ಳುವ ಪ್ರಾಯಶ್ಚಿತ್ತ (ವಿಹಾರಿಸುತ್ತುಂ ಪರಮಜಿನಧರ್ಮ ಕೀರ್ತಿಯ ಮೂರ್ತಿಯಾದಂತೆ ಉಗ್ರೋಗ್ರತಪಶ್ಚರಣ ನಿರತನಾಗಿಯುಂ ಅತ್ಯಂತ ಶಾಂತಸ್ವರೂಪಮಂ ತಾಳ್ದಿ ಪಂಥಾತಿಚಾರನಿಯಮದಿಂ: **ಸುಕುಮಾಚ,** ೩. ೭ ವ)

**ಪಕ್ಷ** – ಹದಿನೈದು ಅಹೋರಾತ್ರಿಗಳು ಅಥವಾ ದಿವಸಗಳು (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬. ೬೮ ವ)

**ಪಕ್ಷೋಪವಾಸ** – ಹದಿನೈದು ದಿನಗಳು ಸತತವಾಗಿ ಮಾಡುವ ಜಿನಮುನಿಯ ಉಪವಾಸ (ಭುವನನುತಮಾಗೆ ಪಕ್ಷೋಪವಾಸ ಮಾಸೋಪವಾಸಮಂ ನಿಯಮದೆ ಮಾಡುವ ಜಿನಮುನಿ: **ಸಮಯಪ,** ೭. ೭)

**ಪಚ್ಚಕ್ಖಾಣಂಗುಡು** – ಪಚ್ಚಖ್ಖಾಣವ್ರತ [ಸೀಮಿತಕಾಲಕ್ಕೆ ಆಹಾರ ಬಿಡುವುದು] ದೀಕ್ಷೆ ಕೊಡು (ಯಾವಜ್ಜೀವಂ ಬಾಟ್ವೆನ್ನೆಗಂ ಪಚ್ಚಕ್ಖಾಣಂಗುಡುವುದೆಂದೊಡೆ: **ವಡ್ಡಾರಾ,** ಪು. ೮೨, ಸಾ. ೨೧)

**ಪಡಿಕಮಣಂಗೆಯ್** – ಪ್ರಾಯಶ್ಚಿತ್ತಕ್ಕೋಸುಗ ತಪಸ್ಸು ಮಾಡುವುದು (ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೆಯ್ದು ಪರಮಾರ್ಥಯತಿಯವರರಾಗಿ ಪನ್ನೆರಡು ವರ್ಷಂಬರಂ ಗುರುಗಳನಗಲದೆ ತಪಂಗೆಯ್ದು: **ವಡ್ಡಾರಾ,** ಪು ೬ ಸಾ ೨೭)

**ಪಡಿಕಮಣಂಗೇಳ್** – ಪ್ರಾಯಶ್ಚಿತ್ತಕ್ಕಾಗಿ ಧರ್ಮೋಪದೇಶವನ್ನು ಕೇಳು (ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳಂ ಏಜೆಸಿಕೊಂಡು ಪಡಿಕಮಣಂಗೇಳ್ದ ತದನಂತರಂ ನಿಶ್ಚಯಸಮ್ಯಕ್ತ್ವಮಂ ಕೈಕೊಂಡು: **ವಡ್ಡಾರಾ,** ಪು ೨೮, ಸಾ ೨೬)

**ಪಡಿಕಮಣಂಪೇಟ್** – ಪ್ರಾಯಶ್ಚಿತ್ತಕ್ಕಾಗಿ ಧರ್ಮೋಪದೇಶಮಾಡು (ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳಂ ಏಜೆಸಿ ಪಡಿಕಮಣಮಂ ಪೇಟ್ದಿ ತದನಂತರಂ: **ವಡ್ಡಾರಾ,** ಪು ೬ ಸಾ ೩)

**ಪಡಿಗಹ** – [ಪ್ರತಿಗ್ರಹ] ಸ್ವೀಕರಿಸು (ಭಕ್ತಿಯಿಂದಂ ನಿಜೆಸಿ ಕಾಲಂ ಕರ್ಚಿ ಪಡಿಗಹಮುಚ್ಚಂ ಠಾಣಂ ಎಂದೀ ಒಂಬತ್ತು ತೆಜದಿಂದಂ ಪುಣ್ಯಮಂ ಕೈಕೊಂಡು: **ವಡ್ಡಾರಾ,** ಪು ೭ ಸಾ ೮)

**ಪತಿವ್ರತಾಲಿಂಗ** – ಮುನಿಗಳ ಯೋಗಸಾಧನೆಯ ಒಂದು ವಿಧ, ವಿಕಲ್ಪಯೋಗಸಾಧನ (ಸ್ತ್ರೀಲಿಂಗಂ ಸರಸ್ವತಿಲಿಂಗಮೆಂಬುದುಂ ಪ್ರತಿವ್ರತಾಲಿಂಗಮೆಂಬುದುಂ ಕೇಶವ್ರತಿಲಿಂಗಮೆಂಬುದುಂ ಅರಿಂಜಯಲಿಂಗಮೆಂಬುದುಂ ಚತುರ್ವಿಧಮಕ್ಕುಂ. ಅದಜೊಳ್ ಸರಸ್ವತಿಲಿಂಗಮಧ್ಯಯನಕಾರಣಂ ಪತಿವ್ರತಾಲಿಂಗಂ ವಿಕಲ್ಪಯೋಗಸಾಧನಂ ಕೇಶವ್ರತಿಲಿಂಗಂ ಸನ್ಮಾರ್ಗಸಾಧನಂ ಅರಿಂಜಯಲಿಂಗಂ ತೃಪ್ತಿ ಲಕ್ಷಣಂ. ಇವು ನಿರ್ವಾಣಸಾಧನಲಿಂಗಂ; **ಚಾವುಂಡಜಯ,** ಪು ೧೮೯)

**ಪತ್ತತಿಶಯ** – ಕೇವಲಜ್ಞಾನಪ್ರಾಪ್ತಿಯಿಂದ ಜಿನನಿಗೆ ಒದಗುವ ಹತ್ತು ಅತಿಶಯಗಳು: ನಾಲ್ಕು ದಿಕ್ಕಿಗೆ ನೂರು ಯೋಜನ ಸೀಮೆಯಲ್ಲಿ ಸುಭಿಕ್ಷತೆ, ಪರಿಮಿತ ಪ್ರಮಾಣದ ಉಗುರು ಮತ್ತು ಕೂದಲುಗಳಿರುವ ದೇಹ, ಭೋಜನಾಭಾವ, ದೇಹಕ್ಕೆ ಯಾವುದೇ ಬಾಧೆಯಿಲ್ಲದಿರುವುದು, ನಾಲ್ಕು ಮುಖಗಳಿಂದ ಕೂಡಿರುವುದು, ಸರ್ವಶಾಸ್ತ್ರಜ್ಞತೆ, ರೆಪ್ಪೆಯಾಡದಿರುವುದು, ಆಕಾಶಗಮನಸಾಮರ್ಥ್ಯ, ಪ್ರಾಣಿಹಿಂಸೆಯಿಲ್ಲದಿರುವುದು, ದೇಹಕ್ಕೆ ನೆರಳಿಲ್ಲದರುವುದು (ಇಂತು ಪತ್ತತಿಶಯಗಳಿವೇಂ ಜಿನನೊಳ್ ಪೊದಳ್ದುವೋ: **ಆದಿಪು,** ೧೦. ೪೩)

**ಪದಾರ್ಥ** – ಆಗಮದ ಅರ್ಥ (ಮನಂ ಬಸಮಾಡಿ ದೋಷವಿರಹಿತಂ ಆಪ್ತಂ ಕ್ರಮದೆ ಆಪ್ತನೆ ಪೇೞ್ದುದದು ಆಗಮಂ ಆಗಮದ ಅರ್ಥಮಾವುದು ಅದುವೆ ಪದಾರ್ಥಂ: **ಆದಿಪು,** ೫. ೫೪); ಅಭಿಪ್ರಾಯ [ಪದ+ಅರ್ಥ] (ಸುಕಥಾಳಾಪಮನೋತು ಪೇೞ್ವುದು ಪದಾರ್ಥೋಕ್ತಿಯಿಂ: **ಸುಕುಮಾಚ,** ೧. ೪೬); ವಸ್ತು (ಇನಿವಿರಿದು ಪರಾಕ್ರಮುಳ್ಳ ನಿನಗೆ ತೀರದ ಪದಾರ್ಥಮಿಲ್ಲ: **ಚಂದ್ರಪ್ರಪು,** ೫. ೮೪); ತತ್ವಗಳು, ಇವು ಒಂಬತ್ತು ಬಗೆ: ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ, ಪಾಪ, ಪುಣ್ಯ (ಜೀವಾದಿ ಪದಾರ್ಥಂಗಳೊಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭವ್ಯಾವಳಿಗೆ ವಿದಳಮಕ್ಕುಂ: **ಅಜಿತಪು,** ೫. ೭೦)

**ಪದಿನಾಲ್ಕನೆಯ ಜಿನೇಂದ್ರ** – ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥ (ಪದಿನಾಲ್ಕನೆಂಯ ಜಿನೇಂದ್ರಂ ಸ್ವದೀಂಯುಗುರುವದಜಿನವುಳ ಸೂತ್ರಾಂತಿಕದೊಳ್ಪದಿನಾಲ್ಕುಂ ಗಂಟನಿಕ್ಕುವುದದು ಕನಕದ ಪಟ್ಟುನೂಲ ನೂಲಭಿರಚಿತಂ: **ಅನಂತಪು,** ೧೦, ೭೪)

**ಪದಿನಾಲ್ಕುಂ ಪುಬ್ಬ** – ಮುನಿ ಅರಿಯಬೇಕಾದ ಹದಿನಾಲ್ಕು ಬಗೆಯ ಜ್ಞಾನ (ಉತ್ಪಾದ ಪೂರ್ವಾಗ್ರಾಯಿಣೀಯ ವೀರ್ಯಾನುಪ್ರವಾದ ಅಸ್ತಿನಾಸ್ತಿಪ್ರವಾದ ಆತ್ಮಪ್ರವಾದ ಸತ್ಯಪ್ರವಾದ ಜ್ಞಾನಪ್ರವಾದ ಕರ್ಮಪ್ರವಾದ ಪ್ರತ್ಯಾಖ್ಯಾನ ನಾಮಧೇಯ ವೀರ್ಯಾನುವಾದ ಕಲ್ಯಾಣನಾಮಧೇಯ ಪ್ರಾಣವಾದಕ್ರಿಯಾವಿಶಾಲ ಲೋಕಬಿಂದುಸಾರಮೆಂಬ ಪದಿನಾಲ್ಕುಂ ಪುಬ್ಬಂಗಳೊಳಂ ನೆಱೆಯೆ: **ಹರಿವಂಶ,** ೧೪. ೫೩ ವ)

**ಪದಿನಾಲ್ಕು ರತ್ನಂಗಳ್** – ಚಕ್ರವರ್ತಿಯ ಚಕ್ರ, ಛತ್ರ, ಖಡ್ಗ, ದಂಡ, ಧರ್ಮ, ಮಣಿ, ಕಾಕಿಣಿ, ಗೃಹಪತಿ, ಸೇನಾಪತಿ, ತಕ್ಷಕ, ಪುರೋಹಿತರತ್ನ, ಹಸ್ತಿರತ್ನ, ತುರಗರತ್ನ, ಸ್ತ್ರೀ ಎಂಬ ಹದಿನಾಲ್ಕು ರತ್ನಗಳು (ಆ ಮುನಿಚಕ್ರವರ್ತಿಯ ಮನದೊಳ್ ಮೂಱುರತ್ನಂಗಳ್ ಬೆಳಗಿದುವು ಈ ಸಕಳಚಕ್ರವರ್ತಿಯ ಮನೆಯೊಳ್ ಪದಿನಾಲ್ಕು ರತ್ನಂಗಳ್ ಬೆಳಗಿದುವು: **ಆದಿಪು,** ೬. ೨೪ ವ)

**ಪದಿನಾಱು ಪ್ರಕೃತಿ** – ಹದಿನಾರು ಕರ್ಮಪ್ರಕೃತಿಗಳು: ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿ ಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ (ಎಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ)

**ಪದಿನಾಱುಭಾವನೆ** – ತೀರ್ಥಂಕರತ್ವನಾಮಕರ್ಮದ ದರ್ಶನಶುದ್ಧಿ, ವಿನಯಸಂಪನ್ನತೆ, ಶೀಲವ್ರತೇಷ್ವನತಿಚಾರ ಅಭೀಕ್ಷ್ಣಜ್ಞಾನೋಪಯೋಗ ಸಂವೇಗ ಶಕ್ತಿತಸ್ತ್ಯಾಗ ಶಕ್ತಿತಸ್ತಪ ಸಾಧುಸಮಾಧಿ ವೈಯಾವೃತ್ಯಕರಣ ಅರ್ಹದ್ಭಕ್ತಿ ಆಚಾರ್ಯಭಕ್ತಿ ಬಹುಶ್ರುತಭಕ್ತಿ ಪ್ರವಚನಭಕ್ತಿ ಆವಶ್ಯಕಾಪಹಾರಿಣಿ ಮಾರ್ಗಪ್ರಭಾವನೆ ಮತ್ತು ಪ್ರವಚನ ವತ್ಸಲತ್ವಗಳೆಂಬ ಹದಿನಾರು ಬಗೆಯ ಭಾವನೆಗಳು (ಪದಿನಾಱುಭಾವನೆಯಂ ಬಹುವಿಧಮಱಿದಹರ್ನಿಶಂ ಭಾವಿಸೆ ಬೋಧಾಂಬುಧಿ ತೀರ್ಥಕರತ್ನಮನಿಂ ಬರ್ಪ ಭವಕ್ಕೆ ನೆರಪಿದಂ ಮುನಿನಾಥಂ: **ಶಾಂತಿಪು,** ೯. ೧೧೭)

**ಪದಿನಾಱು ವಾಪಿಗಳ್** – ಭಾವುಕರು ಕಾಲು ತೊಳೆಯಲು ಚಂದ್ರಪ್ರಭನ ಸಮವಸರಣದ ಬಳಿಯಿರುವ ಹದಿನಾರು ಬಾವಿಗಳು (ನಂದೆ ನಂದೋತ್ತರೆ ನಂದಾವತಿ ನಂದಿಘೋಷೆ ವಿಜಯೆ ವೈಜಯಂತಿ ಜಯಂತಿ ಅಪರಾಜಿತೆ ಅಶೋಕೆ ಸುಪ್ರತಿಷ್ಠೆ ಕುಮುದೆ ಪುಡರೀಕೆ ಹೃದಯಾನಂದೆ ಮಹಾನಂದೆ ಸುಪ್ರಬುದ್ಧೆ ಪ್ರಭಾಕರಿ ಎಂಬ ಪದಿನಾಱುಂ ರತ್ನಮಯಸೋಪಾನಪಂಜ್ತಿಗಳಪ್ಪ ಸಮಚತುರಶ್ರವಾಪಿಗಳ್: **ಚಂದ್ರಪ್ರಪು,** ೧೫, ೧೯ ವ)

**ಪದಿನೆಂಟುದೋಷಂಗಳ್** – ಜೀವಿಗೆ ಅಂಟುವ ಹದಿನೆಂಟು ದೋಷಗಳು: ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ; ಇವು ಅರ್ಹಂತನಿಗೆ ಇರುವುದಿಲ್ಲ (ಪಸಿವು ನೀರಟ್ಕೆ ಮೊದಲಾಗೊಡೆಯು ಪದಿನೆಂಟು ದೋಷಂಗಳನಿಲ್ಲದೊಂ ಪರಮಾತ್ಮಂ: **ವಡ್ಡಾರಾ,** ಪು ೯೬, ಸಾ ೧೭)

**ಪದಿಮೂಱುಂ ಪ್ರಕೃತಿ** – ಅನ್ಯತರವೇದನೀಯ, ಮನುಷ್ಯಾಯುಷ್ಯ, ಮನುಷ್ಯಗತಿ, ಮನುಷ್ಯಗತಿ ಪ್ರಯೋಗ್ಯಾನುಪೂರ್ವ್ಯ, ಪಂಚೇಂದ್ರಿಯಜಾತಿ, ತ್ರಸನಾಮ, ಸುಭಗ, ಆದೇಯು, ಪರ್ಯಾಪ್ತ, ಬಾದರ, ಯಶಸ್ಕೀರ್ತಿ, ಉಚ್ಚೈರ್ಗೋತ್ರ, ತೀರ್ಥಂಕರನಾಮ ಎಂಬ ಹದಿಮೂರು ಪ್ರಕೃತಿಗಳು (ಎಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ ಬೞಿಯಂ: **ಆದಿಪು,** ೧೬. ೪೯ ವ)

**ಪದ್ಮ** – ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ಪದ್ಮನಿಧಿ** – ಭರತನಲ್ಲಿದ್ದ ಒಂದು ವಿಶಿಷ್ಟ ನಿಧಿ (ಪದ್ಮನಿಧಿಯೆಂಬ ನಿಧಿಯಂ ತರಿಸಿ ತಪನೀಯಸೂತ್ರದೊಳ್ ಏಕಾದ್ಯೇಕೋತ್ತರದಶಾಂತಂಬರಂ ... ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ: **ಆದಿಪು,** ೧೫. ೧೧ ವ)

**ಪನ್ನಿರ್ವರ್ ಚಕ್ರವರ್ತಿಗಳು** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಹನ್ನೆರಡು ಮಂದಿ ಚಕ್ರವರ್ತಿಗಳು (ಭರತನುಂ ಸಗರನುಂ ಮಘವನುಂ ಸನತ್ಕುಮಾರನುಂ ಶಾಂತಿಯುಂ ಕಂಥುವುಂ ಅರನುಂ ಸುಭೌಮನುಂ ಮಹಾಪದ್ಮನುಂ ಹರಿಷೇಣನುಂ ಜಯಷೇಣನುಂ ಬ್ರಹ್ಮದತ್ತನುಂದು ಪನ್ನಿರ್ವರ್ ಚಕ್ರವರ್ತಿಗಳಪ್ಪರ್: **ಅಜಿತಪು,** ೧೧. ೨೦ ವ)

**ಪನ್ನೆರಡಂಗ** – ಜೈನಧರ್ಮಗ್ರಂಥಗಳ ಹನ್ನೆರಡು ಭಾಗಗಳು: (ಆಚಾರ ಸೂತ್ರಕೃತಸ್ಥಾನ ಸಮವಾಯ ವ್ಯಾಖ್ಯಾಪ್ರಜ್ಞಪ್ತಿ ಜ್ಞಾತೃಧರ್ಮಕಥಾ ಉಪಾಸಕಾಧ್ಯಯನಾಂತಕ್ಕದ್ದಶಾನುತ್ತರೌಪಪಾತಿಕ ಪ್ರಶ್ನವ್ಯಾಕರಣ ವಿಪಾಕಸೂತ್ರ ದೃಷ್ಟಿವಾದಮೆಂಬ ಪನ್ನೆರಡಂಗಮುಂ: **ಹರಿವಂಶ,** ೧೪. ೫೩ ವ), ನೋಡಿ, **'ದ್ವಾದಶಾಂಗ'**

**ಪನ್ನೆರಡು ತಪ** – ತಪಸ್ವಿಗಳು ಕೈಗೊಳ್ಳಬೇಕಾದ ಅನಶನ, ಅವಮೋದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಾವಾಸ ಎಂಬ ಆರು ಆಂತರಿಕ ತಪಸ್ಸುಗಳು ಹಾಗೂ ಕಾಯಕ್ಲೇಶ, ಪ್ರಾಯಶ್ಚಿತ್ತ ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ಆಂತರಿಕ ತಪಸ್ಸುಗಳು (ಪನ್ನೆರಡು ತಪದೊಳ್ ನೆಗೞ್ದಿರ್ಪತ್ತೆರಡು ಪರೀಷಹಂಗಳಂ ಗೆಲ್ದು: **ಆದಿಪು,** ೬. ೩೩ ವ)

**ಪನ್ನೆರಡು ತೆಱದ ತಪ** – ಜೈನಮುನಿಗಳ ಹನ್ನೆರಡು ಬಗೆಯ ತಪ್ಪಸ್ಸುಗಳು (ಅನಶನ ಅವಮೌದಾರ್ಯ ... ಎಂಬ ಪನ್ನೆರಡು ತೆಱದ ತಪಮಂ ಕೈಕೊಂಡು: **ಹರಿವಂಶ,** ೧೪. ೫೨ ವ), ನೋಡಿ, **'ದ್ವಾದಶತಪ'**

**ಪರಮ** – ಜಿನ, ಆದಿದೇವ (ನಿಜಾದರದಿಂದೆ ಬಾಹುಬಲಿಗಂ ಪರಮಂ ಯುವರಾಜ ಪದವಿಯಂ ದಯೆಗೆಯ್ದಂ: ಆದಿಪು, ೯. ೬೫); ಶ್ರೇಷ್ಠ (ಪರಮತಪಶ್ಚರಣನಿರತ ಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣರೂಪ ಪಾತ್ರದತ್ತಿಯುಂ: **ಆದಿಪು,** ೧೫. ೧೩ ವ)

**ಪರಮಚತುಷ್ಟಯ** – ಶ್ರೇಷ್ಠವಾದ ನಾಲ್ಕು ಜ್ಞಾನಗಳು (ಪ್ರಕೃತಿಸ್ಥಿತ್ಯನುಭಾಗಪ್ರದೇಶಮೆಂದು ಬಂಧಂ ಮಿಥ್ಯಾತ್ವಾಸಂಯಮಕಷಾಯ ಯೋಗಮೆಂದು ಬಂಧಕಾರಣಮನಂತ ಜ್ಞಾನಮನಂತದರ್ಶನಮನಂತವೀರ್ಯ ಮನಂತಸುಖಮೆಂದು ಮೋಕ್ಷಂ ಸಮ್ಯಗ್ದರ್ಶನಜ್ಞಾನಚಾರಿತ್ರಮೆಂದು ಮೋಕ್ಷಕಾರಣಮಿಂತು ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣವೆಂಬ ಪರಮಚತಷ್ಯಯಮುಮ:**ಸುಕುಮಾಚ,** ೩. ೩೯)

**ಪರಮಜಾತಿ** – ಪಾರಿವ್ರಾಜ್ಯ ಲಕ್ಷಣಗಳನ್ನು ತಿಳಿಸುವ ಜಾತಿ ಎಂಬ ಸೂತ್ರಪದದ ದಿವ್ಯಜಾತಿ ವಿಜಯಜಾತಿ ಪರಮಜಾತಿ ಅನುಪಮಜಾತಿ ಎಂಬ ನಾಲ್ಕು ವಿಭಾಗಗಳಲ್ಲಿ ಒಂದು, ಆರ್ಹಂತ್ಯವನ್ನು ಸಿದ್ಧಿಸುವಂಥದು (ಅಲ್ಲಿ ದಿವ್ಯಜಾತಿಯಿಂದ ಮಿತ್ರತ್ವಮುಂ ಅಹಮಿಂದ್ರತ್ವಮುಂ ... ಪರಮಜಾತಿಯಿಂದ ಮಾರ್ಹಂತ್ಯಮುಂ ... ಪಡೆಯಲಕ್ಕುಂ: **ಚಾವುಂಡಜಯ,** ಪು. ೧೯೪)

**ಪರಮಜಿನ** – ಶ್ರೇಷ್ಠನಾದ ಅರ್ಹಂತ (ಪರಮಜಿನಶಿಷ್ಯರಂ ಗಣಧರರಂ ಮಕುಟಾಗ್ನಿಯಿಂದಮಗ್ನಿಕುಮಾರರ್ ಸುರಪತಿಮತದಿಂದಂ ಸಂಸ್ಕರಿಸಿದರ್: **ಶಾಂತಿಪು,** ೧೩. ೩೮)

**ಪರಮಜಿನೇಂದ್ರ** – ಪರಮಜಿನ (ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱಿದು ಪೆಣ್ಣರೂಪಮಂ ಧರಿಯಿಸಿ ನಿಂದುದಲ್ತು: **ಆದಿಪು,** ೧. ೯)

**ಪರಮತತ್ತ್ವ** – ಆತ್ಯಂತಿಕ ಅರಿವು, ಕೇವಲಜ್ಞಾನ ಮುಳ್ಳಿನಂತೆ ನೋವನ್ನುಂಟುಮಾಡುವ ಮೋಹ: ಮಿಥ್ಯಾ ಮಾಯಾ ನಿದಾನ ಎಂದು ಇದರಲ್ಲಿ ಮೂರು ಬಗೆ (ಶಲ್ಯಂಗಳಿರ್ದೊಡಂ ವೈಕಲ್ಯಕ್ಕೆಡೆಗುಡದೆ ಧೃತಿಯನವಳಂಬಿಸಿ ನಿಃಶಲ್ಯನೆನಿಸಿದ ವಾತ್ಸಲ್ಯಪರಂ ಪರಮತತ್ತ್ವಮಂ ಭಾವಿಸಿದಂ: **ಪಾರ್ಶ್ವನಾಪು,** ೧೨. ೮೯)

**ಪರಮದರುಶನಿಕ** – ಶ್ರೇಷ್ಠ ದಾರ್ಶನಿಕ, ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿದವನು (ಅಪುನರ್ಭವನಾಪ್ತಂ ತಲ್ಲಪನೋದಿತಮಾಗಮಂ ತದಾಗಮದರ್ಥೋಕ್ತಿ ಪದಾರ್ಥಮೆಂದು ನಿಶ್ಚಯಿಪ ಪರಮದರುಶನಿಕನಂತವಂ ಪ್ರಾಥಮಿಕಂ: **ಸುಕುಮಾಚ,** ೬. ೨೬)

**ಪರಮಸುಖಾಸ್ಪದ** – ಜೈನಸಂನ್ಯಾಸ (ತದ್ವೃಷಭಸೇನ ಗಣನಾಥಪುರಸ್ಸರ ಪುರುತನಯರ್ ಕ್ರಮದೊಳ್ ಪರಮಸುಖಾಸ್ಪದಮಂ ಅನಿಬರುಂ ಕೈಕೊಂಡರ್: **ಆದಿಪು,** ೧೬. ೭೬)

**ಪರಮಸ್ಥಾನ** – ಒಳ್ಳೆಯ ಹುಟ್ಟು, ಉತ್ತಮ ಶ್ರಾವಕನಾಗುವುದು, ತಪಸ್ವಿಯಾಗುವುದು, ದೇವೇಂದ್ರಪದವಿ, ಚಕ್ರವರ್ತಿಪದವಿ, ಅರ್ಹತ್ಪದವಿ, ಮೋಕ್ಷ (ಸಜ್ಜಾತಿ, ಸದ್ಗೃಹಸ್ಥ, ಮುನಿವ್ರತಧಾರಣ, ಇಂದ್ರಪದಪ್ರಾಪ್ತಿ ಸಾಮ್ರಾಜ್ಯಪ್ರಾಪ್ತಿ ತೀರ್ಥಂಕರಪದಪ್ರಾಪ್ತಿ ಸಿದ್ಧಪದಪ್ರಾಪ್ತಿ) ಎಂಬ ಏಳು ಮೋಕ್ಷಸಂಬಂಧಿ ಉತ್ತಮ ಸ್ಥಿತಿಗಳು; (ಸ್ತುತಿವೆತ್ತುತ್ತಮಜಾತಿ ಸದ್ಗೃಹತೆ ಪಾರಿವ್ರಾಜ್ಯಮಿಂದ್ರತ್ವಮೂರ್ಜಿತರಾಜ್ಯಂ ತ್ರಿಜಗತ್ಪೂಜ್ಯಪರಮಾರ್ಹಂತ್ಯಂ ಸುರುಖಾಕ್ರಾಂತನಿರ್ವೃತಿಕಾಮತಾಪರಿರಂಭಮೆಂಬ ಪರಮಸ್ಥಾನಂಗಳೊ ಪುಟ್ಟುಗು ವ್ರತಮಂ ತಾಳ್ದಿ ಸೇವ್ಯಭವ್ಯನೆ ವಲಂ ಸಮ್ಯಕ್ತ್ವಸಂಯುಕ್ತಮಂ: **ಪಾರ್ಶ್ವನಾಪು,** ೫. ೨೮)

**ಪರಮಹಂಸ** – ಕುಟೀಚಕ, ಬಹೂದಕ, ಹಂಸ, ಪರಮಹಂಸ ಎಂಬ ನಾಲ್ಕು ಪ್ರಕಾರಗಳಲ್ಲಿ ಕೊನೆಯ ವರ್ಗದ ಸನ್ಯಾಸಿ (ವಿಕ್ಲಬದಿಂ ತಾಂ ಬರವೇಟ್ಟುಂ ಪರಮಹಂಸಂ ಬಂದು ಕುಳ್ಳಿರ್ದೊಡೆ: **ಸುಕುಮಾಚ,** ૩. ೬)

**ಪರಮಾಗಮ** – ಜಿನಾಗಮ (ಪರಮಾಗಮಮನೆಲ್ಲಮಂ ಉಚ್ಚರಿಸುವಂ ಅಂತರ್ಮುಹೂರ್ತಕಾಲದೊಳ್: **ಚಂದ್ರಪ್ರಪು,** ೧೪. ೩೫)

**ಪರಮಾಣು** – ಪುದ್ಗಲದ್ರವ್ಯದ ಸೂಕ್ಷ್ಮಾತಿಸೂಕ್ಷ್ಮ ಭಾಗ (ಅಂತು ಉಪವಾಸಕೃಶೀಕೃತಾಂಗರಾಗಿ ಶರೀರಕರ್ಮ ಪರಮಾಣುಗಳಂ ಒಡನೊಡನೆ ತವಿಸಿ: **ಶಾಂತಿಪು,** ೭. ೭೧ ವ)

**ಪರಮಾಣುಪರಾವರ್ತನ** – ಬೇರೆ ಬೇರೆ ಜನ್ಮಗಳಲ್ಲಿ ವಿಭಿನ್ನ ಪರಮಾಣುಗಳನ್ನು ಹೊಂದುವುದು (ಒರ್ಮೆ ಶರೀರಂ ಕೆಯ್ಕೊಳ್ವಲ್ಲಿ ತೆಗೆದುಕೊಂಡ ಪರಮಾಣುಗಳಲ್ಲದೆ ಪೆಱಪೆಱವಂ ಕೊಂಡಂತೀ ಮೂಱುಂ ಲೋಕದೊಳಗುಳ್ಳ ಪರಮಾಣುಗಳೆಲ್ಲಮಂ ಕೂಡಿದೊಡದೊಂದು ಪರಮಾಣುಪರಾವರ್ತನಂ: **ಜೀವಸಂ,** ೫. ೨ ವ)

**ಪರಮಾನಂದಚತುಷ್ಟಯ** – ಅನಂತಜ್ಞಾನ ಅನಂತದರ್ಶನ ಅನಂತಸುಖ ಹಾಗೂ ಅನಂತವೀರ್ಯಗಳು (ಪರಮಾನಂದ ಚತುಷ್ಟೈಕನಿಳಯಂ ಶ್ರೀಮತ್ಸಭಾಮಂಡಳಾಂತರ ಸಿಂಹಾಸನ ಸುಸ್ಥಿತಂ: **ಆದಿಪು,** ೧೦. ೬೯)

**ಪರಮಾಯು** – ಒಂದು ಪೂರ್ವಕೋಟಿ ಪ್ರಮಾಣದ ಜೀವಿತಾವಧಿ (ತೊಲಗದು ಪುಬ್ಬಕೋಟಿ ಪರಿಸಂಖ್ಯೆವರಂ ಪರಮಾಯು: **ಆದಿಪು,** ೧. ೫೨)

**ಪರಮಾಯುಷ್ಯ** – ಜೀವಮಾನಾವಧಿ (ಪರಮಾಯುಷ್ಯಾಂತಂಬರಂ ನಿರಾಕುಳಮಾಗಿರ್ಪಾಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊರೆಯಿಸಿದಂ: **ಆದಿಪು,** ೨. ೫೩)

**ಪರಮಾರ್ಹಂತ್ಯ** – ಅತಿಶಯವಾದ ಅರ್ಹಂತಪದವಿ (ಪರಮಾರ್ಹಂತ್ಯಮನೆಯ್ದಲಿರ್ದುದದಱಿಂ ಮೇಲುಂಟೆ ಸತ್ತ್ವಂ: **ಆದಿಪು,** ೯. ೬೨)

**ಪರಮಾವಗಾಢರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಪರಮಾವಗಾಢರುಚಿಯೆಂಬುದು ಪರಮಾವಧಿ ಕೇವಲಜ್ಞಾನಪ್ರಕಾಶಿತ ಜೀವಾದಿ ಪದಾರ್ಥವಿಷಯಾತ್ಮಪ್ರಸಾದ ಶ್ರದ್ಧಾನಂ: **ಚಾವುಂಡಜಯ,** ಪು. ೩೩೭)

**ಪರಮಾವಧಿ** – ದೇಶಾವಧಿ ಪರಮಾವಧಿ ಸರ್ವಾವಧಿ ಎಂಬ ಅವಧಿಜ್ಞಾನದ ಮೂರು ಭೇದಗಳಲ್ಲಿ ಒಂದು (ಪರಮಾವಧಿಯಿಂ ಭವಮನಱಿದು ಯತಿಪತಿ ನುಡಿದಂ: **ಆದಿಪು,** ೩. ೩೭)

**ಪರಮೇಶ್ವರದೀಕ್ಷೆ** – ದಿಗಂಬರಸನ್ಯಾಸ (ಗುರುಪದ ಪದ್ಮಾಂತಿಕದೊಳ್ ಪರಮೇಶ್ವರದೀಕ್ಷೆಯಂ ಮನಂ ಬಿಡೆ ಕೊಂಡು ಈ ಧರೆಯಂ ಪೊಗಟಿಸಿದಂ: **ಆದಿಪು,** ೧೪. ೧೩೯)

**ಪರಮೌದಾರಿಕ** – ಘಾತಿಕರ್ಮ ನಾಶವಾಗಿ ಅರ್ಹದವಸ್ಥೆಯಲ್ಲಿರುವ ಜೀವ (ಪರಮೌದಾರಿಕ ದಿವ್ಯಶರೀರನುಂ ... ಸುಂದರಾಕಾರನುಮಪ್ಪ ತೀರ್ಥಕರ ಕುಮಾರಂಗೆ ... ಪ್ರಸಾಧನಪ್ರಾರಂಭಂಗೆಯ್ಯೆ: **ಶಾಂತಿಪು,** ೧೦. ೫೬ ವ)

**ಪರಲಿಂಗಿ** – ಅನ್ಯಧರ್ಮೀಯ (ದುಶ್ಚರಿತ್ರರಂ ಲೋಲುಪರಂ ಪರಲಿಂಗಿಗಳಂ ಪೊರ್ದಿರ್ಪಿರವಿದು ಪಾಷಂಡಿಮೂಢಂ ಎಂಬುದದಕ್ಕುಂ: **ಸಮಯಪ,** ೧೪. ೨)

**ಪರವ್ಯಪದೇಶ** – ಶಿಕ್ಷಾವ್ರತದ ಒಂದು ಆಚಾರ, ಪಾತ್ರದಾನಕ್ಕೆ ಅತಿಥಿಯನ್ನು ಕರೆತರಲು ಸಂಬಂಧಿಕನಲ್ಲದವನಿಗೆ ಹೇಳುವುದು (ಕ್ರಮದೆ ಪರವ್ಯದೇಶಂ ಸಮುತ್ಸರತ್ವಂ ... ಅತಿಕ್ರಮಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್: **ಸುಕುಮಾಚ,** ೬. ೨೨)

**ಪರಸ್ಪರೋದೀರೀತ** – ನಾರಕರು ಪರಸ್ಪರರು ಕೊಡುವ ದುಃಖ (ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರ ದುಃಖಂಗಳಂ ಅನೇಕ ಪ್ರಕಾರದಿನನುಭವಿಸುತ್ತುಂ: **ಸುಕುಮಾಚ,** ೧೧.೪೭ ವ)

**ಪರಾಮರ್ಶನ** – ಅಶುಭ ನಾಮಪ್ರಕೃತಿಗಳಲ್ಲಿ ಒಂದು (ಬಟಿಯಂ ಅಂತರ್ಮುಹೂರ್ತ ಕಾಲಂ ಪ್ರಮತ್ತಾಪ್ರಮತ್ತ ಪರಾವರ್ತನಸಹಸ್ರಂಗೆಯ್ದು: **ಆದಿಪು,** ೧೦. ೧೪ ವ)

**ಪರಾವರ್ತನ** – ಅಶುಭನಾಮಪ್ರಕೃತಿಗಳಲ್ಲಿ ಒಂದು (ಬಟಿಯುಮಂತರರ್ಮುಹೂರ್ತ ಕಾಲಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಂಗೆಯ್ದು ... ಆಯುಃಕರ್ಮಮನಟಿಪಿ: **ಆದಿಪು,** ೧೦. ೧೪ ವ)

**ಪರಿಕರ್ಮ:** ದೃಷ್ಟಿವಾದಾಂಗದ ಪರಿಕರ್ಮ ಸೂತ್ರಕೃತ ಪ್ರಥಮಾನುಯೋಗ ಪೂರ್ವಗತ ಚೂಲಿಕಾ ಎಂಬ ಐದು ವಿಭಾಗಗಳಲ್ಲಿ ಒಂದು, ಲಿಪಿಜ್ಞಾನ ಮತ್ತು ಗಣಿತಗಳನ್ನೊಳಗೊಂಡ ಭಾಗ (ಪರಿಕರ್ಮಂ ಸೂತ್ರಂ ವಿಸ್ತರಿತಪ್ರಥಮಾನು ಯೋಗಮಾಪೂರ್ವಗತಂ ವರಚೂಳಿಕೆಯೆಂಬಿವು ಪನ್ನೆರಡನೆಯಂಗಕ್ಕೆ ತೋರ್ಕುಮಯ್ದು ವಿಕಲ್ಪಂ: **ಚಂದ್ರಪ್ರಪು,** ೧೪. ೪೭)

**ಪರಿಗ್ರಹ** – ಮಮತೆ, ವಾತ್ಸಲ್ಯ; ಮಮತೆಗೆ ಕಾರಣವಾದ ವಸ್ತುಗಳೂ ಪರಿಗ್ರಹಗಳೇ, ಇದು ಬಾಹ್ಯ ಅಭ್ಯಂತರ ಎಂದು ಎರಡು ಬಗೆ: ಧನ ಧಾನ್ಯ ಮುಂತಾದ ವಸ್ತುಗಳು ಬಾಹ್ಯಪರಿಗ್ರಹಗಳಾದರೆ, ಮಿಥ್ಯಾತ್ವ ಕ್ರೋಧ ಮುಂತಾದವು ಆಂತರಿಕ ಪರಿಗ್ರಹಗಳು (ಎನಿತು ಪರಿಗ್ರಹದ ತೊಡರ್ಪನಿತೆ ಮನೋದುಃಖಮದಱ ಕುಂದೆನಿತು ಮನಕ್ಕನಿತೆ ಸುಖಮೆಂಬುದಂ ನೆಟ್ಟನೆ ತಿಳಿದಂ ಜನ್ಮಜಲಧಿಯೊಳ್ ಮುಳುಗುವನೇ: **ಆದಿಪು,** ೩. ೬೨)

**ಪರಿಗ್ರಹವಿರತ** – ತನ್ನ ಸಾಂಸಾರಿಕ ವ್ಯವಹಾರಗಳನ್ನೆಲ್ಲ ಮಗನಿಗೊಪ್ಪಿಸಿ ವಿರತನಾದವನು (ಇಂತು ದರ್ಶನಿಕಂ ವ್ರತಿಕಂ ... ಬ್ರಹ್ಮಚಾರಿ ಆರಂಭಿಕಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ: **ಸುಕುಮಾಚ,** ೬. ೩೬ ವ); (ಭರದಿಂ ಮುಂ ಪೇಟ್ದ ಗುಣಂ ಬೆರಸು ಪರಿಗ್ರಹದ ಚಿಂತೆಯುಂ ಬಿಟ್ಟು ಸದಾಚರಿತನೆನಿಪಂ ಪರಿಗ್ರಹವಿರತಂ ಪಾಪಾದ್ರವಜ್ರನೊಂಬತ್ತನೆಯಂ: **ಧರ್ಮಾಮೃತ,** ೫. ೯೭)

**ಪರಿಣಾಮ** – ವಸ್ತುವಿನ ಶುಭ ಅಶುಭ ಮತ್ತು ಶುದ್ಧ ಎಂಬ ಮೂರು ಬಗೆಯ ಭಾವ (ಪರಿಣಾಮವಸಂಖ್ಯಾತಂ ಪರಿವರ್ತಿಸುತಿರ್ಪವಲ್ಲಿ ಶುಭಪರಿಣಾಮಮಂ ಬೆರಸೊಸೆದಿರ್ಕಾಗಳುಮಾರ್ತರೌದ್ರದೊಳೆ ಮೂಡಿ ಮುಳುಗುತ್ತಿರ್ಪುದೆ ಚಮರಂ: **ಅಜಿತಪು,** ೧೧. ೪೧)

**ಪರಿಣಾಮಶುದ್ಧಿ** – ಮನಃಪರಿಪಾಕ (ಪರಮಮುನೀಶ್ವರನರ್ಹತ್ಪರಮೇಶ್ವರ ಚರಣಕಮಲಯುಗಳಕ್ಕತಿ ನಿರ್ಭರ ಭಕ್ತಿಭರದಿನತ್ಯಾದರದಿಂ ಪರಿಣಾಮಶುದ್ಧಿಯಿಂ ವಂದಿಸಿದಂ: **ಸುಕುಮಾಚ,** ೪. ೨೧)

**ಪರಿನಿರ್ವಾಣ** – ಅರ್ಹಂತನ ದೇಹಾವಸಾನ (ಪರಿನಿರ್ವಾಣಮನೆಯ್ದಿದರ್ ಮುದದೆ ಪತ್ತೊಂಬತ್ತು ಮುಂ ತೀರ್ಥಕೃದ್ವರರ್: **ಪಾರ್ಶ್ವನಾಪು,** ೧೬. ೧೬೬)

**ಪರಿನಿರ್ವಾಣಕಲ್ಯಾಣ** – ಅರ್ಹಂತನ ದೇಹಸಂಸ್ಕಾರ, ಪಂಚಕಲ್ಯಾಣಗಳಲ್ಲಿ ಕೊನೆಯದು (ಅಮರನಿಕಾಯಂ ಸುವಿಧೀಶ್ವರಂಗೆ ಪರಿನಿರ್ವಾಣಕಲ್ಯಾಣ ಮಹಾಪೂಜೆಯಂ ಮಾಟ್ಟಿ ಭಕ್ತಿಯಿಂ ಬಂದು: **ಪುಷ್ಪದಂಪು,** ೧೪. ೫೬ ವ)

**ಪರಿನಿರ್ವಾಣಕ್ರಿಯೆ** – ತೀರ್ಥಂಕರನು ದೇಹತ್ಯಾಗ ಮಾಡಿದ ಸಂದರ್ಭದಲ್ಲಿ ಆತನಿಗೆ ಮಾಡುವ ಆರಾಧನೆ (ಪರಿನಿರ್ವಾಣಕ್ರಿಯೆಯಂ ಪರಮೋತ್ಸವದಿಂದೆ ತೀರ್ಚಿ ಸಕಳವಿನೇಯೋತ್ಕರಮಂದು ನಯದೆ ನಿಜನಿಜಧರೆಗಳ್ಗಲ್ಲಿಂದೆ ತಳರ್ದು ಪೋಯ್ತು ಕೃತಾರ್ಥಂ; **ಆಚವರ್ಧ,** ೧೬. ೮೩)

**ಪರಿನಿರ್ವಾಣಕ್ಷೇತ್ರ** – ತೀರ್ಥಂಕರನು ದೇಹತ್ಯಾಗ ಮಾಡಿದ ಸ್ಥಳ (ತ್ರಿಜಗತ್ಪೂಜ್ಯನೆನಿಸಿದ ಶ್ರೀ ವಾಸುಪೂಜ್ಯ ಭಟ್ಟಾರಕರ ಪರಿನಿರ್ವಾಣಕ್ಷೇತ್ರಮಂ ಕಂಡು ಮೂಱುಸೂಟ್ ಬಲವಂದು ಕೈಗಳಂ ಮುಗಿದು: **ಸುಕುಮಾಚ,** ೪. ೩೬ ವ)

**ಪರಿನಿರ್ವಾಣಪೂಜೆ** – ಕೇವಲಜ್ಞಾನಿಯ ದೇಹವಿಸರ್ಜನೆಯ ಸಂದರ್ಭದಲ್ಲಿ ಗೈಯುವ ಪೂಜೆ (ಪ್ರಭಾಕರೀಪುರಿಯೊಳ್ ವಿನಯಂಧರ ಯೋಗಿಗಳ ಪರಿನಿರ್ವಾಣ ಪೂಜೆಯಂ ಮಾಡಿ: **ಆದಿಪು,** ೩. ೫೮ ವ)

**ಪರಿನಿರ್ವಾಣಮಹೋತ್ಸವ** – ಪರಿನಿರ್ವಾಣಕಲ್ಯಾಣ (ಸುರಲೋಕಾವತರೋತ್ಸವಂ ಜನ್ಮಾಭಿಷೇಕೋತ್ಸವಂ ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯ ಬೋಧೋತ್ಸವಂ ಪರಿನಿರ್ವಾಣಮಹೋತ್ಸವಂ ಜಿನಮಹಾಕಲ್ಯಾಣಮೈದುಂ ಸವಿಸ್ತರದಿಂದಿರ್ಪುವು ವರ್ಣಗಂಗಳಿವಜಿಂ ಭವ್ಯಾಂಗಮೇನೊಪ್ಪದೇ: **ಅಜಿತಪು,** ೧. ೯೫)

**ಪರಿನಿರ್ವೃತಮೂರ್ತಿ** – ವೈರಾಗ್ಯಮೂರ್ತಿ (ಅಂತು ಪರಮಾತಿಶಯ ರೂಪ ರಸ ಗಂಧ ಸ್ಪರ್ಶ ಗುಣವತ್ ಪರಮಾಣು ಪರಿನಿರ್ವೃತಮೂರ್ತಿಯಪ್ಪ ಪರಮನ: **ಆದಿಪು,** ೮. ೬ ವ)

**ಪರಿನಿರ್ವೃತಿ** – ಪರಿನಿರ್ವಾಣ (ಸರ್ವಾಂಗಮಲಧರಂ ಪರಿನಿರ್ವೃತಿಸೌಖ್ಯೋನ್ಮುಖಂ: **ಚಂದ್ರಪ್ರಪು,** ೯. ೨೦)

**ಪರಿನಿರ್ವೃತಿಭೂಮಿ** – ಪರಿನಿರ್ವಾಣಕ್ಷೇತ್ರ (ಪರಿನಿರ್ವೃತಿಭೂಮಿಯನಾ ಸುರೋತ್ತಮಂ ಸಂತಸದಿಂದೆ ಭಕ್ತಿವೆರಸಾಗಳೆ ಪೂಜಿಸಿ ಲೇಸುಗೆಯ್ದುನ್: **ಸುಕುಮಾಚ,** ೯.೩೧)

**ಪರಿನಿರ್ವೇಗ** – ಪರಮ ವೈರಾಗ್ಯ (ಸಂಸಾರಭೋಗ ಪರಿನಿರ್ವೇಗಂ ತಪಃಪ್ರೀತಿಯಿಂ ... ದೀಕ್ಷೆಗೊಂಡಂ: **ಪಂಪರಾ,** ೨. ೩೬)

**ಪರಿನಿಷ್ಕ್ರಮಣ** – ಒಂದು ಗರ್ಭಾನ್ವಯಕ್ರಿಯೆ, ಐಹಿಕವನ್ನು ತೊರೆಯುವುದು (ಪರಿನಿಷ್ಕ್ರಮಣ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಪರಿನಿಷ್ಕ್ರಮಣಕಲ್ಯಾಣ** – ಪಂಚಕಲ್ಯಾಣಗಳಲ್ಲಿ ಒಂದು, ತೀರ್ಥಂಕರನು ತಪಸ್ಸಿಗೆ ತೆರಳುವ ಸಂದರ್ಭದಲ್ಲಿ ನಡೆಸುವ ಉತ್ಸವ (ಪರಿನಿಷ್ಕ್ರಮಣಕಲ್ಯಾಣಮನನಾಗಿ ನಿಶ್ಚಯಿಸಲೊಡಂ ಲೋಕಾಂತಿಕದೇವರ್ ಬಂದು: **ಶಾಂತಿಪು,** ೯. ೬೦ ವ)

**ಪರಿನಿಷ್ಕ್ರಾಂತಿಮಹೋತ್ಸವ** – ತೀರ್ಥಂಕರನ ಪರಿನಿಷ್ಕ್ರಮಣಕಲ್ಯಾಣ (ಸುರಲೋಕಾವತರೋತ್ಸವಂ ಜನ್ಮಾಭಿಷೇಕೋತ್ಸವಂ ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯಬೋಧೋತ್ಸವಂ ಪರಿನಿರ್ವಾಣಮಹೋತ್ಸವಂ ಜಿನಮಹಾಕಲ್ಯಾಣಮೈದುಂ ಸವಿಸ್ತರದಿಂದಿರ್ಪುವು ವರ್ಣಗಂಗಳಿವಱಿಂ ಭವ್ಯಾಂಗಮೇನೊಪ್ಪದೇ: **ಅಜಿತಪು,** ೧. ೯೫)

**ಪರಿಮಾಣಪರಾವರ್ತನ** – ವಿವಿಧ ಬಗೆಯ ಪರಿಮಾಣಗಳೊಡನೆ ಹುಟ್ಟುವುದು (ಒಂದು ಪರಿಮಾಣವಂ ಮಾಡಿ ಮತ್ತಂ ಪರಿಣಾಮವೆನಿತೊಳವನಿತುಮಂ ಕೊಂಡು ಮುನ್ನಿನ ಪರಿಮಾಣದ ಕೆಲದ ಪರಿಣಾಮಮಂ ಕೊಂಡು ಮತ್ತಂ ನೆಱಿಯೆ ಕೊಂಡೊಡದೊಂದು ಪರಿಮಾಣಪರಾವರ್ತನಂ: **ಜೀವಸಂ,** ೫. ೨ ವ)

**ಪರಿಮಾಣಪರಿಗ್ರಹವ್ರತ** – ಆವಶ್ಯಕವಾದಷ್ಟು ಮಾತ್ರ ವಸ್ತುಗಳನ್ನು ಹೊಂದಿರುವ ವ್ರತ (ಇರೆ ಕುಪ್ಯನಿವೇಶನ ಧನ ವರಧಾನ್ಯ ಕ್ಷೇತ್ರಮುಖ್ಯಮೆಂಬಿವು ಪವಣಿಂದಿರದೇಱಿಸುವುದು ಮತ್ತಂ ಪರಿಮಾಣಪರಿಗ್ರಹವ್ರತಕ್ಕತಿಚಾರಂ: **ಸುಕುಮಾಚ,** ೬. ೧೭)

**ಪರಿಮಿತಪರಿಗ್ರಹ** – ಪರಿಮಾಣಪರಿಗ್ರಹವ್ರತ (ಕೊಲ್ಲದ ಪುಸಿಯದ ಕಳ್ಳದ ಸ್ವದಾರ ಸಂತೋಷಂ ಪರಿಮಿತ ಪರಿಗ್ರಹಂ ಇಂತು ಅಯ್ದು ಅಣುವ್ರತಂಗಳಂ: **ವಡ್ಡಾರಾ,** ಪು ೨೨, ಸಾ ೧೭)

**ಪರಿವಾರದಪ್ಸರೋಗಣ** – ಅಚ್ಯುತೇಂದ್ರನ ಒಬ್ಬೊಬ್ಬ ಮಾದೇವಿಗೂ ಇರುವ ೨೫೦ ಮಂದಿ ಪರಿವಾರದೇವಿಯರು; ಎಲ್ಲ ಸೇರಿ ಅಚ್ಯುತೇಂದ್ರನಿಗೆ ಒಟ್ಟು ೨೦೭೧ ಮಂದಿ ದೇವಿಯರು (ದೇವಿಯರೊಳೊರ್ಬರೊರ್ಬರ್ ದೇವಿಯ ಪರಿವಾರದಪ್ಸರೋಗಣಮುಂ ತದ್ದೇವೀ ವಿಕಿರಣಸಂಭವ ದೇವಿಯರುಂ: **ಆದಿಪು,** ೬. ೧೫)

**ಪರಿವೀತದೇಹಬಿಂಬತೆ** – ದೇಹಕ್ಕೆ ನೆರಳು ಇಲ್ಲದಿರುವುದು (ಅನ್ವಿತಚತುರಾನನತ್ವಂ ಅಖಿಳಾಗಮವಿತ್ತ್ವಂ ಅಪಕ್ಷ್ಮತಾಸಂ ಆಯತಗಗನಪ್ರಚಾರಂ ಅಪಜೀವವಧಂ ಪರಿವೀತದೇಹಬಿಂಬತೆ: **ಆದಿಪು,** ೧೦. ೪೩)

**ಪರಿವ್ರಾಜಕದೀಕ್ಷೆ** – ಪರ್ಯಟನ ಮಾಡುವ ಸನ್ಯಾಸಿ (ನಿರ್ವೇಗದಿಂದೊರ್ವಳೆ ಪೊಱಮಟ್ಟು ಬಂದು ತಾಪಸವಳ್ಳಿಯೊಳ್ ಪರಿವ್ರಾಜಕದೀಕ್ಷೆಯಂ ಕೈಕೊಂಡು: **ಹರಿವಂಶ,** ೧೧. ೨ ವ)

**ಪರಿಹಾರಶುದ್ಧಿ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಚಾರಿತ್ರಶುದ್ಧಿ (ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಪರೀಷಹ** – ತಪಶ್ಚರಣಕ್ಕೆ ಇರುವ ಇಪ್ಪತ್ತೆರಡು ಬಗೆಯ ಅಡ್ಡಿಗಳು: ಹಸಿವು, ಬಾಯಾರಿಕೆ, ಚಳಿ, ಉಷ್ಣ, ಸೊಳ್ಳೆ ಮುಂತಾದವುಗಳ ಕಚ್ಚುವಿಕೆ, ಬತ್ತಲೆಯಿರುವುದರಿಂದಾಗುವ ತೊಂದರೆಗಳು, ಅರತಿ, ಸ್ತ್ರೀವಿರಹ, ಸಂಚಾರಬಾಧೆ, ಶಯ್ಯಾಬಾಧೆ, ಆಸನಬಾಧೆ, ಬೈಗುಳ, ಯಾಚನೆಯಿಂದಾಗುವ ತೊಂದರೆಗಳು, ಹೊಡೆತ, ಭಿಕ್ಷೆ ದೊರೆಯದ ಖೇದ, ತಪಸ್ಸಿಗೆ ತಕ್ಕ ಫಲ ಸಿಕ್ಕದಿರುವುದು, ರೋಗ, ಮುಳ್ಳುಕಲ್ಲುಗಳಿಂದ ತೊಂದರೆ, ಅಹಂಕಾರ, ಅಜ್ಞಾನದ ಕೊರಗು, ಸ್ನಾನವಿರದ್ದರಿಂದಾ ಗುವ ಬಾಧೆ, ಜನರಿಂದ ಪುರಸ್ಕಾರ ದೊರೆಯದಿರುವುದು (ದೇಹೋತ್ಪನ್ನ ಪರೀಷಹಸಂಹತಿ ತನ್ನೊಡಲಂ ನೆಱೆಯೆ ತವಿಸುತಿರ್ಪುದುಮಂ: **ಆದಿಪು,** ೨. ೫೨)

**ಪರೀಷಹಜಯ** – ಪರೀಷಹಗಳನ್ನು ಮೀರುವುದು (ಪೆತ್ತ ಪರೀಷಹಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೇ: **ಯಶೋಧಚ,** ೧. ೪೯)

**ಪರೀಷಹಸಂಹತಿ** – ಪರೀಷಹಗಳ ಸಮೂಹ (ದೇಹೋತ್ಪನ್ನ ಪರೀಷಹಸಂಹತಿ ತನ್ನೊಡಲಂ ನೆಱೆಯೆ ತವಿಸುತಿರ್ಪುದುಮಂ: **ಆದಿಪು,** ೨. ೫೨)

**ಪರ್ಣಲಘು** – ಶರೀರವನ್ನು ಎಲೆಯಂತೆ ಹಗುರಮಾಡಿಕೊಳ್ಳುವ ವಿದ್ಯೆ (ನೊಂದು ನಿತ್ತರಿಸಲಾಱದೆ ಭೋಂಕನೆ ಬಿಟ್ಟು ತಾಂ ಮಹೀತಳಕೆ ಬೀೞುತ್ತುಂ ನಮ್ಮ ನೋವಿಂಗಾಱದೆ ಪರ್ಣಲಘುವೆಂಬ ವಿದ್ಯೆಯಂ ಬೆಸಸುವುದುಂ:: **ಶಾಂತಿಪು,** ೪. ೯೬ ವ))

**ಪರ್ಣಲಘುವಿದ್ಯೆ** – ಪರ್ಣಲಘು (ವಸುದೇವನಂ ಪರ್ಣಲಘುವಿದ್ಯೆಯ ಕೆಯ್ಯೊಳ್ ಕೊಟ್ಟೊಡೆ ಅದು ಚಂಪಾಪುರದ ... ನಡುವಣ ಪುಳಿನತಳದೊಳಿರಿಸಿ ಪೋಗೆ: **ನೇಮಿನಾಪು,** ೬. ೧೪ ವ)

**ಪರ್ಯಾಪ್ತಕ** – ಪರ್ಯಾಪ್ತಿಯನ್ನು ಹೊಂದಿದ ಜೀವ (ಅಲ್ಲಿ ಸೂಕ್ಷ್ಮಬಾದರ ಪರ್ಯಾಪ್ತಕಭೇದದಿಂ ಸೂಕ್ಷ್ಮವನಸ್ಪತಿಕಾಯಂಗಳ್ ... ಪುಟ್ಟುತುಮಿರ್ಕುಂ: **ಮಲ್ಲಿನಾಪು,** ೧೩. ೧೨೨ ವ), ನೋಡಿ, **'ಪರ್ಯಾಪ್ತಿ'**

**ಪರ್ಯಾಪ್ತಯೋಗ** – ತಪಸ್ಸನ್ನು ಪೂರ್ಣಗೊಳಿಸಿದವನು (ತನ್ಮುನೀಂಧ್ರಂ ಪರ್ಯಾಪ್ತಯೋಗಂ ಕೆಯ್ಯನೆತ್ತಿಕೊಂಡು ಯಥೋವಿಹಾರದಿಂ ... ಚರಿಗೆವುಗೆ: **ಶಾಂತಿಪು,** ೯. ೨೧ ವ)

**ಪರ್ಯಾಪ್ತಿ** – ನಾಮಪ್ರಕೃತಿಗಳಲ್ಲಿ ಒಂದು; ಶರೀರದ ಪುದ್ಗಲರಚನೆ ಪೂರ್ಣಗೊಂಡಿರುವುದು; ಇದರಲ್ಲಿ ಆರು ಬಗೆ: ಆಹಾರ, ಶರೀರ, ಇಂದ್ರಿಯ,

ಶ್ವಾಸೋಚ್ಛ್ವಾಸ, ಭಾಷಾ, ಮನಸ್ (ಪರಾರ್ಥ್ಯರತ್ನರಚನಾವಿಚಿತ್ರೋಪಪಾದ ಶಯನತಳದೊಳ್ ಅಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು: **ಆದಿಪು,** ೬. ೩೭ ವ)

**ಪರ್ವದಿನ** – ಪೂಜೆ, ಉಪವಾಸ ವ್ರತ ಮೊದಲಾದವುಗಳನ್ನು ಮಾಡಲು ಪ್ರಶಸ್ತವಾದ ದಿನ (ಇಂದು ಪರ್ವಧಿನಮಪ್ಪುದಱಿಂ ದೇವಿಯುದಯಸಮಯದೊಳ್ ಮಂಗಳಾಲಂಕಾಕೃತೆಯಾಗಿ ಪರಿವಾರಾಂಗನಾ ಕರತಳಪರಿಕಳಿತ ವಿವಿಧಾರ್ಚನಾ ವಿಶೇಷಂ ಬೆರಸು: **ಪುಷ್ಪದಂಪು,** ೩. ೭೪ ವ)

**ಪರ್ವದಿವಸ** – ಪರ್ವದಿನ (ಪರ್ವದಿವಸದೊಳಪ್ಪೊಡಮೆಂದಾನುಮಿವರ್ಗುಣಲಿಕ್ಕಿ ಮೆಂದಱಿಯಂ ಪಂಚಮಹಾಪಾತಕಂ: **ವಡ್ಡಾರಾ,** ಪು. ೪. ಸಾ. ೧೮)

**ಪಲ್ಯ** – ಒಂದು ದೊಡ್ಡ ಕಾಲಪ್ರಮಾಣ; ಇದರಲ್ಲಿ ಮೂರು ಬಗೆ; ವ್ಯವಹಾರಪಲ್ಯ, ಉದ್ಧಾರಪಲ್ಯ, ಅದ್ಧಾಪಲ್ಯ (ಅವರ್ಗೆಲ್ಲಂ ಅನುಕ್ರಮದೊಳ್ ಮೂಱುಂ ಎರಡುವರೆಯುಂ ಎರಡುಂ ಒಂದುವರೆಯುಂ ಪಲ್ಯೋಪಮ ಆಯುಷ್ಯಂ: **ಅಜಿತಪು,** ೧೧. ೭ ವ)

**ಪಲ್ಯಂಕಾಸನ** – ಒಂದು ಯೋಗಾಸನ, ಎಡಪಾದವನ್ನು ಬಲತೊಡೆಯ ಮೇಲೂ ಬಲಪಾದವನ್ನು ಎಡತೊಡೆಯ ಮೇಲೂ ಇರಿಸಿ ಧ್ಯಾನಕ್ಕೆ ಕುಳಿತುಕೊಳ್ಳುವ ಭಂಗಿ (ವಸ್ತ್ರಾಭರಣಮಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡನಿಬದ್ಧ ಪಲ್ಯಂಕಾಸನನುಮಾಗಿ: **ಆದಿಪು,** ೯. ೭೬ ವ)

**ಪವನಂಜಯ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದಾದ ತುರಗರತ್ನದ ಹೆಸರು (ಪವನವೇಗ ನಿವರ್ತನನಿಪುಣನುಂ ದ್ವಾದಶಯೋಜನೋಲ್ಲಂಘನರಂಹೋ ನಿವಾಸಭೂಮಿಯುಮಪ್ಪ ಪವನಂಜಯಮೆಂಬ ತುರಗರತ್ನಮುಂ: **ಆದಿಪು,** ೧೧. ೩ ವ)

**ಪವನತ್ರಯ** – ಭೂಲೋಕವನ್ನು ಆವರಿಸಿರುವ ಘನೋದಧಿ, ಘನವಾತ, ತನುವಾತಗಳೆಂಬ ಮೂರು ಬಗೆಯ ಗಾಳಿಗಳು (ಭುವನಂ ಪವನತ್ರಯಾವೃತಂ: **ಮಲ್ಲಿನಾಪು,** ೧. ೫೫)

**ಪವನನಿರೋಧ** – ಉಸಿರು ಬಿಗಿಹಿಡಿಯುವುದು (ಪವನನಿರೋಧಮಿಲ್ಲದ ಗಳೋಷ್ಠಪುಟಾದಿ ನಿಮಿತ್ತಮಿಲ್ಲದ ... ನಾದಮೊಗೆದತ್ತಭವಂಗೆ ಗಭೀರತಾಯುತಂ: **ಆಚವರ್ಧ,** ೧೬. ೨೭)

**ಪಶ್ಚಿಮಸಲ್ಲೇಖನ** – ನಾಲ್ಕು ಶಿಕ್ಷಾವ್ರತಗಳಲ್ಲಿ ಒಂದು, ಜೀವಿತದ ಕೊನೆಯ ಕಾಲದಲ್ಲಿ ಸ್ವೀಕರಿಸುವ ಸಲ್ಲೇಖನವ್ರತ (ಸಾಮಾಯಿಕ ಪ್ರೋಷಧೋಪವಾಸಮುಮುಪಭೋಗ ಪರಿಭೋಗಾತಿಥಿ ಸಂವಿಭಾಗಮಂ ಪಶಿಮಸಲ್ಲೇಖನಮಮೆಂಬ ನಾಲ್ಕುಂ ಶಿಕ್ಷಾವ್ರತಮುಮನಿಂತು ... ಅಜೆಪಿ: **ಚಾವುಂಡಜಯ,** ಪು ೧೬೦)

**ಪಳಿತ** – ಲೆಕ್ಕಕ್ಕೆ ಸಿಕ್ಕದಷ್ಟು ದೀರ್ಘಕಾಲ (ಮುಡಿಪಿ ದೇವ ಲೋಕದೊಳೆ ಪಳಿತೋಪಮಾಯುಷ್ಯಸ್ಥಿತಿಯೊಳಾಗಿ ಮಣಿಚೂಳಿಯೆಂಬ ದೇವಿಯಾಗಿ ಪುಟ್ಟಿ: **ಹರಿವಂಶ,** ೧೩. ೪೫ ವ)

**ಪಾಂಚಜನ್ಯ** – ಮಧುರಾನಗರದ ಚೈತ್ಯಾಲಯದಲ್ಲಿ ಹುಟ್ಟಿದ ಶಂಖ; ಇದನ್ನು ಕೃಷ್ಣನು ವಶಪಡಿಸಿಕೊಳ್ಳುತ್ತಾನೆ (ಹರಿಯದೊಂದು ಪುಣ್ಯೋದಯದಿಂ ಶುಚಿನಾಗಶಯ್ಯೆಯುಂ ಶಾರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ: **ನೇಮಿನಾಪು,** ೮. ೨೬)

**ಪಾಂಡುಕ** – ಸುಮೇರು ಪರ್ವತದ ಮೇಲಿನ ನಾಲ್ಕು ವನಗಳಲ್ಲಿ ಒಂದು [ಉಳಿದವು: ಭದ್ರಪಾಲ, ನಂದನ, ಸೌಮನಸ] (ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ ಸಂಧಿಸಿ ನಿಂದ ನಂದನದಿಂದೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಂ ಅೞ್ತಿಯಂ ತಂದುದು ಕಾಣ್ಕೆಯಂ ತನಗೆ ತರ್ಪ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨); ಪಾಂಡುಕದಲ್ಲಿನ ನಾಲ್ಕು ವಿವಿಧ ವರ್ಣಗಳ ಶಿಲಾತಲಗಳು (ಪಾಂಡುವನದ ಪೂರ್ವದಕ್ಷಿಣದಿಗ್ಭಾಗದ ರಜತವರ್ಣದ ಪಾಂಡುಕಮುಂ ಪಶ್ಚಿಮೋತ್ತರದಿಗ್ಭಾಗದ ವಿದ್ರುಮವರ್ಣ್ದ ಪಾಂಡುಕಮುಂ ಪಶ್ಚಿಮದಕ್ಷಿಣದಿಗ್ಭಾಗದ ರತ್ನಕಂಬಳವರ್ಣದ ಪಾಂಡುಕಮುಂ ಪೂರ್ವೋತ್ತರದಿಗ್ಭಾಗದ ಜಾಂಬೂನದವರ್ಣದತಿರಕ್ತ ಕಂಬಳಮುಮೆಂಬ ನಾಲ್ಕು ಶಿಲಾತಲಂಗಳೊಳ್: **ಅಜಿತಪು,** ೪. ೩೩ ವ); ಪಾಂಡುಕ ಎಂಬುದು ನವನಿಧಿಗಳಲ್ಲಿ ಒಂದು (ಹದಿನೆಂಟು ಪ್ರಕಾರದ ಧಾನ್ಯಗಳನ್ನು ಒದಗಿಸುವ ನಿಧಿ] (ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ: **ಆದಿಪು,** ೧೫. ೩ ವ) ನೋಡಿ, **'ನವನಿಧಿ'**

**ಪಾಂಡುಕಶಿಲೆ** – ಸುಮೇರು ಪರ್ವತದ ಮೇಲಿರುವ ಒಂದು ಶಿಲೆ ಇದರಲ್ಲಿ ತೀರ್ಥಂಕರರ ಜನ್ಮಾಭಿಷೇಕಕಲ್ಯಾಣಕ್ಕಾಗಿ ಮೀಸಲಾದ ನಾಲ್ಕು ಪೀಠಗಳಿವೆ; ಅದರಲ್ಲಿನ ಮೊದಲನೆಯ ಪೀಠ (ಮಂದರಮನೈದಿ ಪಾಂಡುಕ ಶಿಲಾತಳಮಂ ತ್ರಿಃಪ್ರದಕ್ಷಿಣಂಗೈದು: **ನೇಮಿನಾಪು,** ೩. ೧೮ ವ);

**ಪಾಣಿಪಾತ್ರ** – ಬೊಗಸೆಗೈ, ಜೈನಮುನಿಗಳು ಆಹಾರ ತೆಗೆದುಕೊಳ್ಳುವಾಗ ಹಿಡಿಯುವ ಬೊಗಸೆ (ಸಿದ್ಧಭಕ್ತಿಪುರಸ್ಸರಂ ಪಾಣಿಪಾತ್ರದೊಳ್ ಕನಕಪಾತ್ರದೊಳ್ ತೀವಿದಿಕ್ಷುರಸಮಂ ಪಯೋರಸಮುಮಂ ಪಾನಂಗಳಿಂದೆಱೆಯೆ: **ಅಜಿತಪು,** ೭. ೨ ವ)

**ಪಾತ್ರ** – ಮೂರು ದಾನಲಕ್ಷಣಗಳಲ್ಲಿ ಒಂದು (ಪ್ರಕೃಷ್ಟ ಸಮ್ಯಗ್ದರ್ಶನ ಜ್ಞಾನಚಾರಿತ್ರಸಹಿತತ್ವಮುಂ, ಸ್ವಪರಹಿತ ಸ್ವಪರವಿಸ್ತಾರಕಗುಣಾತಿಶಯತ್ವಮುಮುಳ್ಳೊಡೆ ಪಾತ್ರಮಕ್ಕುಂ: **ಚಾವುಂಡಜಯ,** ಪು, ೧೭೭)

**ಪಾತ್ರದತ್ತಿ** – ದತ್ತಿ ಎಂಬುದು ಆರ್ಯಷಟ್ಕರ್ಮಗಳಲ್ಲಿ ಒಂದು, ದಾನ ನೀಡುವುದು, ಇದರಲ್ಲಿ ನಾಲ್ಕು ಬಗೆ: ಪಾತ್ರದತ್ತಿ, ಸಮದತ್ತಿ, ಸಕಳದತ್ತಿ ಮತ್ತು ಅನ್ವಯದತ್ತಿ (ದತ್ತಿಯೆಂಬುದು ದಯಾಪಾತ್ರ ಸಮಸಕಳಭೇದದಿಂ ಚತುರ್ವಿಧಮಕ್ಕುಂ; ಅಲ್ಲಿ ದತ್ತಿಯೆಂಬುದುಮನುಕಂಪವೆರಸನುಗ್ರಾಹ್ಯಮಪ್ಪ ಪ್ರಾಣಿಗಳ್ಗೆ ತ್ರಿಶುದ್ಧಿಯಿನಭಯ ದಾನಮಂ ಕುಡುವುದು; ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ಪ್ರತಿಗ್ರಹಾರ್ಚನಾದಿಪೂರ್ವಕಂ ನಿರವದ್ಯಾಹಾರ ಸಂಯಮೋಪಕರಣಂಗಳಂ ಕುಡುವುದು: **ಚಾವುಂಡಜಯ,** ಪು, ೧೭೯); ತಪೋಧನರಿಗೆ ನೀಡುವ ಆಹಾರಾದಿಗಳು (ಪಾತ್ರದತ್ತಿಯೆಂಬುದು ಮಹಾತಪೋಧರ್ನರ್ಗೆ ನಿರವದ್ಯಾಹಾರ ಮುಮಂ ಸಂಯಮೋಪಕರಣಮುಮಂ ಕುಡುವುದು: **ಅಜಿತಪು,** ೧೨.೧ ವ)

**ಪಾತ್ರದಾನ** – ಪಾತ್ರದತ್ತಿ, ಯೋಗ್ಯರಿಗೆ ಕೊಟ್ಟ ದಾನ (ಭಕ್ತಿಪುರಸ್ಸರ ಪೂಜಾದಿವಿಚಿತ್ರವಿರಚನಾದಿ ಸಂಪದಾಸ್ಪದಮಾಗೆಯುಂ ಪಾತ್ರದಾನವಿಧಾನಮೇ ವಿನೋದಮಾಗೆಯುಂ: **ಆದಿಪು,** ೪. ೫೨ ವ)

**ಪಾತ್ರದಾನಿ** – ಪಾತ್ರದಾನ ಮಾಡುವವನು (ಕುಶೀಲ ಕುತ್ಸಿತಾಚಾರ ಕುವೇಷ ಕುದೃಷ್ಟಿಗಳುಂ ಗೃಹೀತವ್ರತಪರಿಚ್ಯುತರುಂ ಮಾಯಾಚಾರಪರಿಣತರಪ್ಪ ಪಾತ್ರದಾನಿಗಳುಂ: **ಆದಿಪು,** ೫. ೪೧ ವ)

**ಪಾನಿಗಟ್ಟು** – ಚರಿಗೆಗೆ ಬಂದ ಸನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊ (ಕಿತ್ತಯ್ಯಂ ಗಳನೊಡಗೊಂಡು ಬಂದು ಪಕ್ಕದಿರ್ದು ಪಾನಿಗಟ್ಟಿ ಮಾರ್ಗಮಂ ತೋಱಿ ಮಗುಟೆ ಬಿಜಯಂಗೆಯ್ಯಿಂ ಎನೆ: **ವಡ್ಡಾರಾ,** ಪು ೮೧, ಸಾ ೧)

**ಪಾಪಪದಾರ್ಥ** – ನವಪದಾರ್ಥಗಳಲ್ಲಿ ಒಂದು (ಪುಣ್ಯಪದಾರ್ಥಂ ಪಾಪಪದಾರ್ಥ ಮೆಂಬ ನವಪದಾರ್ಥಮುಮಂ ... ಕೈಕೊಂಡು: ಸುಕುಮಾಚ, ೩. ೩೯ ವ), ನೋಡಿ **'ನವಪದಾರ್ಥ'**

**ಪಾಪಾಸ್ರವ** – ಜೀವದಲ್ಲಿ ಹರಿದು ಬರುವ ಪಾಪಕರ್ಮಗಳು (ಆಸ್ರವಮೆಂಬೆರಡುತೆಱಂ ಪುಣ್ಯಾಸ್ರವದೊಂದದಱ ವೈಪರೀತ್ಯಭವಂ ಪಾಪಾಸ್ರವಮಂತದಱೊಳ್ ಪುಣ್ಯಾಸ್ರವವಸ್ತುರೂಪಮಕ್ಕುಂ ತ್ರಿವಿಧಂ: **ಶಾಂತಿಪು,** ೧೨. ೪)

**ಪಾರಣವಾಸರ** – ಪಾರಣೆಯ ದಿನ (ಪಾರಣವಾಸರಾಳಿಗಳಿಂತು ಇರ್ತೆಱನಪ್ಪ ಪುಣ್ಯದಿನಮಂ ಅಮ್ಮಿಶ್ರಮಂ ಮಾಡೆ: **ಸುಕುಮಾಚ,** ೯. ೧೨)

**ಪಾರಣಾವಿಧಿ** – ಪಾರಣೆಯ ಕ್ರಮ (ಇತ್ತ ರಾಜ್ಯಾಶ್ರಮಗುರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿ ಯೊಳ್ ಅಮೃತಾಹಾರಮನಾರೋಗಿಸಿ: **ಶಾಂತಿಪು,** ೯. ೯೯ ವ)

**ಪಾರಣೆ** – ವ್ರತಸಂಬಂಧಿ ಉಪವಾಸದ ಮರುದಿನ ಮಾಡುವ ಊಟ (ನಮಗೆ ಪಾರಣೆಯಂ ಮಾಱ್ಪಾಗಳ್ ಅಯಥಾಕರ್ಮದ ದೋಷಂ ಸಾರ್ತರ್ಕುಂ ಅದಱಿಂ ನಾಮಿಲ್ಲಿ ಚರಿಗೆವುಗದೆ ... ಪೋಪಂ: **ವಡ್ಡಾರಾ,** ಪು ೧೦೩, ಸಾ ೨೧)

**ಪಾರಮಾರ್ಥಿಕ** – ಪರಮಾರ್ಥಕ್ಕೆ ಸಂಬಂಧಿಸಿದ (ಮುಕುಳಿತ ಕರೋಪೇತಂ ದೂತಂ ಪ್ರಜಾಪತಿ ಪಾರಮಾರ್ಥಿಕವಚನ ಸದ್ಭಾವಂ: **ಶಾಂತಿಪು,** ೫. ३೭)

**ಪಾರಿಣಾಮಿಕಭಾವ** – ಆತ್ಮನ ಐದು ಭಾವಗಳಲ್ಲಿ ಒಂದು: ಜೀವತ್ವ ಭವ್ಯತ್ವ ಅಭವ್ಯತ್ವ ಮೊದಲಾದ ಕರ್ಮಗಳು ಉದಯ ಉಪಶಮ ಮೊದಲಾದವುಗಳಿಂದ ಉತ್ಪನ್ನವಾಗದೆ ಇರುವುದು (ಭಾವೋಪಲಕ್ಷಕಂ ಜೀವಮೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವಮಯ್ದು ತೆಱನಕ್ಕುಂ: **ಸುಕುಮಾಚ,** ೮. ೪ ವ)

**ಪಾರಿಷದ** – ಇಂದ್ರನ ಸಭೆಯ ಸದಸ್ಯರಾದ ದೇವತಾವರ್ಗ (ಅನೇಕ ಪ್ರಕಾರ ಪಾರಿಷದ ಪರಿಸೆಯುಂ ಆತ್ಮೀಯಪರಮೈಶ್ವರ್ಯರ್ ಪ್ರಕಾಶಕವಾಗೆ: **ವರ್ಧಮಾಪು,** ೧೦. ೬೧ ವ)

**ಪಾಷಂಡಿಮೂಢತ್ವ** – ಮಿಥ್ಯಾಗುರುಗಳನ್ನೂ ಅವರ ಉಪದೇಶಗಳನ್ನೂ ನಂಬುವ ಮೂಢಪ್ರವೃತ್ತಿ (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿ ಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ಪುಂವೇದ** – ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯುಗಳಲ್ಲಿ ಒಂದು, ಗಂಡಿನಲ್ಲಿ ಹೆಣ್ಣಿನ ಬಗ್ಗೆ ಮೋಹವುಂಟಾಗುವಂತೆ ಮಾಡುವುದು (ಕ್ರಮಕ್ರಮದೊಳೆ ನಪುಂಸಕ ವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯ ಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ಪುಣ್ಯ** – ನವಪದಾರ್ಥಗಳಲ್ಲಿ ಒಂದು (ಜೀವಾಜೀವ ಪುಣ್ಯಾಪಾಪಾಸ್ರವ ಸಂವರನಿರ್ಜರ ಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ: **ವಡ್ಡಾರಾ,** ಪು. ೬, ಸಾ. ೧೮)

**ಪುಣ್ಯಯಜ್ಞ** – ದೀಕ್ಷೆ ಪಡೆದವನು ಮಾಡುವ ಚತುರ್ದಶಪೂರ್ವಗಳ ಓದುವಿಕೆ ಮತ್ತು ಕೇಳುವಿಕೆ; ಆರನೆಯ ದೀಕ್ಷಾನ್ವಯಕ್ರಿಯೆ (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯ ಉಪಯೋಗತ್ವಮೆಂಬ ಎಂಟುಂಬೆರಸು ... ನಾಲ್ವತ್ತೆಂಟು ದೀಕ್ಷಾನ್ವಯ ಕ್ರಿಯೆಗಳುಮಂ: **ಆದಿಪು** ೧೫.. ೧೬ ವ)

**ಪುಣ್ಯಾಸ್ರವ** – ಪುಣ್ಯವು ಜೀವನಲ್ಲಿ ಕೂಡಿಕೊಳ್ಳುವಿಕೆ, ಪುಣ್ಯಸಂಪಾದನೆ (ಆಸ್ರವಮೆಂಬೆರಡು ತೆಱಂ ಪುಣ್ಯಾಸ್ರವದೊಂದದಱ ವೈಪರೀತ್ಯಭವಂ ಪಾಪಾಸ್ರವಮಂತದಱೊಳ್ ಪುಣ್ಯಾಸ್ರವವಸ್ತುರೂಪಮಕ್ಕುಂ ತ್ರಿವಿಧಂ: **ಶಾಂತಿಪು,** ೧೨. ೪)

**ಪುದ್ಗಲ** – ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ಗಂಧ, ಬಣ್ಣಗಳನ್ನು ಹೊಂದಿದ ಅಜೀವಸತ್ವ (ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹ ಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲಕಾಲಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಪುದ್ಗಲದ್ರವ್ಯ** – ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಷಡ್ದ್ರವ್ಯಗಳಲ್ಲಿ ಒಂದು ಜೀವ ಪುದ್ಗಲ ಧರ್ಮ ಅಧರ್ಮ ಕಾಲ ಮತ್ತು ಆಕಾಶವೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು, (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಂ: **ಸುಕುಮಾಚ,** ೩. ೫೯ ವ), ನೋಡಿ, 'ಷಡ್ದ್ರವ್ಯ'

**ಪುದ್ಗಲಾಸ್ತಿಕಾಯ** – ಜೀವ ಪುದ್ಗಲ ಧರ್ಮ ಅಧರ್ಮ ಮತ್ತು ಆಕಾಶ ಎಂಬ ಪಂಚಾಸ್ತಿಕಾಯಗಳಲ್ಲಿ ಒಂದು (ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಆಕಾಶಾಸ್ತಿಕಾಯವೆಂಬ ಪಂಚಾಸ್ತಿಕಾಯ ನಿಕಾಯಮುಂ: **ಸುಕುಮಾಚ,** ೩. ೫೯ ವ)

**ಪುದ್ಗಳ** – ಪುದ್ಗಲ (ಅತತ್ವದೊಳ್ ನಿಲಿಸದ ಭಾವಂ ಅಟಿಸದ ಪುದ್ಗಳಂ ಇಲ್ಲೆನೆ ಕರ್ಮಬಂಧದಿಂ ಬಲವರುತಿರ್ಪ ಊಟಣದ ಗುಂಡಿಗೆಯಂತಿರೆ: **ಸುಕುಮಾಚ,** ೫. ೩೨)

**ಪುನರ್ಜಾತಕ್ಷಯಶ್ರೀ** – ಪುನರ್‌ಜನ್ಮವನ್ನು ಇಲ್ಲವಾಗಿಸುವ, ಮೋಕ್ಷ (ನೆಟ್ಟನೆ ಪುನರ್ಜಾತಕ್ಷಯಶ್ರೀಗೆ ತಾಯ್ಗುರು ರತ್ನತ್ರಿತಯಾವಭಾವಿ ಬಹುಬಂಧಚ್ಛೇದಿ: **ಸುಕುಮಾಚ,** ೧. ೬)

**ಪುಬ್ಬ** – ದೀರ್ಘ ಕಾಲಾವಧಿ, ಎಪ್ಪತ್ತುಲಕ್ಷ ಮೂವತ್ತು ಸಾವಿರ ಕೋಟಿ ವರ್ಷಗಳು (ಪುಬ್ಬಕೋಟಿ ಪರಿಸಂಖ್ಯೆವರಂ ಪರಮಾಯುಂ: **ಆದಿಪು,** ೧. ೫೨)

**ಪುರಾಣಕಥನ** – ಪುರಾಣ ರಚನೆ, ಇದರಲ್ಲಿ ಎಂಟು ಅಂಗಗಳಳು (ಪುರಾಣಕಥನದೊಳ್ ಲೋಕಾಖ್ಯಾನಮುಂ ದೇಶಾಖ್ಯಾನಮುಂ ನಗರಾಖ್ಯಾನಮುಂ ರಾಜಾಖ್ಯಾನಮುಂ ತೀರ್ಥಾಖ್ಯಾನಮುಂ ತಪೋಧನಾಖ್ಯಾನಮುಂ ಗತಾಖ್ಯಾನಮುಂ ಫಲಾಖ್ಯಾನಮುಮಮೆಂದಷ್ಟವಿಧ ವರ್ಣನಮಕ್ಕುಂ: **ಚಾವುಂಡಜಯ,** ಪು. ೧೨)

**ಪುರಾಣ ಕಥಾಂಗ** – ಪುರಾಣ ಕಥೆಗಳ ನಿರೂಪಣೆಯ ಎಂಟು ಅಂಗಗಳು (ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ ಪುರಂ ರಾಜವೃತ್ತಕಂ ಅರ್ಹದ್ವಿಭವಂ ಚತುರ್ಗತಿ ತಪೋಮಾರ್ಗಂ ಫಳಂ ತತ್ಪುರಾಣ ಕಥಾಂಗಂಗಳ್ ಇವು ಎಂಟು ಎನಿಕ್ಕುಂ: **ಮಲ್ಲಿನಾಪು,** ೧. ೫೪)

**ಪುರುಚರಿತ** – ತೀರ್ಥಂಕರಚರಿತೆ (ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಶೀತಲಂ ಸುವ್ರತಂ ತಾಂ ಅದಜೆಂ ಪ್ರತ್ಯಕ್ಷ ತೀರ್ಥೇಶ್ವರಂ: **ಲೀಲಾವತಿ,** ೧. ೯೪)

**ಪುರುದೇವ** – ಆದಿ ತೀರ್ಥಂಕರ (ಪುರುದೇವಾದಿಗಳೊಲಿಸಿದ ಪರಮಶ್ರೀವಧುವಂ ಒಲಿಸಿಯುಂ ಪರವನಿತಾ ನಿರಪೇಕ್ಷಕಂ: **ಯಶೋಧಚ,** ೧. ೧)

**ಪುರುಷವೇದ** – ಇಪ್ಪತ್ತೆಂಟು ಪ್ರಕಾರದ ಮೋಹನೀಯಕರ್ಮಗಳಲ್ಲಿ ಒಂದು, ಗಂಡಿಗೆ ಹೆಣ್ಣಿನ ಮೋಹವುಂಟುಮಾಡುವ ಕರ್ಮ (ಪುರುಷವೇದಮಂ ಸಂಜ್ವಳನ ಚತುಃಕ್ರೋಧಮಾನ ಮಾಯಾಲೋಭಂಗಳಂ ಒರ್ಮೆಯೆ ನಿರ್ಮೂಳಿಸಿ ತಳೆದನಜೇಯಂ ಜಯಾಂಗನಾಲಿಂಗನಮಂ: **ಮಲ್ಲಿನಾಪು,** ೧೪. ೬೨)

**ಪುರೋಹಿತರತ್ನ** – ಚಕ್ರವರ್ತಿಗೆ ದೊರಕುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮ ಪುರೋಹಿತ (ಧರ್ಮಕಾರ್ಯದಿಕುಶಲನುಮಪ್ಪ ಬುದ್ಧಿಸಾಗರಮೆಂಬ ಪುರೋಹಿತರತ್ನಮುಂ ... ಎಂದಿಂತು ಜೀವಾಜೀವರತ್ನಂಗಳಂ ಪೂಜಿಸಿ: **ಆದಿಪು,** ೧೭. ೨೩)

**ಪೂಜಾರಾಧ್ಯ** – ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯ ಉಪಯೋಗತ್ವಮೆಂಬ ಎಂಟುಂಬೆರಸು ... ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆ ಗಳುಮಂ: **ಆದಿಪು** ೧೫.. ೧೬ ವ)

**ಪೂಜೋಪಲಂಭನ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಗುರುವಿನ ಮೂಲಕ ಧರ್ಮವನ್ನು ತಿಳಿಯುವುದು (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ... ಇಂದ್ರಾಭಿಷೇಕ ಗುರು ಪೂಜೋಪಲಂಭನ ... ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ಪೂರ್ವ** – ಶ್ರುತಾಂಗವನ್ನು ವಿವರಿಸುವ ಉತ್ಪಾದ, ಅಗ್ರಾಯಣೀಯ, ವೀರ್ಯಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯು, ಕ್ರಿಯಾವಿಶಾಲ ಮತ್ತು ಲೋಕಬಿಂದುಸಾರ ಎಂಬ ಹದಿನಾಲ್ಕು ಭಾಗಗಳಲ್ಲಿ ಒಂದು, ಇಂತಹವು (ಪದಿನಾಲ್ಕು ಪೂರ್ವಂಗಳುಮಂ ಅಯ್ದು ಚೂಳಿಕೆಯುಮಂ ಆಱವಧಿಯುಮಂ ಪೆಸರ್ಗೊಂಡು: **ಆದಿಪು,** ೩. ४೦ ವ)

**ಪೂರ್ವಕೋಟಿ** – ಒಂದು ಕೋಟಿ 'ಪೂರ್ವ'ಗಳಷ್ಟು ಕಾಲಾವಧಿ (ಪೂರ್ವಕೋಟ್ಯಾಯತಾಯುರ್ಮಿತಿವೃತ್ತಂ ಷಡ್ವಿಧೇತಿಪ್ರತತಿನಿಯತಂ ಐನೂಱು ಬಿಲ್ ಮರ್ತ್ಯಮೂರ್ತ್ಯುನ್ನತಿಯೆಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ; **ಚಂದ್ರಪ್ರಪು,** ೧. ೭೬)

**ಪೂರ್ವಧರ** – 'ಚತುರ್ದಶ ಪೂರ್ವ'ಗಳನ್ನು ಚೆನ್ನಾಗಿ ಬಲ್ಲವನು (ಚತುಶ್ಶತ ಪ್ರಮಿತನಿಖಿಳ ಪೂರ್ವಧರನುಂ ಪನ್ನಿರ್ಛಾಸಿರ ಪ್ರಮಾಣದಕ್ಷಶಿಕ್ಷಕರುಂ: **ಕರ್ಣನೇಮಿ,** ೧೪. ೧೪೩ ವ)

**ಪೂರ್ವಭವಸ್ಮರಣ** – ಹಿಂದಿನ ಜನ್ಮದ ನೆನಪು (ಸೌಧೋಪರಿತಮತಳದೊಳ್ ನಿಂದ ದೇವಾಗಮನಮಂ ನೋಡಲೊಡಂ ಪೂರ್ವಭವಸ್ಮರಣಮಾಗಿ ದೇವಲೋಕದ ಲಲಿತಾಂಗದೇವನಂ ನೆನೆದು: **ಆದಿಪು,** ೩. ೨೨ ವ)

**ಪೂರ್ವವಿದೇಹ** – ಸುಮೇರುಪರ್ವತದ ಪೂರ್ವದಿಕ್ಕಿನಲ್ಲಿ ಇದ್ದ ಕಚ್ಛ ಮೊದಲಾದ ಹದಿನಾರು ಕ್ಷೇತ್ರಗಳ ಪ್ರದೇಶ, ಜಂಬೂದ್ವೀಪದ ಸಪ್ತಕ್ಷೇತ್ರಗಳಲ್ಲಿ ಒಂದು (ಷೋಡಶವಿಷಯಂಗಳಿನೊಪ್ಪಿ ಮಾಬ್ಬುದುರ್ವಿಗೆ ಮುದಮಂ ಸುಖೈಕನಿಧಿ ಪೂರ್ವವಿದೇಹಮಖಿಸರ್ವಸಂಪದಂ: **ಪುಷ್ಪದಂಪು,** ೨. ೬)

**ಪೂರ್ವಾಂಗ** – ಒಂದು ಕಾಲ ಪ್ರಮಾಣ, ಎಂಬತ್ತನಾಲ್ಕು ಲಕ್ಷ ವರ್ಷಗಳ ಅವಧಿ (ರಾಜ್ಯದೊಳ್ ನಿಂದೊಂದು ಲಕ್ಕೆಯುಮಯ್ವತ್ತುಸಾಸಿರ ಪೂರ್ವಮಂ ಪದಿನಾಱು ಪೂರ್ವಾಂಗಮಂ ರಾಜ್ಯಕಾಲಂ ಸಲೆ: **ಚಾವುಂಡಜಯ,** ಪು. ೧೦೪)

**ಪೃಚ್ಛನೆ** – ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು; ಶಬ್ದ–ಅರ್ಥಗಳ ಬಗ್ಗೆ ಪ್ರಶ್ನಿಸಿ ನಿರ್ಣಯ ಮಾಡಿಕೊಳ್ಳುವುದು (ಮುನಿಪತಿ ವಾಚನೆಯಿಂ ಪೃಚ್ಛನೆಯಿಂ ಅನುಪ್ರೇಕ್ಷೆಯಿಂ ತದಾವಮ್ನಾಯದಿಂ ಒಯ್ಯನೆ ಧರ್ಮಕಥನದಿಂದಂ ವಿನುತಸ್ವಾಧ್ಯಾಯಮೆಂಬ ತಪಮಮಂ ತಳೆದಂ: **ಸುಕುಮಾಚ,** ೪. ೧೮)

**ಪೃಥಕ್ತ್ವವಿತರ್ಕವೀಚಾರ** – ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವ ಶುಕ್ಲಧ್ಯಾನ; (ಪ್ರಥಮಶುಕ್ಲಧ್ಯಾನ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತಂ ಉಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಂಗಂಗೆಯ್ದು: **ಆದಿಪು,** ೬.೩೪ ವ)

**ಪೃಥ್ವ್ಯಪ್ತೇಜೋವಾಯು** – [ಪೃಥ್ವಿ+ಅಪ್+ತೇಜೋ+ವಾಯು] ಮಣ್ಣು, ನೀರು, ತೇಜಸ್ಸು ಮತ್ತು ಗಾಳಿ ಎಂಬ ಚತುರ್ಭೂತಗಳು (ಪೃಥ್ವ್ಯಪ್ತೇಜೋವಾಯುಗಳತ್ತಣಿಂ ಬಂದು ಗರ್ಭಾದಿ ಮರಣಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ: **ಆದಿಪು,** ೨. ೯ ವ)

**ಪೃಥ್ವಿ** – ಮೊದಲ ಅಧೋಲೋಕವಾದ ರತ್ನಪ್ರಭೆಯ ಒಂದು ಭಾಗ, ಅದರಲ್ಲಿ ಮೂರು ಭಾಗ: ವಜ್ರಖರ ಪಂಕ ಮತ್ತು ಜಲಗಳು ತುಂಬಿರುತ್ತವೆ (ಅತಿಸಹಸ್ರೋತ್ತರಲಕ್ಷ ಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕ್ಕುಮಾ ಪೃಥ್ವಿ ವಜ್ರಖರ ಪಂಕ ಜಲಬಹುಳಭಾಗದಿಂ ತ್ರಿವಿಧಮಕ್ಕುಂ; **ಸುಕುಮಾಚ,** ೧೧. ೪೧ ವ)

**ಪೊನ್ನ ಬೆಟ್ಟು** – ಚಿನ್ನದ ಬೆಟ್ಟ, ಮೇರುಪರ್ವತ (ಬಳಸಿದ ತಾರಗೆಗಳ ಮಾರ್ಪೊಳೆವೊಂದಿದ ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ: **ಕಬ್ಬಿಗಕಾ,** ೧೨೭)

**ಪ್ರಕೀರ್ಣಕ** – ಒಂದು ನರಕದ ಹೆಸರು (ಆ ಬಿಲಂಗಳುಂ ಇಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಗಳೆಂದು ಮೂಱುತೆಱನಕ್ಕುಂ: **ಆದಿಪು,** ೫. ೮೩ ವ); (ಮಹಾತಮಃಪ್ರಭೆ

ಎಂಬ ಏಳನೆಯ ನರಕದ ಒಂದು ಭಾಗ (ಪದಿನಾಱುಸಾಸಿರ ಯೋಜನಬಾಹುಲ್ಯದಿಂ ... ಆ ನರಕಬಿಲಂಗಳೊಳಗೆಲ್ಲಮೆಣ್ಬತ್ತುನಾಲ್ಕು ಲಕ್ಷ ಪರಿಪ್ರಮಾಣಮಾಗಿಯುಮಿಂದ್ರಕ ಶ್ರೇಣಿಬದ್ಧ ಪ್ರಕೀರ್ಣಕಂಗಳೆಂದು ಮೂಱು ತೆಱನಕ್ಕುಂ: **ಸುಕುಮಾಚ,** ೧೧. ೪೧ ವ); ಮೂರು ಬಗೆಯ ವಿಮಾನಗಳಲ್ಲಿ ಒಂದು (ವರವಿಮಾನಂಗಳ್ ಇಂದ್ರಕ ಶ್ರೇಣೀಬದ್ಧ ಪ್ರಕೀರ್ಣಕಗಳೆಂದು ಮೂದೆಱನಕ್ಕುಂ; **ಚಂದ್ರಪ್ರಪು,** ३. ३೨ ವ); ಜ್ಯೋತಿರ್ಲೋಕದ ಜ್ಯೋತಿಗಳಲ್ಲಿ ಒಂದು ಚಂದ್ರಾದಿತ್ಯ ನಕ್ಷತ್ರ ತಾರಕಾ ಪ್ರಕೀರ್ಣಕ ವಿಕಲ್ಪಜ್ಯೋತಿರ್ಗಣಾಲಂಕೃತ ಮಾಗಿರ್ದ: **ಅಜಿತಪು,** ೧೧. ೨೨ ವ)

**ಪ್ರಕೃತಿ** – ಜೀವನಿಗೆ ಫಲಗಳನ್ನು ನೀಡುವ ಕರ್ಮ (ಎಚ್ಚಿತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ); ಹದಿನಾರು ಕರ್ಮಪ್ರಕೃತಿಗಳು: ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿ ಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ (ಎಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ); ರಾಜನು ಅನುಸರಿಸಬೇಕಾದ ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು, ಇದರಲ್ಲಿ ಏಳು ಬಗೆ (ಪ್ರಕೃತಿಯೆಂಬುದು ಸ್ವಾಮ್ಯಮಾತ್ಯ ಜನಪದಂ ಕೋಶ ದಂಡ ದುರ್ಗ ಮಿತ್ರವಿಕಲ್ಪಮಕ್ಕುಂ: **ಚಾವುಂಡಜಯ,** ಪು, ೨೫೭)

**ಪ್ರಕೃತಿಬಂಧ** – ಅಷ್ಟವಿಧಕರ್ಮಗಳು ತಮಗೆ ಅನುಗುಣವಾದ ಕರ್ಮಸಂಬಂಧವನ್ನು ಹೊಂದುವುದು (ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟು ವಿಕಲ್ಪಮಾದುತ್ತರಪ್ರಕೃತಿಗಳಮಂ ಒಳಕೊಂಡು ಅನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ: **ಸುಕುಮಾಚ,** ೮. ೨೭ ವ)

**ಪ್ರಚಲಾ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿಒಂದು, ಸ್ವಲ್ಪ ಕಣ್ಣು ತೆರೆದು ಮಲಗಿರುವುದು (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ३. ३೯ ವ)

**ಪ್ರಚಲಾಪ್ರಚಲಾ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯ ಗಳಲ್ಲಿ ಒಂದು, ನಿದ್ರೆಯ ಒಂದು ಪ್ರಭೇದ – ಪದೇ ಪದೇ ತೂಕಡಿಸುವುದು, ಜೊಲ್ಲು ಸುರಿಸುವುದು ಮುಂತಾದ ಲಕ್ಷಣಗಳುಳ್ಳ ನಿದ್ರೆ (ಚಕ್ಷುದರ್ಶ

ನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ಪ್ರಜಾಸಂಬಂಧಾಂತರ** – ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡ್ಯತ್ವ, ಮಾನಾರ್ಹತ್ವ, ಪ್ರಜಾಸಂಬಂಧಾಂತರ ಎಂಬ ಜೈನಬ್ರಾಹ್ಮಣನ ಹತ್ತು ಅಧಿಕಾರಗಳು (ಅತಿಬಾಲವಿದ್ಯಾ ... ಪ್ರಜಾಸಂಬಂಧಾಂತರಮೆಂಬ ಪತ್ತುಂ ಅಧಿಕಾರಗಳು ಮನಜಿಪಿ: **ಆದಿಪು,** ೧೫. ೧೬ ವ)

**ಪ್ರಜ್ಞಪ್ತಿ** – ಒಂದು ಬಗೆಯ ವಿದ್ಯೆ (ತಜ್ಜಿನೇಂದ್ರ ಗೃಹದೊಳರ್ಧ ರಾತ್ರದೊಳ್ ಸ್ವಾಧ್ಯಾಯಂಗೊಂಡು ತ್ರಿಲೋಕ ಪ್ರಜ್ಞಪ್ತಿಯಂ ಪರಿವಡಿಗೆಯ್ವಾಗಳ್: **ಸುಕುಮಾಚ,** ೧೧. ೩೮ ವ)

**ಪ್ರಜ್ಞಪ್ತಿವಿದ್ಯೆ** – ಪ್ರಜ್ಞಪ್ತಿ (ಅವರ್ಗೆ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವು: **ಆದಿಪು,** ೯. ೧೨೧ ವ)

**ಪ್ರಣಾಳಿಕೆ** – ಕರ್ಮಗಳು ಹರಿದು ಬರುವ ಕಾಲುವೆ (ಶುಭಾಶುಭಪರಿಣಾಮ ಪ್ರಣಾಳಿಕೆಯಿಂ ಬರ್ಪ ಕರ್ಮಮಂ ಬರಲೀಯದೆ ಗುಪ್ತ್ಯಾದಿಗಳಿಂ ತಗುಳ್ವುದು ಸಂವರೆಯೆಂಬುದು: **ಆದಿಪು,** ೧೦. ೬೩ ವ)

**ಪ್ರತರಕ್ರಿಯಾ** – ಪರಿನಿರ್ವಾಣ ಸಮಯದಲ್ಲಿ ಆತ್ಮನು ವಿಸ್ತಾರಗೊಳ್ಳುವ ಸ್ಥಿತಿ (ಲೋಕಾಕಾಶವ್ಯಾಪಕ ಕವಾಟಕ್ರಿಯೆಯಂ ನೆಱಪಿ ತದನಂತರಸಮಯದೊಳ್ ವಾತವಳಯಮುಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ ನಿರ್ವರ್ತಿತ ಪ್ರತರಕ್ರಿಯಾ ವಿಶೇಷಂ: **ಆದಿಪು,** ೧೬. ೪೯ ವ)

**ಪ್ರತಿಕ್ರಮಣ** – ಸಾಧುಗಳ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು, ಗುರುವಿನಲ್ಲಿ ಪಶ್ಚಾತ್ತಾಪಪೂರ್ವಕ ನಿವೇದನ (ಪರಮದೀಕ್ಷಾಮಾರ್ಗದೊಳ್ ದೀಕ್ಷೆಯಂ ದಯೆಗೆಯ್ದು ಪ್ರತಿಕ್ರಮಣಮಂ ಪೇೞ್ವುದುಂ: **ಸುಕುಮಾಚ,** ೩. ೩೫ ವ)

**ಪ್ರತಿಗ್ರಹ** – ದಾನ ಸ್ವೀಕರಿಸುವುದು (ಅಂತು ಭವಿಷ್ಯದ್ವಿಜವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ ... ನಿಜಿಸಿ: **ಆದಿಪು,** ೯. ೭೩ ವ); ಗೌರವಪೂರ್ವಕವಾಗಿ ಬರಮಾಡಿಕೊಳ್ಳುವುದು (ಪರಮತಪಶ್ಚರಣನಿರತ ಯತಿಸಮಿತಿಗೆಲ್ಲಂ ಪ್ರತಿಗ್ರಹಾದಿ ಪುರಸ್ಸರಂ ನಿರವದ್ಯಾಹಾರಾದಿ ವಿತರಣರೂಪ ಪಾತ್ರದತ್ತಿಯುಂ: **ಆದಿಪು,** ೧೫. ೧೩ ವ)

**ಪ್ರತಿಮಾಯೋಗ** – ಆಹಾರತ್ಯಾಗ ಮಾಡಿ ಒಂದು ವರ್ಷದವರೆಗೆ ಪ್ರತಿಮೆಯಂತೆ ನಿಂತು ಮಾಡುವ ಧ್ಯಾನ (ಅಂತು ಜೈನದೀಕ್ಷೆಯಂ ಕೈಕೊಂಡು ... ಏಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ: **ಆದಿಪು,** ೧೪. ೧೩೯ ವ)

**ಪ್ರತಿಮೆ** – ಶ್ರಾವಕರು ಸಾಧಿಸಬೇಕಾದ ಆಧ್ಯಾತ್ಮಿಕೋನ್ನತಿಯ ಕ್ರಮವಾದ ಮೆಟ್ಟಿಲು (ಕ್ರಿಯಾದೇವತಾಯೆಂಬುದು ಛತ್ರತ್ರಯಮುಂ ಅಗ್ನಿತ್ರಯಮುಂ ಪ್ರತಿಮೆಯುಂ ಎಂದಿಂತು ಚತುರ್ವಿಧಮಕ್ಕುಂ. ಇವು ಶಾಂತಿಹೇತುಗಳ್ ಉಪಾದೇಯಂಗಳ್: **ಚಾವುಂಡಜಯ**; ಪು. ೧೮೮)

**ಪ್ರತಿಲೇಖನ** – ನಿತ್ಯವೂ ಭೂಮಿ, ಉಪಕರಣ ಮುಂತಾದುವನ್ನು ಶುದ್ಧಿಗೊಳಿಸುವುದು (ಪ್ರತಿಲೇಖನದೊಳ್ ಆಲೋಕಿತಮನುಚಿತಮೆಂದು ಪಲವು ಕಣ್ಬಡೆದವೊಲಾ ಯತಿಪತಿಯ ದಯಾಧ್ವಜಮೇನತಿಶಯಮಾದತ್ತೊ ಮೇದುರಂ ಮಾಯೂರಂ: **ಮಲ್ಲಿನಾಪು**, ೧೦. ೯೩)

**ಪ್ರತಿಲೇಖನೆ** – ಪ್ರತಿಲೇಖನ (ನೋಡದೆ ಪ್ರತಿಲೇಪನೆಯಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ ಕೊಂಡಾಡದುದುಂ ನೆನೆಯದುದುಂ ಕೇಡೆನಿಕುಂ ಪ್ರೋಷಧೋಪವಾಸವ್ರತದೊಳ್: **ಸುಕುಮಾಚ**, ೬. ೨೩)

**ಪ್ರತಿವಾಸುದೇವ** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಒಂಬತ್ತು ಮಂದಿಯ ಒಂದು ವರ್ಗ, ಇವರಿಗೆ ಪ್ರತಿನಾರಾಯಣರು ಪ್ರತಿಕೇಶವರು ಎಂಬ ಹೆಸರುಗಳೂ ಇವೆ (ತನ್ನಿವಾಸಿಗಳ ದೇಹಾಯುಃಪ್ರಮಾಣಂಗಳುಮಂ ಸುಖದುಃಖಾದಿಗಳುಮಂ ತೀರ್ಥಕರ ಚಕ್ರಧರ ಬಲದೇವ ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಂ ನಿರ್ಣಯಂ ಮಾಡಿದಾಗಳ್: **ಆದಿಪು**, ೧೦. ೬೩ ವ)

**ಪ್ರತಿವಿದ್ಯೆ** – ಮಾಯಾಸೃಷ್ಟಿಯನ್ನು ಹೋಗಲಾಡಿಸುವ ವಿದ್ಯೆ (ಪ್ರತಿವಿದ್ಯನಾಕೆ ಕುಲಕ್ಷತಿಯಂ ಪತಿಗಪ್ಪ ಹಾನಿಯಂ ಬಗೆಯದೆ ದುರ್ಮತಿ ಕೊಟ್ಟಳ್: **ಪಂಪರಾ**, ೧೧. ೧೯೩)

**ಪ್ರತಿಶತ್ರು** – ಪ್ರತಿವಾಸುದೇವ (ಅಶ್ವಗ್ರೀವ ತಾರಕ ಮೇರಕ ನಿಶುಂಭ ಮಧು ಮಧುಕ್ರೀಡೆ ಬಲಿ ಪ್ರಹಾರ ರಾವಣ ಜರಾಸಂಧರೆಂಬುದು ನವಪ್ರಶತ್ರುಗಳಾದರ್: **ಚಾವುಂಡಜಯ**, ಪು ३೪೮)

**ಪ್ರತಿಷ್ಠಾಪನಾಶುದ್ಧಿ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾ ಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು**, ೭. ೮ ವ)

**ಪ್ರತೀಂದ್ರ** – ದೇವವರ್ಗ, ಭವನಿವಾಸಿ, ವ್ಯಂತರದೇವ, ಜ್ಯೋತಿದೇವ, ಕಲ್ಪವಾಸಿ ಇಂದ್ರರುಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಕೆಳಗಿನವನು (ಮತ್ತಂ ಆ ಪ್ರತೀಂದ್ರಂ ಬಂದು ಉಪೇಂದ್ರಂಗೆ ಇಂತಪ್ಪ ದಿನದೊಳ್ ಪುತ್ರನಕ್ಕುಮೆಂದು ಬೆಸಸೆ: **ಕರ್ಣನೇಮಿ**, ೮. ೩೩ ವ ಮತ್ತು ೩೪)

**ಪ್ರತ್ಯಾಖ್ಯಾನ** – ಇಪ್ಪತ್ತೆಂಟು ಬಗೆಯ ಮೋಹನೀಯಗಳಲ್ಲಿ ಒಂದು, ಮುಂದೆ ಪಾಪ ಮಾಡದಿರುವ ಪ್ರತಿಜ್ಞೆ (ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನ ಪೂರ್ವಕಂ ಸನ್ಯಸನದಿಂ ಮುಡಿಪಿ: **ಶಾಂತಿಪು**, ೪. ೯೭ ವ); ನೋಡಿ, **'ಮೋಹನೀಯ'**

**ಪ್ರತ್ಯಾಸನ್ನಭವ್ಯ** – ಬೇಗ ಮೋಕ್ಷ ಪಡೆಯುವ ಜೀವ (ಆ ಜೀವಂ ಅಭವ್ಯನಲ್ಲ ಪ್ರತ್ಯಾಸನ್ನಭವ್ಯಂ: **ಸುಕುಮಾಚ,** ೫. ೨೨ ವ)

**ಪ್ರತ್ಯಾಸನ್ನಮೃತ್ಯು** – ಸಮೀಪಿಸಿರುವ ಸಾವು (ಬಹ್ವಾರಂಭಸಂರಂಭ ರೌದ್ರಧ್ಯಾನಪರಿಣತಂ ಉಪಾರ್ಜಿತನರಕಾಯುಷ್ಯಂ ಪ್ರತ್ಯಾಸನ್ನಮೃತ್ಯುವಾಗಿ: **ಆದಿಪು,** ೨. ೧೧ ವ)

**ಪ್ರಥಮಕಲ್ಪಾಮರೇಂದ್ರ** – ಮೊದಲ ಸ್ವರ್ಗದ ಇಂದ್ರ, ಸೌಧರ್ಮೇಂದ್ರ (ಪ್ರಥಮಕಲ್ಪಾಮರೇಂದ್ರಂ ... ದಿವಿಜೇಂದ್ರಲೋಕೋತ್ತಮ ಭೂಷಣಂಗಳಂ ತುಡಿಸೆ: **ಶಾಂತಿಪು,** ೧೦. ೫೭ ವ)

**ಪ್ರಥಮ ಕಲ್ಪೇಶ್ವರ** – ಮೊದಲನೆಯ ಕಲ್ಪದ ಇಂದ್ರ, ಸೌಧರ್ಮೇಂದ್ರ (ಕಳಶೋದ್ಧಾರ ಮಂತ್ರಪೂರ್ವಕಂ ಪ್ರಣತಿಪ್ರಸ್ತಾವಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಂ ಈಶಾನೇಂದ್ರನುಂ ಎತ್ತಿಕೊಂಡು: **ಆದಿಪು,** ೭. ೮೦ ವ)

**ಪ್ರಥಮಕಲ್ಯಾಣ** – ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳಲ್ಲಿ ಮೊದಲನೆಯದು, ಗರ್ಭಾವತರಣ (ದೇವೇಂದ್ರಂ ... ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ: **ಆದಿಪು,** ೭. ೩೨ ವ)

**ಪ್ರಥಮದ್ವೀಪ** – ಎಂಟು ಮುಖ್ಯ ದ್ವೀಪಗಳಲ್ಲಿ ಮೊದಲನೆಯದು, ಜಂಬೂದ್ವೀಪ (ಅಂತತಿಕ್ರಾಂತ ಜ್ಯೋತಿಃಕಲಾಪಮುಂ ಪ್ರಾಪ್ತಪ್ರಥಮದ್ವೀಪಮುಂ ಆಗಿ: **ಚಂದ್ರಪ್ರಪು,** ೧೨. ೧೪೩ ವ)

**ಪ್ರಥಮಪೀಠ** – ಜಿನನು ಸಮವಸರಣದಲ್ಲಿ ಮಂಡಿಸುವ ಮೂರು ಪೀಠಗಳಲ್ಲಿನ ಮೊದಲನೆಯದು (ಮೇಘರಥಾಧೀಶ್ವರನುಂ ವಂದನಾಭಕ್ತಿಗೆ ಪೋಗಿ ಭವಭಯಹರಣ ಪ್ರದಾಯಮಾನವಿನೇಯಜನೈಕಶರಣಮಂ ಸಮವಸರಣಮಂ ಪೊಕ್ಕು ಪ್ರಥಮದ್ವಿತೀಯ ತೃತೀಯಪೀಠಂಗಳುಮನುಕ್ರಮದಿನರ್ಚಿಸಿ; **ಶಾಂತಿಪು,** ೯. ೬೯ ವ)

**ಪ್ರಥಮಾನುಯೋಗ** – ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯದಲ್ಲಿ ಮೊದಲನೆಯದು (ಎರಡು ಪರಿಕರ್ಮಮುಂ ಎಂಬತ್ತೆಂಟು ಸೂತ್ರಂಗಳುಮಂ ಪ್ರಥಮಾನುಯೋಗಮುಮಂ ... ಯಥೋವಿಧಿಯಿಂ ನೋಂತು: **ಆದಿಪು,** ೩. ೪೦ ವ); ತ್ರಿಷಷ್ಟಿಶಲಾಕಾಪುರುಷರ ಚರಿತ್ರೆಯನ್ನೊಳಗೊಂಡದ್ದು (ಪ್ರಥಮಾನುಯೋಗಮೆಂಬುದು ತೀರ್ಥಕರ ಚಕ್ರವರ್ತಿ ರಾಮಕೇಶವಾದಿಗಳ ಭವಸಂತತಿಯು ಮನವರನುಭವಿಸಿದ ಭೋಗಂಗಳುಮಂ ಪರಿಗ್ರಹರಿಪತ್ಯಾಗಾದಿಗಳುಮಂ ಪೇಳ್ವುದು **ಚಾವುಂಡಜಯ,** ಪು. ೩೨೫) ನೋಡಿ **'ಅನುಯೋಗ'**

**ಪ್ರದೇಶಬಂಧ** – ಬಂಧನವನ್ನು ಹೊಂದಿರುವ ಕರ್ಮಗಳ ಸಂಖ್ಯೆಯ ನಿರ್ಣಯ (ಜೀವ ಕರ್ಮ ಪ್ರದೇಶಯೋಗಂ ಪ್ರದೇಶಬಂಧಮೆನಿಕ್ಕುಂ: **ಚಂದ್ರಪ್ರಪು.** ೧೬. ೨೫)

**ಪ್ರಭಾಕರವಿಮಾನ** – ಸ್ವರ್ಗಲೋಕದ ಒಂದು ಸ್ಥಳದ ಹೆಸರು (ನಕುಳಾರ್ಯನುಂ ಪ್ರಭಾಕರವಿಮಾನದೊಳ್ ಮನೋರಥಾವಾಪ್ತದಿವ್ಯಭೋಗಂ ಮನೋರಥನೆಂಬಂ ಕಲ್ಪಜನಾದಂ: **ಆದಿಪು,** ೫. ೭೦ ವ)

**ಪ್ರಭಾವನೆ** – ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು, ಜೈನಧರ್ಮದ ಹಿರಿಮೆಯನ್ನು ತಿಳಿಸುವುದು (ಅನೇಕ ಉಪಪತ್ತಿಗಳಿಂ ಸ್ವಪಕ್ಷಸ್ಥಾಪನಂ ಗೆಯ್ದು ಸನ್ಮಾರ್ಗಪ್ರಕಾಶನದಿಂ ಮಾರ್ಗಪ್ರಭಾವನೆಯಂ ಮಾಡಿ: **ಆದಿಪು,** ೨. ೨೨ ವ)

**ಪ್ರಭುಶಕ್ತಿ** – ನಯಶಾಸ್ತ್ರದ ಒಂದು ವಿಭಾಗ, ಇದರಲ್ಲಿ ಉತ್ಸಾಹ, ಮಂತ್ರಿ ಮತ್ತು ಪ್ರಭು ಎಂದು ಮೂರು ಬಗೆ, ಕೋಶ ಮತ್ತು ದಂಡಗಳ ಮೇಲಿನ ಪ್ರಭುತ್ವ (ಶಕ್ತಿಯೆಂಬುದುತ್ಸಾಹ ಮಂತ್ರಿ ಪ್ರಭುವಿಕಲ್ಪದಿಂ ತ್ರಿವಿಧಮಕ್ಕುಂ; ಅಲ್ಲಿ ವಿಕ್ರಮಬಳಮುತ್ಸಾಹಶಕ್ತಿ, ವಿವಿಧ ವಸ್ತುವಿಚಾರಣಾಸಾಮರ್ಥ್ಯಂ ಮಂತ್ರಶಕ್ತಿ, ಕೋಶದಂಡ ಸ್ವೀಕರಣಂ ಪ್ರಭುಶಕ್ತಿಯಕ್ಕುಂ: **ಚಾವುಂಡಜಯ,** ಪು. ೨೫೬)

**ಪ್ರಮತ್ತ** – ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು (ಅಂತರ್ಮುಹೂರ್ತಕಾಲಂ ಪ್ರಮತ್ತ ಅಪ್ರಮತ್ತ ಪರಾವರ್ತನಸಹಸ್ರಂಗೆಯ್ದು: **ಆದಿಪು,** ೧೦. ೧೪), ಇನ್ನೊಂದು **'ಅಪ್ರಮತ್ತ'**

**ಪ್ರಮಾಣ** – ರುಜುವಾತು (ಪ್ರಮಾಣ ನಯ ನಿಕ್ಷೇಪ ಅನುಯೋಗ ಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವಂ: **ಆದಿಪು,** ೧೦. ೬೩ ವ)

**ಪ್ರಮಾದ** – ಹದಿನೈದು ಬಗೆಯ ದೋಷಗಳು: ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ಅವನೀಪಾಲಕಥೆ ಎಂಬ ನಾಲ್ಕು ವಿಕಥೆಗಳು; ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು; ಸ್ಪರ್ಶನೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಕರ್ಣೇಂದ್ರಿಯ ಎಂಬ ಐದು ಇಂದ್ರಿಯಗಳು, ನಿದ್ರೆ ಮತ್ತು ಸ್ನೇಹ (ಮತ್ತಂ ಚತುರಶೀತಿಸಹಸ್ರ ಗುಣಮಣಿಭೂಷಣ ವಿಭೂಷಿತನುಂ ಅಷ್ಟಾದಶಸಹಸ್ರ ಶೀಲರತ್ನಾಕರನುಂ ಆಗಿ ಪಂಚದಶಪ್ರಮಾದಂಗಳಂ ಬಂಚಿಸಿ: **ಆದಿಪು,** ೬. ೨೯ ವ)

**ಪ್ರರೂಢ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು, ಅನಾದ್ಯನಿಧನ ಧರ್ಮ (ಪ್ರರೂಢಮೆಂಬುದು ದೀರ್ಘಕಾಲ ಪ್ರವೃತ್ತಮುಮನಾದ್ಯನಿಧನಮುಮಪ್ಪ ಧರ್ಮಂ: **ಚಾವುಂಡಜಯ,** ಪು.. ೮)

**ಪ್ರವಚನ** – ಜಿನವಾಣಿಯ ವ್ಯಾಖ್ಯಾನ (ಪ್ರಕಟಿತಜಿನಪ್ರವಚನಪ್ರಕಾರದೊಳ್: **ಸುಕುಮಾಚ,** ೬. ೬)

**ಪ್ರವಚನಭಕ್ತಿ** – ಷೋಡಶಭಾವನೆಗಳಲ್ಲಿ ಒಂದು, ಆಚಾರ್ಯ ಬಹುಶ್ರುತರ ಪ್ರವಚನದಲ್ಲಿ ಆಸಕ್ತಿ (ಅರ್ಹದಾಚಾರ್ಯ ಬಹುಶ್ರುತ ಪ್ರವಚನಭಕ್ತಿ: **ಚಾವುಂಡಜಯ,** ಪು. ೨೦೭)

**ಪ್ರವಚನವತ್ಸಳತ್ವ** – ಷೋಡಶಭಾವನೆಗಳಲ್ಲಿ ಒಂದು, ಚಾತುರ್ವರ್ಣ್ಯಕ್ಕೆಲ್ಲ ಸ್ನೇಹ ತೋರಿಸುವುದು (ಪ್ರಚನವತ್ಸಳತ್ವಮೆಂಬುದು ಎಳಗಂದಿಯಂತಾಗಳ್ ಪುಟ್ಟಿದ ತನ್ನ ಕಱುವಿಂಗತಿಸ್ನೇಹಿತೆಯಕ್ಕುಮಂತೆ ಚಾತುರ್ವರ್ಣ್ಯಕ್ಕಂ ಕೃತಕಮಿಲ್ಲದತಿ ಸ್ನೇಹಂಗೆಯ್ವುದು: **ಚಾವುಂಡಜಯ,** ಪು ೨೦೮)

**ಪ್ರವೃದ್ಧಕಲ್ಯಾಣ** – ಐದು ವರ್ಷಗಳ ಕಾಲ ಆಚರಿಸುವ ಒಂದು ನೋಂಪಿ, ಶುಕ್ಲಪಕ್ಷದ ಪಾಡ್ಯ ಮತ್ತು ಕೃಷ್ಣಪಕ್ಷದ ಅಷ್ಟಮಿಯಂದು ಉಪವಾಸಮಾಡುವ ವ್ರತ (ಅಟವಿಶ್ರೀಯುಂ ಜೊನ್ನದ ಪಾಡಿವದೊಳಂ ಕಾಲದಷ್ಟಮಿಯೊಳಂ ಐದುವರ್ಷಂಬರಂ ನೋಂಪ ಪ್ರವೃದ್ಧಕಲ್ಯಾಣಮನೆತ್ತಿಕೊಂಡಳ್: **ಚಾವುಂಡಜಯ,** ಪು. ೬೫)

**ಪ್ರಶಾಂತಿ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ವೈರಾಗ್ಯ ವೃತ್ತಿ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ... ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ ... ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ) ನೋಡಿ, **'ಗರ್ಭಾನ್ವಯಕ್ರಿಯೆ'**

**ಪ್ರಸವಾಂಗ** – ಮಾಲ್ಯಾಂಗ ಎಂಬ ಒಂದು ಕಲ್ಪಕುಜ, ಹೂಮಾಲೆಗಳನ್ನು ಒದಗಿಸುವ ಕಲ್ಪಕುಜ (ವಸನಾಂಗ ಆತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗ ಅನ್ನಾಂಗ ಸುರಾಂಗ ಭಾಜನಾಂಗ ಅವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ: **ಚಂದ್ರಪ್ರಪು,** ೩. ೩೪) ನೋಡಿ, **'ಅಂಗಕಲ್ಪಕುಜ'**

**ಪ್ರಹರಾವರಣೆ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

**ಪ್ರಾಗ್ಭಾರಭೂತಳ** – ಸಿದ್ಧಕ್ಷೇತ್ರ (ಭರತಂ ದರ್ಶನದೊಳ್ ಮಂದರವಾ ಪ್ರಾಗ್ಭಾರಭೂತಳಂಬರೆಗಂ ನೀಳ್ದಿರೆ ಕಂಡು ವಿಸ್ಮಿತಾಂತಃಕರಣಂ: **ಆದಿಪು,** ೧೬. ೪೧)

**ಪ್ರಾಗ್ವಿದೇಹ** – ಪೂರ್ವ ವಿದೇಹ (ದೇವನಲ್ಲಿಂ ತಳರ್ದು ಜಂಬೂದ್ವೀಪದ ಪ್ರಾಗ್ವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಳಾವತೀವಿಷಯದ ಪ್ರತಿಬದ್ಧ ಪುಂಡರೀಕಿಣಿಯೊಳ್: **ಆದಿಪು,** ೬. ೨೦ ವ)

**ಪ್ರಾಣತ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಪ್ರಾತಿಹಾರ್ಯ** – ಕೇವಲಜ್ಞಾನ ಪಡೆದ ತೀರ್ಥಂಕರನಿಗೆ ಒದಗುವ ಅಶೋಕವೃಕ್ಷ, ದಿವ್ಯಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ, ಛತ್ರಗಳೆಂಬ ಎಂಟು ಸವಲತ್ತುಗಳು (ಪುರುಪರಮೇಶ್ರನಂದನ ದೊರೆಕೊಳಿಸುಗೆ ನಿನಗೆ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್ ಪ್ರಾತಿಹಾರ್ಯಮುಂ ಮಂಗಳಮಂ: **ಆದಿಪು,** ೧೨. ೫೩)

**ಪ್ರಾಪ್ತಿ** – ಅಷ್ಟಸಿದ್ಧಿಗಳಲ್ಲಿ ಒಂದು, ಏನನ್ನು ಬೇಕಾದರೂ ಹೊಂದುವ ಶಕ್ತಿ (ಮಹರ್ಧಿಕದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯಂ ಈಶತ್ವಂ ವಶಿತ್ವಂ ಕಾಮರೂಪಿತ್ವಂ ಎಂಬೀ ಅಷ್ಟಗುಣೈಶ್ವರ್ಯಂಗಳೊಳ್: **ವಡ್ಡಾರಾ,** ಪು. ೯೮, ಸಾ. ೫), ನೋಡಿ **'ಅಷ್ಟಸಿದ್ಧಿ'**

**ಪ್ರಾಭಾಕರ** – ಒಂದು ಬಗೆಯ ತತ್ವಜ್ಞಾನಿ (ಚಾರ್ವಾಕ ಬೌದ್ಧ ಸಾಂಖ್ಯರ ಖರ್ವ ಪ್ರಾಭಾಕರರ್ ಸುನ್ಯೆಯಾಯಿಕರುಂ ಸರ್ವಜಿಜ್ಜೈನವಾದಿಗಳುರ್ವೀಶನ ಸಭೆಯೊಳಿರ್ದರತಿ ಮುದದಿಂದಂ: **ಧರ್ಮಬಾಹು,** ೬. ೧೨)

**ಪ್ರಾಯಶ್ಚಿತ್ತ** – ಅಭ್ಯಂತರತಪಗಳಲ್ಲಿ ಒಂದು; ತಿಳಿಯದೆ ನಡೆದಿರಬಹುದಾದ ತಪ್ಪಿನ ಪರಿಹಾರಕ್ಕೆ ನಡೆಸುವ ಚಿತ್ತಶೋಧನೆ (ಅಭ್ಯಂತರತಪಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಪೃತ ಸ್ವಾಧ್ಯಾಯ ಧ್ಯಾನ ವ್ಯುತ್ಸರ್ಗಗಳಂ ಕೈಕೊಂಡು: **ಆದಿಪು,** ೬. ೩೩ ವ), ನೋಡಿ **'ಅಭ್ಯಂತರತಪಸ್ಸು'**

**ಪ್ರಾಯೋಗ್ಯ** – ಕರ್ಮವು ಕಡಿಮೆಯಾಗುವುದು (ಮೋಕ್ಷಪ್ರಾಸಾದಾರೋಹಣ ನಿಶ್ರೇಣೀಭೂತ ಕ್ಷಪಕಶ್ರೇಣಿ ಪ್ರಾಯೋಗ್ಯ ಅಧಃಪ್ರವೃತ್ತಿಕರಣಪರಿಣತಂ ಅಪೂರ್ವಕರಣ ಕ್ಷಪಕಂ ಪ್ರಥಮಶುಕ್ಲಧ್ಯಾನಪರಿಣತನಾಗಿರ್ದ: **ಆದಿಪು,** ೧೦. ೧೪ ವ)

**ಪ್ರಾಯೋಗ್ಯತಾಲಬ್ಧಿ** – ಒಂದು ಲಬ್ಧಿ, ಕ್ರಮವಾಗಿ ಕರ್ಮಕ್ಷಯವಾಗುವುದು (ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿ ಎಂಬ ಲಬ್ಧಿಪಂಚಕಮುಮಂ ... ಕೈಕೊಂಡು: **ಸುಕುಮಾಚ,** ೩. ೩೯ ವ), ನೋಡಿ **'ಲಬ್ಧಿಪಂಚಕ'**

**ಪ್ರಾಯೋಪಗಮನ** – ನಿರಾಹಾರಿಯಾಗಿ ಮರಣವನ್ನು ಹೊಂದುವ ವ್ರತ (ಆಯಿರ್ದ ಮಾಟ್ಕೆಯೊಳ್ ಪರಮಾಯುಷ್ಯಾಂತಂಬರಂ ನಿರಾಕುಳಮಾಗಿರ್ಪಾಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊರೆಯಿಸಿದಂ: **ಆದಿಪು,** ೨. ೫೩)

**ಪ್ರಾಯೋಪಯೋಗ ಸಂನ್ಯಸನ** – ತನ್ನ ರೋಗಕ್ಕೆ ಉಪಚಾರ ಮಾಡಿಕೊಳ್ಳದೆ ಇತರರೂ ಉಪಚಾರ ಮಾಡದಂತೆ ಪ್ರಾಣ ಬಿಡುವ ತಪಸ್ಸು (ಇರ್ಪತ್ತೆರಡು ದಿವಸಮುಂ ಪ್ರಾಯೋಪಯೋಗ ಸಂನ್ಯಸನದಿಂ ... ಅಚ್ಯುತಕಲ್ಪದ ಸಾಂತಕರ ವಿಮಾನದೊಳ್ ಅಚ್ಯುತೇಂದ್ರನಾಗಿ: **ನೇಮಿನಾಪು,** ೪. ೧೬)

**ಪ್ರಾಯೋಪವೇಶ** – ಪ್ರಾಯೋಪಗಮನ (ಮುನಿರಾಜಂ ... ಅಳ್ಕದೆ ಅಚಾಮ್ಲವರ್ಧನಮಂ ತಪ್ಪದೆ ನೋಂತು ತಪ್ಪತನುವಂ ಪ್ರಾಯೋಪವೇಶಕ್ಕೆ ತಂದು: **ಶಾಂತಿಪು,** ೯. ೮೪)

**ಪ್ರಾಸಾದ** – ಬಸದಿ; ಸ್ವರ್ಗದಲ್ಲಿನ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪ ಎಂಬ ಐದು ಹಾಗೂ ಭೂಮಿಯ ಮೇಲಿನ ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸರ್ವತೋಭದ್ರ, ವಲಚ್ಛಂಬಿಕ ಎಂಬ ಐದು ಪ್ರಾಸಾದಗಳು (ಪ್ರಾಸಾದಾಂತರ ದಿಂದಮಯ್ದು ಜಿನಚೈತ್ಯಾಗಾರಮೊಂದಿಂತೆ ವಿನ್ಯಾಸಂ ನಾಡೆ ಬೆಡಂಗುವೆತ್ತಿರೆ ... ತದ್ಭೂಮಿ ಕಣ್ಗೊಪ್ಪುಗುಂ: **ಚಂದ್ರಪ್ರಪು,** ೧೫. ೨೨)

**ಪ್ರಿಯೋದ್ಭವ** – ಒಂದು ಗರ್ಭಾನ್ವಯಕ್ರಿಯೆ, ಜಾತಕರ್ಮ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ... ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ), ನೋಡಿ **'ಗರ್ಭಾನ್ವಯಕ್ರಿಯೆ'**

**ಪ್ರಿಯೋದ್ಭವಕ್ರಿಯೆ** – ಜಿನಶಿಶು ಹುಟ್ಟಿದ ಬಳಿಕ ಜಾತಕರ್ಮದಲ್ಲಿ ಮಾಡುವ ವಿಧಿ (ಜಾತವರ್ಮದೊಳ್ ಜಿನಜಾತಕವುನೋದಿ ಕ್ರಿಯಾವುಂತ್ರಂಗಳಿಂ ಯಥಾವಿಧಿಯಾಗಿ ಮೂಲೋಪಾಸಕಸೂತ್ರದೊಳ್ ಪೇಟ್ದಿಂತೆ ನೆಗಟ್ಟುದು ಪ್ರಿಯೋದ್ಭವಕ್ರಿಯೆ: **ಚಾವುಂಡಜಯ,** ಪು. ೧೮೧)

**ಪ್ರೀತಿ** – ಒಂದು ಗರ್ಭಾನ್ವಯಕ್ರಿಯೆ, ಗರ್ಭವತಿಯಾದ ಮೂರನೇ ತಿಂಗಳಲ್ಲಿ ಮಾಡುವ ಜಿನಪೂಜೆ (ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನನಿಷದ್ಯಾನ್ನಪ್ರಾಶನವ್ಯುಷ್ಟಿ ... ಪರಿನಿಷ್ಕ್ರಮಣಯೋಗ ಸಮ್ಮಹಾರ್ಹಂತ್ಯ ವಿಹಾರಯೋಗ ತ್ಯಾಗಾಗ್ರನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಪ್ರೀತಿಂಕರವಿಮಾನ** – ಒಂದು ಸ್ವರ್ಗದ ಹೆಸರು (ಇತ್ತ ಸಿಂಹಚಂದ್ರಚಾರಣರುಂ ಆರಾಧನಾವಿಧಿಯಿಂದೂರ್ಧ್ವಗ್ರೈವೇಯಕದೊಳ್ ಪ್ರೀತಿಂಕರವಿವಾನ ದೊಳಹಮಿಂದ್ರನಾದೊಂ: **ಚಾವುಂಡಜಯ,** ಪು. ೧೩೩)

**ಪ್ರೀತಿಕ್ರಿಯೆ** – ಗೃಹಮೇಧಿಗಳನ್ನು ಪ್ರಯೋಗಿಸುವುದು (ಗರ್ಭಾದಾನದಿಂ ಬಟಿಯಂ ಮೂಱನೆಯ ತಿಂಗಳ್ ... ಬಾಗಿಲೊಳ್ ತೋರಣಂ ಕಟ್ಟಿಸಿ, ಪೂರ್ಣಕುಂಭಂ ಗಳನಿಟ್ಟು ನಿಚ್ಚಂ ನಿಚ್ಚಂ ಭೇರಿ ಘಂಟಾಸ್ವನಂಗಂಗಳೆಸೆಯೆ ತಂತಮ್ಮ ವಿಭವಕ್ಕನುಸಾರಿಯಾಗಿ ಗೃಹಮೇಧಿಗಳಂ ಪ್ರಯೋಗಿಸುವುದು ಪ್ರೀತಿಕ್ರಿಯೆ: **ಚಾವುಂಡಜಯ,** ಪು. ೧೮೧)

**ಪ್ರೇಷಣ** – ಒಂದು ದೇಶವ್ರತಾತಿಚಾರ, ದೂತರನ್ನು ಕಳಿಸಿ ಕೆಲಸ ಮಾಡಿಸುವುದು (ಕಪಟದೊಳೇಂ ಪ್ರೇಷಣ ಶಬ್ದ ಪುದ್ಗಲಕ್ಷೇಪವುದಿತಾನಯನಂ ತಾವಪಚಾರಂಗಳ್ ರೂಪಾನುಪಾತಮುಂ ಪ್ರಮಿತ ದೇಶನಿಯಮವ್ರತದೊಳ್: **ಸುಕುಮಾಚ,** ೬. ೧೯) ನೋಡಿ, **'ದೇಶವ್ರತಾತಿಚಾರ'**

**ಪ್ರೋಷಧ** – ಉಪವಾಸದ ಹಿಂದಿನ ದಿನ ಮತ್ತು ಮರುದಿನ ಒಂದು ಹೊತ್ತು ಮಾತ್ರ ಊಟಮಾಡುವ ಒಂದು ಬಗೆಯ ಉಪವಾಸವ್ರತ (ಪ್ರೋಷಧಪ್ರಕ್ರಮದಿಂ ಪರ್ವಂಗಳಂ ನೋಂಪುವುದುಮಭಿಮತಭೋಗೋಪಭೋಗಂಗಳಂ ತತ್ಪ್ರಮಿತಂ ಮಾಡಿಟ್ಟು ಕೈಕೊಂಡೆಸಗುವುದು: **ಸುಕುಮಾಚ,** ೬. ೧೧)

**ಪ್ರೋಷಧೋಪವಾಸವ್ರತ** – ಪ್ರೋಷಧ (ನೋಡದೆ ಪ್ರತಿಲೇಪನೆಯಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ ಕೊಂಡಾಡದುದಂ ನೆನೆಯದುದುಂ ಕೇಡಿನಿತುಮುಂ ಪ್ರೋಷಧೋಪವಾಸವ್ರತದೊಳ್: **ಸುಕುಮಾಚ,** ೬. ೨೩)

**ಪ್ರೋಷಧೋಪವಾಸಿ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ನಾಲ್ಕನೆಯ ವರ್ಗಕ್ಕೆ ಸೇರಿದವನು, ಪ್ರೋಷಧವ್ರತವನ್ನು ಕೈಗೊಂಡವನು (ಅನಶನವಿಧಿಯಿಂ ತಿಂಗಳಿನ ನಾಲ್ಕು ಪರ್ವದೊಳಮಾಪ್ತಪೂಜಾವಿಧಿಯಂ ಮನಮೊಸೆದಿರ್ಪಂ ನಾಲ್ಕನೆಯ ನೆಲೆಯವಂ ಪ್ರೋಷಧೋಪವಾಸಿಯೆನಿಕ್ಕುಂ: **ಸುಕುಮಾಚ,** ೬. ೨೯); ತಿಂಗಳ್ ನಾಲ್ಕುಂ ಪರ್ವದಿನಂಗಳೊಳಂ ಪೆಱಗೆ ಪೇಟ್ದ ಗುಣಮನಿತಱೊಳಿಂ ಪಿಂಗದು ಪವಾಸಯುತತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವೆನೆಗಂ ಉಪವಾಸ ದೊಳ್ನೆರಗಟ್ಟಿಂ ಪ್ರೋಷಧೋಪವಾಸಮೆಂಬ ನಾಲ್ಕನೆಯ ಶ್ರಾವಕನಕ್ಕುಂ: **ಧರ್ಮಾಮೃತ,** ೫. ೬೨ ಹಾಗೂ ಮುಂದಿನ ವಚನ)

**ಪ್ಲವಂಗವಿದ್ಯೆ** – ಕೋತಿಯ ವೇಷ ತಾಳುವ ಒಂದು ವಿದ್ಯೆ (ಇತ್ತಲಣುವಂ ಪ್ಲವಂಗವಿದ್ಯೆಯಿಂ ಕಪಿಮೂರ್ತಿಯಂ ಕೈಕೊಂಡು: **ಚಾವುಂಪು,** ಪು. ೩೮೪. ಸಾ. ೨೦)

## ಫ

**ಫಲ** – ನಿರ್ವಾಣವನ್ನುಂಟುಮಾಡುವ ತತ್ವಜ್ಞಾನ (ಫಲಮೆಂಬುದು ಜಾತಿ ಜರಾ ರೋಗ ಮರಣ ವಿಚ್ಛೇದದಿಂದಂ ಶಿವಮ್ ಅಜರಮ್ ಅಕ್ಷಯಮ್ ಅವ್ಯಾಬಾಧಮಪ್ಪ ಪರಮ ನಿರ್ವಾಣಮಂ ಪುಟ್ಟಿಸುವ ಧರ್ಮಂ: **ಚಾವುಂಡಜಯ,** ಪು. ೮)

**ಫಾಲ್ಗುನನಂದೀಶ್ವರ** – ಫಾಲ್ಗುಣದಲ್ಲಿ ಆಚರಿಸುವ ಒಂದು ವ್ರತ (ಫಾಲ್ಗುನನಂದೀಶ್ವರ ಮಾದುದಾಗಳ್ ಉಭಯಬಲಮುಂ ಉಭಯಘೋಷಣೆಯುಂ ಘೋಷಿಸಿ ಕಾಳೆಗಮಂ ಉಟಿದಿರ್ಪುದುಂ: **ಪಂಪರಾ,** ೧೪. ೮೩ ವ)

# ಬ

**ಬಂಧ** – ನವಪದಾರ್ಥಗಳಲ್ಲಿ ಒಂದು, ಹಾಲು ನೀರು ಬೆರೆತ ರೀತಿಯ ಕರ್ಮದ ಜೀವನ (ಕರ್ಮದ ಜೀವನ ಕ್ಷೀರನೀರನ್ಯಾಯಸಂಬಂಧಂ ಬಂಧಮೆಂಬುದು: **ಆದಿಪು,** ೧೦. ೬೩ ವ); ಇದರಲ್ಲಿ ನಾಲ್ಕು ವಿಧ (ಅಂತು ಜೀವನೊಳ್ ಕ್ಷೀರನೀರನ್ಯಾಯುವಾಗಿ ಕರ್ಮಯೋಗ್ಯಂಗಳಪ್ಪ ಪುದ್ಗಲಂಗಳೊಳ್ ಪರಸ್ಪಪ್ರದೇಶೋಪಸೃಷ್ಟಿಯಿಂ ಸಮಸಂದು ಪರಿಣಮಿಸುವ ಬಂಧಂ ಪ್ರಕೃತಿಸ್ಥಿತ್ಯನುಭಾಗಪ್ರದೇಶಪ್ರವಿಭಾಗದಿಂ ಚತುರ್ವಿಧಮಕ್ಕುಂ: **ಸುಕುಮಾಚ,** ೮. ೨೭ ವ); ಐಹಿಕ ವ್ಯಾಮೋಹ (ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಂ: **ವಡ್ಡಾರಾ,** ಪು. ೬, ಸಾ. ೧೬)

**ಬಂಧಮೋಚನ** – ಬಂಧನದಿಂದ ಬಿಡುಗಡೆ ಹೊಂದುವ ಒಂದು ಬಗೆಯ ವಿದ್ಯೆ (ಅಮಿತತೇಜಂ ಶ್ರೀವಿಜಯಂಗೆ ಯುದ್ಧವೀರ್ಯಮುಂ ಪ್ರಹರಣಾವಾರಣಮುಂ ಬಂಧಮೋಚನಮುಮೆಂಬ ಮೂಱು ವಿದ್ಯೆಗಳುಮಂ ತಾಂ ಕೊಟ್ಟು: **ಚಾವುಂಡಜಯ,** ಪು. ೧೫೮)

**ಬಂಧಮೋಚಿನಿ** – ಬಂಧಮೋಚನ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚಿನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

**ಬಂಧವಿಮೋಚಿನಿ** – ಬಂಧಮೋಚಿನಿ (ಸೌಜನ್ಯ ಕಂದಾಂಕುರಂ ಶ್ರೀವಿಜಯಂಗೆ ಹೇತಿ ವಿದಾರಣಿಯುಂ ಬಂಧವಿಮೋಚಿನಿಯುಮೆಂಬಿದೆರಡು ವಿದ್ಯೆಗಳಂ ಕೊಟ್ಟು; **ಶಾಂತಿಪು,** ೬. ೩೭ ವ)

**ಬದರೀಫಳ** – ಬೋರೇ ಹಣ್ಣು (ದಿನತ್ರಯದೊಳ್ ಬದರೀಫಳಮಾತ್ರ ಆಹಾರಿಗಳುಂ ಆರೋಗ್ಯಶರೀರಂಗಳುಂ ಸೌಂದರಾಕಾರಂಗಳುಂ ತ್ರಿಪಲ್ಯೋಪಮಜೀವಿಗಳುಂ ಆಗಿ: **ಆದಿಪು,** ೫. ೪೧ ವ)

**ಬದ್ಧಪರ್ಯಂಕಾಸನ** – ಯೋಗದಲ್ಲಿನ ಒಂದು ಆಸನ (ಚಂದ್ರಕಾಂತಶಿಲಾತಲದೊಳು ಪೂರ್ವಾಭಿಮುಖನುಂ ಬದ್ಧಪರ್ಯಂಕಾಸನನುಮಾಗಿರ್ದು: **ಅಜಿತಪು,** ೬. ೧೨೩ ವ)

**ಬಲಋದ್ಧಿ** – ಎಂಟು ಬಗೆಯ ಋದ್ಧಿಗಳಲ್ಲಿ ಒಂದು, ತಪಶ್ಶಕ್ತಿಯಿಂದ ಅಪರಿಮಿತವಾದ ಮನೋವಾಕ್ಕಾಯ ಬಲಗಳನ್ನು ಹೊಂದುವುದು (ಬುದ್ಧಿತಪೋವಿಕ್ರಿಯೌಷಧಿರಸ ಬಲಾಕ್ಷೀಣಾಭಿಧಾನಗಳೊಳಂ ನೆಱೆದು: **ಆದಿಪು,** ೩. ೩೩ ವ)

**ಬಲದೇವ** – ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ವರ್ಗಕ್ಕೆ ಸೇರಿದ ವಿಜಯ ಅಚಲ ಸುಧರ್ಮ ಸುಪ್ರಭ ಸುದರ್ಶನ ನಂದಿ ನಂದಿಮಿತ್ರ ರಾಮ ಮತ್ತು ಪದ್ಮ ಎಂಬ ಒಂಬತ್ತು ಮಂದಿಯಲ್ಲಿ ಒಬ್ಬ, (ರತ್ನಸಂಚಯಪುರಾಧಿಪಂ

ಶ್ರೀಧರಂಗವಾತನ ಮನೋಹರಿ ಮನೋಹರಿಗಂ ಶ್ರೀವರ್ಮನುಂ ವಿಭೀಷಣನುಮೆಂಬ ಪೆಸರ್ಗಳೊಳ್ ಬಲದೇವವಾಸುದೇವರೆನಿಸಿ ಬಳೆಯೆ: **ಆದಿಪು,** ೩. ೫೦ ವ)

**ಬಲಿ** – ಜೈನ ದೇವತೆಗೆ ನೀಡುವ ಆಹುತಿ (ಇಂಬಟಿಯಂ ಬಲಿಗೆದರಿದ ಕೂಟನಱಿಸಿ ತಿಂದು ಕಾಲಮಂ ಕಳಿಪುತಿರ್ದು: **ಚಾವುಂಪು,** ಪು. ೪೯೦. ಸಾ. ೩)

**ಬಲಿಸ್ನಪನ** – ಜಿನನಿಗೆ ಮೂರೂ ಸಂಜೆಗಳಲ್ಲಿ ಮಾಡುವ ಅಭಿಷೇಕ (ಬಲಿಸ್ನಪನಮೆಂಬುದು ಮೂಱುಂ ಸಂಜೆಯೊಳ್ ಮಾಳ್ಪ ಜಿನಾಭಿಷೇಕಂ: **ಅಜಿತಪು,** ೧೨. ೧ ವ)

**ಬಸದಿ** – ಜಿನಗೃಹ (ಅರಸನುಂ ಕರ್ಮಕ್ಷಯಮುಂ ಅಕ್ಷಯದಾನಮುಂ ಅಕ್ಕೆ ಎಂದು ಪರಸಿ ಪೊಱಮಟ್ಟು ಬಸದಿಗೆ ಪೋಪಾಗಳ್: **ವಡ್ಡಾರಾ,** ಪು. ೭೮, ಸಾ. ೨೬)

**ಬಹಿರ್ಯಾನ** – ಒಂದು ಗರ್ಭಾನ್ವಯಕ್ರಿಯೆ, ಮಗುವನ್ನು ಬಾಣಂತಿಮನೆಯಿಂದ ಹೊರಗೆ ಒಯ್ಯುವುದು (ನಾಮಕರ್ಮ ಬಹಿರ್ಯಾನ ... ತ್ಯಾಗ ನಿವೃತ್ತಿಯೆಂಬಯ್ವತ್ತಮೂಱು ... ಗರ್ಭಾನ್ವಯಕ್ರಿಯೆಗಳೂಂ: **ಆದಿಪು,** ೧೫. ೧೫ ವ), ನೋಡಿ, **'ಗರ್ಭಾನ್ವಯಕ್ರಿಯೆ'**

**ಬಹಿರ್ಯಾನಕ್ರಿಯೆ** – ಎರಡು ಮೂರು ನಾಲ್ಕನೇ ತಿಂಗಳಲ್ಲಿ ಮಗುವನ್ನು ಹೆರಿಗೆಮನೆಯಿಂದ ಹೊರತರುವುದು (ಎರಡನೆಯ ಮೂರನೆಯ ತಿಂಗಳೋಳಕ್ಕೆ ನಾಲ್ಕನೆಯ ತಿಂಗಳೊಳಕ್ಕೆ ಕೂಸಿನನುಕೂಲದಿನದೊಳ್ ಯಜ್ಞಂಗೆಯಿಸಿ ತೂರ್ಯಾದಿ ಮಂಗಳಧ್ವನಿಗಳ್ವೆರಸು ತಾಯ ಕೈಯೊಳಕ್ಕೆ ದಾದಿ ಕೈಯೊಳಕ್ಕೆ ಕೂಸಂ ಕೊಟ್ಟು ಬಂಧುಜನ ಪರಿತೋಷಿತಪೂರ್ವಕಂ ಪ್ರಸೂತಿಗೃಹದಿಂದ ಪೊಱಮಡಿಸುವುದು ಬಹಿರ್ಯಾನಕ್ರಿಯೆ: **ಚಾವುಂಡಜಯ,** ಪು. ೧೮೧)

**ಬಹುರೂಪಿಣೀವಿದ್ಯೆ** – ಒಂದು ಬಗೆಯ ಮಾಯಾವಿದ್ಯೆ, ತಾನು ಬಯಸಿದ ರೂಪವನ್ನು ಧರಿಸಬಹುದಾದ ವಿದ್ಯೆ (ಬಹುರೂಪಿಣೀವಿದ್ಯೆಯಂ ಸಾಧಿಸಲೆಂದು ಬಂದಿಲ್ಲಿ ಸಾಧಿಸುವುದಂ: **ಧರ್ಮಾಮೃತ,** ೮. ೬೮ ವ)

**ಬಹುಶ್ರುತ(ಭಕ್ತಿ)** – ದರ್ಶನವಿಶುದ್ಧತೆ ಷೋಡಶಭಾವನೆಗಳಲ್ಲಿ ಒಂದು, ಪಂಚಪರ ಮೇಷ್ಠಿಗಳಲ್ಲಿ ಒಬ್ಬರಾದ ಉಪಾಧ್ಯಾಯರಲ್ಲಿ ಭಕ್ತಿ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಬಳಶುದ್ಧಿ** – ಬಲಶುದ್ಧಿ, ಇದರಲ್ಲಿ ಮನೋ ವಾಕ್ಕಾಯಗಳೆಂಬ ಮೂರು ಬಗೆ (ಮನೋಬಳಂ ವಾಗ್ಬಳಂ ಕಾಯಬಳಮೆಂದು ಮೂಱುಂ ತೆಱನಾದ ಬಳಶುದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

**ಬಾದರ** – ಸೂಕ್ಷ್ಮವಲ್ಲದ್ದು, ಸ್ಥೂಲವಾದುದು, ಹದಿಮೂರು ಪ್ರಕೃತಿಗಳಲ್ಲಿ ಒಂದು (ಸ್ವಕೀಯ ಚರಮಸಮಯದೊಳ್ ಅನ್ಯತರವೇದನೀಯ ಮನುಷ್ಯಾಯುಷ್ಯ ಮನುಷ್ಯಗತಿ ತತ್ಪ್ರಾಯೋಗ್ಯಾನುಪೂರ್ವಿ ಪಂಚೇಂದ್ರಿಯಜಾತಿ ತ್ರಸನಾಮ ಸುಭಗಾದೇಯಪರ್ಯಾಪ್ತ ಬಾದರ ಯಶಸ್ಕೀರ್ತಿರುಚ್ಚೈರ್ಗೋತ್ರ ತೀರ್ಥಕರ ನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ: **ಆದಿಪು,** ೧೬. ೨೩ ವ)

**ಬಾದರರೂಪ** – ಸ್ಥೂಲ ರೂಪ [ವನಸ್ಪತಿ ಮುಂತಾದವುಗಳದ್ದು ಏಕಜೀವಿಗಳಾದ ಸೂಕ್ಷ್ಮ ರೂಪ; ಕ್ರಿಮಿ ಮೊದಲಾದ ದ್ವೀಂದ್ರಿಯಾದಿ ಜೀವಗಳು ಸ್ಥೂಲ ರೂಪ] (ಬಾದರರೂಪದಿಂದೆ ಕೊಲ್ಲದ ಪರನಾರಿಗಾಟಿಸದ ಕಳ್ಳದ ಅಸತ್ಯದೊಳೊಂದಾಗಳುಂ ಕುದುದಪತೃಷ್ಣೆಯಂ ಕುಸಿದು ಮಾಣಿಸುವ ಅಯ್ದುಂ ಅಣುವ್ರತಂಗಳಂ ... ತಾಳ್ದಿ: **ಆದಿಪು,** ೬. ೭)

**ಬಾದರಸ್ವರೂಪ** – ಬಾದರರೂಪ (ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱನಾಲ್ವತ್ತೆಂಟು ವಿಕಲ್ಪಮಾದುತ್ತರ ಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆನಿಕ್ಕುಂ: **ಸುಕುಮಾಚ,** ೮. ೨೭ ವ)

**ಬಾವರಿ** – ಮಧುಕರಯಾತ್ರೆ, ಚರಿಗೆಗೆ ಹೋಗುವುದು (ಈರ್ಯಾಶುದ್ಧಿಹೃಚ್ಛುದ್ಧಿಗಂ ಪ್ರಾದುರ್ಭಾವಮನೀಯೆ ಬಾವರಿಗೆವಂದಂ ಪಾರ್ಶ್ವಯೋಗೀಶ್ವರಂ: **ಪಾರ್ಶ್ವನಾಪು,** ೧೫. ೮೨)

**ಬಾವರಿವುಗು** – ಚರಿಗೆಗೆ ಹೋಗು (ಈ ಮೆಯ್ಯಂ ನಿಱಿಸಲ್ವೇಡಿ ಪೊಟಿಲೊಳಗೆ ಚರಿಗೆವೊಕ್ಕು ಬಾವರಿವುಗುತ್ತುಂ ಬಂದು: **ವಡ್ಡಾರಾ,** ೪೬, ಸಾ ೨೯)

**ಬಾವುದೆವಸ** – ಪಾರಣೆ ದಿನ (ನಾಳೆ ಆವು ದೆವಸದೊಳ್ ದೇವತೆಗೆ ಪರಕೆಗುಡುವಂ ಈತನಂ ಇಂದಿನ ದೆವಸಂ ಕಾದಿಂ: **ಜೀವಸಂ,** ೩. ೩೬ ವ)

**ಬಾಹ್ಯತಪ** – ಅನಶನ, ಅವಮೌದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯ್ಯಾಶನ ಮತ್ತು ಕಾಯಕ್ಲೇಶ ಎಂಬ ಆರು ಬಗೆಯ ದೇಹದಂಡನೆಯ ತಪಸ್ಸು (ಘೋರತರೋಗ್ರ ಬಾಹ್ಯತಪದುನ್ನತಿಯಂ ಸಮಸಂದು ಕೂಡೆ ವಿಸ್ತಾರಿಸಲ್ ಅಂತರಂಗತಪಮುಂ: **ಕರ್ಣನೇಮಿ,** ೨. ೧೦)

**ಬಾಹ್ಯಪರಿಗ್ರಹ** – ಮಮತೆಗೆ ಕಾರಣವಾಗುವ ಹತ್ತು ಬಗೆಯ ಚೇತನಾಚೇತನ ವಸ್ತುಗಳು (ಧನ ಧಾನ್ಯ ದ್ವಿಪದ ಚತುಷ್ಪದ ಅಯನ ಅಶನ ಆಸನ ಕುಪ್ಯಪಾದಿ ದಶವಿಧ ಚೇತನಾಚೇತನದ ಭೇದಲಕ್ಷಣಮಪ್ಪ ಬಾಹ್ಯಪರಿಗ್ರಹಮುಮಂ: **ಅಜಿತಪು,** ೬. ೧೨೩ ವ)

**ಬಿಜ್ಜೆ** – ದೇಹವನ್ನು ಬದಲುಮಾಡುವ ಶಕ್ತಿ, ವೈಕುರ್ವಣಶಕ್ತಿ (ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋಪನೀ ದೊರೆಯನನಾಳ್ದನಂ ಪಡೆವುಪಾಯ ಮಾವುದೊ ಜನ್ಮಜನ್ಮದೊಳ್: **ಆದಿಪು,** ೯. ೭೫)

**ಬೀಜರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಬೀಜರುಚಿಯೆಂಬುದು ಬೀಜಪದಗ್ರಹಣಪೂರ್ವಕಮಪ್ಪ ಸೂಕ್ಷ್ಮಾರ್ಥತತ್ವ ಶ್ರದ್ಧಾನಂ: **ಚಾವುಂಡಜಯ,** ಪು. ೩೩೬)

**ಬೀಡುದಾಣ** – ಮುನಿಗಳು ಸಂಚಾರಿಗಳಾದರೂ ಅನಿವಾರ್ಯವಾದಾಗ ನಾಡಿನಲ್ಲಿ ಉಳಿಯಬಹುದಾದ ತಾಣಗಳು (ನಾಡೊಳ್ ನಗರ ಗ್ರಾಮಂ ಖೇಡಂ ಖರ್ವಡ ಮಡಂಬ ಪತ್ತನಮೆಂಬೀ ಬೀಡುದಾಣದೊಳ್: **ಅನಂತಪು,** ೧೦, ೬೦)

**ಬುದ್ಧಿ** – ನಯಶಾಸ್ತ್ರದ ಒಂದು ವಿಭಾಗ, ಇದರಲ್ಲಿ ಸ್ವಾಭಾವಿಕ ಮತ್ತು ವೈನಿಕ ಎಂಬ ಎರಡು ಬಗೆ (ಬುದ್ಧಿಯೆಂದು ಸ್ವಭಾವಿಕಮುಂ ವೈನಿಕಮುಮೆಂದಿರ್ತೆಱನಕ್ಕುಂ: **ಚಾವುಂಡಜಯ,** ಪು. ೨೫೬); ಜಿನಜನನಿಯುನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

**ಬುದ್ಧಿಋದ್ಧಿ** – ಮುನಿಗಳಿಗೆ ಒದಗುವ ಅಷ್ಟಋದ್ಧಿಗಳಲ್ಲಿ ಒಂದು, ಇದರಲ್ಲಿ ಹದಿನೆಂಟು ಬಗೆ (ಕೇವಲಜ್ಞಾನಾವಧಿಮನಃಪರ್ಯಯಜ್ಞಾನಂ ಬೀಜಬುದ್ಧಿಕೋಷ್ಠ ಬುದ್ಧಿಪದಾನುಸಾರಿತ್ವಂ ಸಂಭಿನ್ನಶ್ರೋತೃತ್ವಂ ದೂರಾಸ್ವಾದನ ದೂರಸ್ಪರ್ಶನ ದೂರದರ್ಶನ ದೂರಾಘ್ರಾಣ ದೂರಶ್ರವಣ ಸಮರ್ಥತೆಯುಂ ದಶಪೂರ್ವತ್ವಂ ಚತುರ್ದಶಪೂರ್ವತ್ವಂ ಅಷ್ಟಾಂಗನಿಮಿತ್ತವೇದಿತ್ವಂ ಪ್ರಜ್ಞಾಶ್ರವಣತ್ವಂ ಪ್ರತ್ಯೇಕಬುದ್ಧಿತ್ವಂ ಪ್ರವಾದಿತ್ವಮೆಂದಷ್ಟಾದಶಪ್ರಕಾರಮಪ್ಪ ಬುದ್ಧಿಋದ್ಧಿಯೊಳಂ: **ಚಂದ್ರಪ್ರಪು,** ೧೪. ೩೦ ವ)

**ಬುದ್ಧಿಸಾಗರ** – ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದಾದ ಪುರೋಹಿತರತ್ನದ ಹೆಸರು (ಶಾಂತಿಕ ಪೌಷ್ಟಿಕ ಕ್ರಿಯಾಕುಶಲನುಂ ಧರ್ಮಕಾರ್ಯಾದಿ ಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ: **ಆದಿಪು,** ೧೧. ೩ ವ)

**ಬೃಹಸ್ಪತಿಮತ** – ಚಾರ್ವಾಕಮತ, ನಿರೀಶ್ವರವಾದ (ಶ್ರಾವಕಮಾನಿಗಳಂ ಅನೇಕವಿಧದಿಂ ಉಪಜೀವಿಪರ್ ಅಜ್ಞಾನಿಗಳ ಬುದ್ಧಿಪೌರುಷಹೀನಮಜೀವಿಕೃತಂ ಬೃಹಸ್ಪತಿಮತ ದೊಳ್: **ಶಾಂತಿಪು,** ೮. ೧೩೦)

**ಬೆಳ್ಳವಾಸ** – ಮಳೆಗಾಲದಲ್ಲಿ ನೀರಲ್ಲಿ ಸ್ಥಿರವಾಗಿ ನಿಂತುಕೊಂಡು ತಪಸ್ಸು ಮಾಡುವುದು: (ಅವಿರಳ ಶಿಶಿರಕಣಂ ಮೆಯ್ ನವಿರೊಳ್ ಪನಿಪುಲ್ಲ ತೆಜಿನನುಕರಿಸಿರೆ ಯೋಗವಶೀಕೃತಾಂಗಕಂ ಬೆಳ್ಳವಾಸದೊಳ್ ಮೇಘರಥಮುನೀಂದ್ರಂ ನಿಂದಂ: **ಶಾಂತಿಪು,** ೯. ೧೦೭)

**ಬೋಧಾವಾಪ್ತಿ** – ಜ್ಞಾನಲಾಭ (ಬೋಧಾವಾಪ್ತಿಯಿಂದಂ ಸುಖಾಕರನಾಗೆಂದು ಫಲಪ್ರದೋಕ್ತಿ ತಳಿದಂ ಶೇಷಾಕ್ಷತೌಘಂಗಳಂ: **ಆದಿಪು,** ೯. ೬೪)

**ಬೋಧಾವಾಸಪ್ರಿಯ** – ಅರ್ಹಂತ, ಜಿನ (ವಾಸವ ಆಸನಕಂಪದಿನಾ ಸಮಯ ದೊಳವಧಿಯಂ ಪ್ರಯೋಗಿಸಿ ಬೋಧಾವಾಸಪ್ರಿಯನ ಉದಯಮನಜಿದು ಆಸನದಿಂದೆರ್ದು ಮೂಜು ಸೂಟ್ ಪೊಡೆವಟ್ಟಂ: **ಆದಿಪು,** ೭. ४೨)

**ಬೋಧಾವಾಸಾಶಯ** – [ಬೋಧ+ಆವಾಸ+ಆಶಯ] ಅರ್ಹಂತ, ಜಿನ (ವಾಸವನಾಸನ ಕಂಪದಿನಾ ಸಮಯದೊಳ್ ಅವಧಿಯಂ ಪ್ರಯೋಗಿಸಿ ಭೋಧಾವಾಸಾಶಯನ ಉದಯಮನಜಿದು: **ಆದಿಪು,** ೭. ४೨) ['ಬೋಧಾವಾಸಾಶಯ' – ನರಸಿಂಹಶಾಸ್ತ್ರಿಗಳು ಅನುಮೋದಿಸಿದ ಪಾಠ]

**ಬೋಧಿಲಾಭ** – ಕೇವಲಜ್ಞಾನಪ್ರಾಪ್ತಿ (ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ: **ಆದಿಪು,** ೧೦. ೬೧)

**ಬೋಧೋದಯ** – ಜ್ಞಾನೋದಯ (ಎಮಗೆ ... ದೇವೇಂದ್ರಮುನಿಪದಾಬ್ಜಂ ಜಯನಂದಿ ಮುನಿಕ್ರಮಕಮಳಮೀಗೆ ಬೋಧೋದಯಮಂ: **ಆದಿಪು,** ೧. ೧೩)

**ಬೌದ್ಧಮತಾಯತ್ತ** – ಎಲ್ಲವೂ ಕ್ಷಣಿಕವಾದದ್ದರಿಂದ ಆತ್ಮವೂ ಕ್ಷಣಿಕವಾದುದೆಂದು ವಾದ ಮಾಡುವವನು (ಸರ್ವಂ ಕ್ಷಣಿಕಂ ಸತ್ತ್ವಮುಂಟಪ್ಪುದಜೆಂ ದೀಪಿಕಾ ಶಿಖಾಕಳಾಪಮೆಂತಂತೆಂಬನುಮಾನದಿಂದಾತ್ಮಂಗಂ ಕ್ಷಣಿಕತ್ವಮುಂಟಾದ ಕಾರಣಂ ತತ್ಕೃತಪುಣ್ಯಪಾಪಫಲಾನುಭವಮಿಲ್ಲ: **ಧರ್ಮಬಾಹು,** ೫. ೬೮ ವ)

**ಬ್ರಹ್ಮ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಜುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಬ್ರಹ್ಮಚರ್ಯ** – ಇಂದ್ರಿಯನಿಗ್ರಹ (ತಪಂ ಛಲಂ ಅಕಿಂಚನ್ಯಂ ನಯಂ ಬ್ರಹ್ಮಚರ್ಯಮೆ ಮನೋನ್ನತಿ: **ಸುಕುಮಾಚ,** ೧. ೨೬)

**ಬ್ರಹ್ಮಚಾರಿ** – ಶ್ರಾವಕರ ಹನ್ನೊಂದು ನೆಲೆಗಳಲ್ಲಿ ಏಳನೆಯ ಸ್ಥಾನದಲ್ಲಿರುವವನು (ಸಹಜಾಶುಚಿದೇಹಂ ಪ್ರಾಣಿಹತಿ ಪ್ರಾರಂಭಮೆಂದು ವನಿತಾರತಿನಿಸ್ಪೃಹನಾಗಿ ತೊಜೆದು ನೆಗಟ್ಟಂ ಗೃಹಸ್ಥದೊಳ್ ಬ್ರಹ್ಮಚಾರಿಯೇಟಿನೆಯಾತಂ: **ಸುಕುಮಾಚ,**

೬. ೩೨); (ದುರಿತದ ಕಟ್ಟೆ ದುರ್ಗತಿಯು ಬಟ್ಟೆ ಕಳಂಕದ ಮೊಟ್ಟೆ ದುಃಖದಾಗರಮಿವರೆಂದು ಕಾಮಿನಿಯರೊಂದುಪಭೋಗಮನೆಯ್ದೆ ಬಿಟ್ಟು ಸಚ್ಚರಿತದೊಳಾರ್ತು ಕೂರ್ತೆಸೆಗುವುತ್ತಮ ಸದ್ಗುಣನಲ್ತೆ ಧಾತ್ರಿಗಚ್ಚರಿ ಸಕಲೈಕಪುಣ್ಯನಿಧಿ ದುರ್ಗುಣದೂರನುದಾರನುತ್ತಮಂ ಬ್ರಹ್ಮಚಾರಿಯೆಂಬೇಟಿನೆಯ ಶ್ರಾವಕಂ: **ಧರ್ಮಾಮೃತ,** ೫. ೯೫ ಹಾಗೂ ವಚನ)

**ಬ್ರಹ್ಮಯೋಗ** – ಬ್ರಾಹ್ಮೀ ಮುಹೂರ್ತ (ಬರೆ ಚೈತ್ರಂ ಕೃಷ್ಣಪಕ್ಷಂ ದೊರೆಕೊಳೆ ನವಮೀವಾಸರಂ ಪೊರ್ದೆ ಲೋಕೋತ್ತರಮಾಗಿರ್ದ ಉತ್ತರಾಷಾಢದೊಳ್ ಅತಿಶುಭದಂ ಬ್ರಹ್ಮಯೋಗಂ ಮನಂಗೊಂಡಿರೆ: **ಆದಿಪು,** ೭. ೩೬)

**ಬ್ರಹ್ಮವ್ರತ** – ಒಂದು ವ್ರತ, ಇದರಲ್ಲಿ ಐದು ವಿಧ (ಯುವತಿಕಥಾಲೋಕನ ಭೂತವಿಭವ ಚಿಂತಾಂಗ ಸಂಸ್ಕೃತಂ ವೃಷ್ಯರಸಾಧ್ಯವಹಾರತ್ಯಜನಂ ಪಂಚವಿಧಂ ಬ್ರಹ್ಮವ್ರತಂ ಜಿನೇಶ್ವರ ಮತದೊಳ್ : **ಶಾಂತಿಪು,** ೬.೫೪)

**ಬ್ರಹ್ಮೇಂದ್ರತೆ** – ಬ್ರಹ್ಮಕಲ್ಪದ ಒಡೆತನ (ಪಡೆದಂ ಬ್ರಹ್ಮೇಂದ್ರತೆಯಂ ಗಡಂ ಆತಂ ಬಗೆದು ನೋಡೆ ನಾರಕನೆತ್ತಲ್ ಗಡ ದೇವನೆತ್ತ: **ಆದಿಪು,** ೫. ೯೭)

**ಬ್ರಹ್ಮೋತ್ತರ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಬ್ರಾಹ್ಮ** – ಒಂದು ಮುಹೂರ್ತ (ಬೆಳಗಪ್ಪ ಜಾವದ ಬ್ರಾಹ್ಮಮೆಂಬ ಮುಹೂರ್ತದೊಳ್: **ಶಾಂತಿಪು,** ೯. ೨೧೫ ವ)

# ಭ

**ಭಗವಂತ ವೇಷ** – ಸನ್ಯಾಸಿಯ ಸೋಗು (ಮಹಾಪದ್ಮನಂ ಕಿಡಿಸಿದಲ್ಲದೆ ಕಾಸೆಗಳಂ ಕಳೆಯೆನೆಂದು ಜಾದಿನ ಸೇಲೆಗಳನ್ನುಟ್ಟು ಭಗವಂತ ವೇಷಮಂ ಕೈಕೊಂಡು: **ವಡ್ಡಾರಾ,** ಪು ೧೮೬, ಸಾ ೬)

**ಭಗವತ್ಕೃತ** – ತೀರ್ಥಂಕರನಿಂದ ಆದ (ವಿತತಾಷಾಢದ ಬಹುಳ ಪ್ರತಿಪದ್ದಿನದಂದು ಕೀರ್ತಿ ನೆಗಟ್ದಿರೆ ಭಗವತ್ಕೃತಯುಗಮಾದುದರಿಂದಂ ಕೃತಯುಗಮೆಂಬರ್ ಪುರಾಣವಿದರಿದನೀಗಳ್: **ಆದಿಪು,** ೮. ೬೬)

**ಭಗವದ್ರೂಪ** – ಗಣಧರರೂಪ (ಭಗವದರುಹನ ಸಮಕ್ಷದೊಳ್ ಅಗಣ್ಯಪುಣ್ಯ ಪ್ರಭಾವದಿಂದಂ ಕೊಂಡಂ ಭಗವದ್ರೂಪಮಂ ಇಂದ್ರಾದಿಗಳೆಲ್ಲಂ ಪೊಗೞೆ ಕಾಲಲಬ್ಧಿಯನಾಗಳ್: **ಆದಿಪು,** ೧೦. ೪೮)

**ಭಟಾರ** – [ಭಟ್ಟಾರ] ಗುರು (ಎನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೆಂದರ್: **ವಡ್ಡಾರಾ,** ಪು. ೫. ಸಾ. ೨೭)

**ಭದ್ರಬಾಹು** – ಐದನೆಯ ಶ್ರುತಕೇವಲಿ; ಉತ್ತರಭಾರತದಿಂದ ಶ್ರವಣಬೆಳುಗೊಳಕ್ಕೆ ಚಂದ್ರಗುಪ್ತನ ಜೊತೆ ಬಂದನೆನ್ನಲಾದ ಮುನಿ (ಇಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತಂಗೆ ಭದ್ರಬಾಹುಭಟ್ಟಾರರ್ ಪೇೞ್ದು: **ವಡ್ಡಾರಾ,** ಪು. ೮೭, ಸಾ. ೧೮)

**ಭದ್ರಮುಖ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲೊಂದಾದ ತಕ್ಷಕರತ್ನದ ಹೆಸರು (ಮಹಾನದಾವಗಾಹನ ಸಮಯ ನೌ ದ್ರೋಣಿ ಸಂಕ್ರಮಾದಿವಿಧಾನ ಪ್ರಾಗ್ಲಲ್ಭ್ಯನುಂ ಅನುಸ್ಮರಣಮಾತ್ರ ನಿಷ್ಪಾದಿತ ಸಪ್ತತಳಾದಿ ಪ್ರಾಸಾದಪ್ರಕರಣನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ: **ಆದಿಪು,** ೧೧. ೩ ವ)

**ಭದ್ರಶಾಲ** – ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು: ಉಳಿದ ಮೂರು: ನಂದನ, ಸೌಮನಸ, ಪಾಂಡುಕ (ಮಂದರಶೈಲಮಂ ದಿವಿಜನಾಯಕ ನೆಯ್ತರೆ ಭದ್ರಶಾಲದಿಂ ... ಗಿರಿರಾಜವಿಲಾಸಂ ಅಟ್ಟಿಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨)

**ಭದ್ರಶಾಳ** – ಭದ್ರಶಾಲ (ಉನ್ಮತ್ತ ಅಳಿಕೀರಂಗಳ ಕಳರುತಿಯಂ ಪೋಲ್ವಿನಂ ತನ್ನಿತಂಬಸ್ಥಳದೊಳ್ ತಾಳ್ದಿತ್ತು ಚಿತ್ರಾಂಬರ ವಿಳಸನಮಂ ಭದ್ರಶಾಳಂ ವಿಶಾಳಂ: **ಮಲ್ಲಿನಾಪು,** ೧೨. ೫೯)

**ಭಯ** – ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು, ಭಯವನ್ನು ಉಂಟುಮಾಡುವುದು (ಕ್ರಮುಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್ಕರ್ಮದೊಡನೆ ಹಾಸ್ಯರತ್ಯರತಿಶೋಕ ಭಯಜುಗುಪ್ಸಾಭಿಧಾನ ನೋಕಷಾಯ ಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ಭರತ** – ತ್ರಿಷಷ್ಟಿಶಲಾಕಾಪುರುಷರಲ್ಲಿನ ಹನ್ನೆರಡು ಮಂದಿ ಚಕ್ರವರ್ತಿಗಳಲ್ಲಿ ಮೊದಲನೆಯವನು, ಆದಿಜಿನನ ಮಗ (ಪುರುಪರಮೇಶ್ವರಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇೞಲ್ ದೊರೆ ಪೆಱರಾರ್ ಭರತನೊಳೆನೆ ಕರಗಿದುದಾ ಗರ್ವಪರ್ವತಂ ಮಾಗಧನಾ: **ಆದಿಪು,** ೧೨. ೧೦೯); ಜಂಬೂದ್ವೀಪದ ಏಳು ಜನಪದಗಳಲ್ಲಿ ಒಂದು (ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿ ಪರಿವೃತವಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತ್ಯೈರಾವತಗಳೆಂಬೇೞು ಜನಪದಂಗಳಿಂದಂ: **ಆದಿಪು,** ೧. ೪೮ ವ)

**ಭರತಕ್ಷೇತ್ರ** – ಭರತಖಂಡ (ಜಿನೇಂದ್ರವಂದನಾಭಕ್ತಿಯಿಂ ಪೋದಲ್ಲಿ ಭರತಕ್ಷೇತ್ರದೊಳ್ ಯುಗದೊಳ್ ತೀರ್ಥಂಕರನುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಬೆಸಸೆ: **ಆದಿಪು,** ೧೨. ೧೦೫ ವ)

**ಭರತೋರ್ವಿ** – ಭರತಕ್ಷೇತ್ರ (ಅಯ್ದನೆಯಂ ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚಕ್ರಯುಕ್ತಂ ಭರತೋರ್ವಿಗಿಂತು ಸಲೆ ನೋಂತಂ ಶಾಂತಿತೀರ್ಥೇಶ್ವರಂ: **ಶಾಂತಿಪು**, ೧. ೧೬)

**ಭವ** – ತೀರ್ಥಂಕರ (ಭವನ ತನು ಭಾಳಮಂಡದ ನವಮಂಡನದಿಂದಾದಮೊಪ್ಪೆ ನಯನದ್ವಯದಿಂ ತವೆ ನೋಡಲ್ ನೆಱಿಯದೆ ನಯನವಿಹ್ವಲಂ ಹರಿ ಸಹಸ್ರಲೋಚನನಾದಂ: **ಶಾಂತಿಪು**, ೧೦. ೬೦); ಐದು ಸಂಸಾರಭೇದಗಳಲ್ಲಿ ಒಂದು (ಅವಱೊಳ್ ದ್ರವ್ಯಕ್ಷೇತ್ರಕಾಲಭವಭಾವಭೇದದಿಂ ಪಂಚವಿಧಂ ಸಂಸಾರಂ: **ಆದಿಪು**, ೧೦. ೬೩ ವ)

**ಭವಚತುಷ್ಟಯ** – ದೇವ, ಮನುಷ್ಯ, ತಿರ್ಯಕ್, ನರಕ ಎಂಬ ನಾಲ್ಕು ಬಗೆಯ ಹುಟ್ಟುಗಳು (ಕಷ್ಟತರಮಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ ಇನ್ನನಂತ ಚತುಷ್ಟಯಮಂ ಪೊರ್ದು ಪೊರ್ದದಿರು ಸಂಸೃತಿಯಂ: **ಅಜಿತಪು**, ೬. ೭೩)

**ಭವನಮಹತ್ತರದೇವ** – ದೇವತೆಗಳ ಒಂದು ಪಂಗಡವಾದ ಭವನವಾಸಿ (ವಿವಿಧಾರ್ಯ್ಯಕರರ್ ಕಾಣ್ಬುಜ್ಜುಗದಿಂ ಭವನಮಹತ್ತರದೇವರ್ ಕ್ರಮದಿಂ ಬರೆ: **ಚಂದ್ರಪ್ರಪು**, ೪. ೬೩)

**ಭವನವನಜ್ಯೋತಿಃಕಲ್ಪಾವಾಸ** – ಭವನವಾಸಿ, ವ್ಯಂತರ, ಜ್ಯೋತಿಷ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ನಿವಾಸಗಳು (ಭವನವನಜ್ಯೋತಿಃ ಕಲ್ಪಾವಾಸದೊಳ್ ಕ್ರಮದೆ ಶಂಖ ಭೇರಿ ಕಂಠೀರವ ಘಂಟಾಧ್ವನಿಗಳ್ ನೆಗಟ್ಟುವು: **ಆದಿಪು**, ೭, ೪೦)

**ಭವನವಾಸಿಗ** – ಭವನವಾಸಿ ವ್ಯಂತರ ಜ್ಯೋತಿಷ್ಯ ಮತ್ತು ಕಲ್ಪವಾಸಿ ಎಂಬ ನಾಲ್ಕು ದೇವತಾವರ್ಗಗಳಲ್ಲಿ ಒಂದು: ಇವರಲ್ಲಿ ಅರಸುಕುಮಾರರು, ನಾಗಕುಮಾರರು, ಸುಪರ್ಣಕುಮಾರರು, ದ್ವೀಪಕುಮಾರರು, ಉದಧಿಕುಮಾರರು ವಿದ್ಯುತ್ಕುಮಾರರು ಸ್ತನಿತಕುಮಾರರು ದಿಕ್ಕುಮಾರರು ಅಗ್ನಿಕುಮಾರರು ಮತ್ತು ವಾತಕುಮಾರರು ಎಂಬ ಹತ್ತು ವರ್ಗಗಳು (ದೇವಗತಿ ನಾಲ್ಕಕ್ಕುಮೆಂತೆನೆ ಭವನವಾಸಿಗ ವಾನವ್ಯಂತರ ಜ್ಯೋತಿಷ್ಯ ಕಲ್ಪವಾಸಿ ಭೇದಭಿನ್ನತ್ವದಿಂ: **ಶಾಂತಿಪು**, ೧೨. ೬ ವ)

**ಭವನಾಂಗ** – ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು (ಭವನಾಂಗಂ ಕಲ್ಪಭುಜಂ ಸಮೆದ ಬಹುವಿಧೋತ್ತುಂಗ ಹರ್ಮ್ಯಾವಳೀ ಗರ್ಭವಿಲಾಸಾವಾಸದೊಳ್: **ಚಂದ್ರಪ್ರಪು**, ೩. ೩೮)

**ಭವನಾಂಗಭೂಜ** – ಭವನಾಂಗ (ಸನ್ನಿದಮಾದ ಭೋಗಭೂಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇವುದೆಂಬನಿಶ್ಚಯಮನೊಡರ್ಚಿ:**ಮಲ್ಲಿನಾಪು**, ೨. ೫೯)

**ಭವನಾಮರ** – ಭವನವಾಸಿಗ (ಭವನಾಮರರುಂ ವ್ಯಂತರನಿವಹಮುಂ ಆ ಜ್ಯೋತಿರಮರತತಿಯುಂ: **ಕರ್ಣನೇಮಿ**, ೮. ೧೯ ವ)

**ಭವನಿಬದ್ಧ** – ಸಂಸಾರದ ಕಟ್ಟುಪಾಡು (ನಿನಗೆ ಪಥ್ಯಮಾವುದು ಅದಂ ಮಾಡು ಆಮೂಲಚೂಲಂ ಎಮಗೆ ಭವನಿಬದ್ಧಂ ಅಱಲಿಸಿತೆಮ್ಮಂ: **ಯಶೋಧಚ,** ೧. ೬೫)

**ಭವಪದ್ಧತಿ** – ಭವಾವಳಿ (ಕುಸುಮಿತ ಬಹಿರುಪವನ ಭೂಪ್ರಸರದೊಳಿರ್ದ ಅಮಿತಕೀರ್ತಿ ಕೇವಳಿಯಂ ಬಂದಿಸಿ ಮತ್ ಭವಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ: **ಶಾಂತಿಪು,** ೬. ೮೫)

**ಭವಪರಿಣತಿ** – ಬೇರೆ ಬೇರೆ ರೂಪಗಳಲ್ಲಿ ಹುಟ್ಟುವುದು (ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮೀ ಬೇವಸಂ ನಿಶ್ಚಯಂ: **ಶಾಂತಿಪು,** ೯. ೧೪)

**ಭವಪರಿವರ್ತನ** – ಸಂಸಾರದಲ್ಲಿ ಪರಿಭ್ರಮಣ ಮಾಡುವ ಜೀವಗಳಿಗೆ ಉಂಟಾಗುವುದೆಂದು ಹೇಳಲಾಗುವ ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವಗಳೆಂಬ ಐದು ರೀತಿಯ ಪರಿವರ್ತನೆಗಳಲ್ಲಿ ಒಂದು (ಚತುರ್ಗತಿಗಳೊಳಂ ಸರ್ವಜಘನ್ಯಮ ಪ್ಪಾಯುಷ್ಯದೊಳ್ ತೊಡಗಿ ಸಮಾಯಾಧಿಕಾನುಕ್ರಮದಿಂದನೇಕ ಭವಪರ್ಯಾಯ ಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು: **ಸುಕುಮಾಚ,** ೬. ೬)

**ಭವಪಾಶ** – ಸಂಸಾರಬಂಧನ (ಬಿಡಿಸಿ ವಧೂಜನಮಂ ಒಡಂಬಡಿಸಿ ಪಿತೃದ್ವಯಮಂ ಅಖಿಳವಿಷಯಸುಖಕ್ಕೋಗಡಿಸಿ ಭವಪಾಶಮಂ ಪಱಿಪಡಿಸಿ: **ಪುಷ್ಪದಂಪು,** ೧೩. ೭೫)

**ಭವಪ್ರತ್ಯಯಜ್ಞಾನ** – ಅವಧಿಜ್ಞಾನ, ಕಾಲದೇಶಗಳ ಎಲ್ಲೆಯನ್ನು ಮೀರಿ ಸಂಗತಿಗಳನ್ನು ಅರಿಯಬಲ್ಲ ಜ್ಞಾನ (ಆ ದೇವಂ ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ: **ಆದಿಪು,** ೨. ೬೬)

**ಭವಬದ್ಧವೈರ** – ಜನ್ಮಾಂತರದಲ್ಲಿ ಉಂಟಾದ ವೈರ (ಪುಟ್ಟಲೊಡಮಱಿದು ಮೊದಲೊಳ್ ಪುಟ್ಟಿದ ಭವಬದ್ಧವೈರದಿಂ ದಿತಿಸುತನಣ್ಮುಟ್ಟಾಗೆ ಬಂದು ಕಡನಂ ಕೊಟ್ಟರ್ ಕೊಳ್ವಂತೆ ನಾಗಪಾಶದಿನಾಗಳ್: **ಶಾಂತಿಪು,** ೮. ೪೯

**ಭವರಿಪು** – ಐಹಿಕತೆಯ ವಿರೋಧಿ, ಅರ್ಹಂತ (ಇಂದ್ರ ಭವರಿಪುವಂ ಸ್ತುತಿಯಿಸಿ ಮುಕುಟವಿಘಟ್ಟಿತಪಾದನಾದನನುನಯದಿಂದಂ: **ಪುಷ್ಪದಂಪು,** ೧೧. ೫೮)

**ಭವಸಂಸಾರ** – ಪಂಚಸಂಸಾರಗಳಲ್ಲಿ ಒಂದು, ಭವಪರಿವರ್ತನದಲ್ಲಿ ಕ್ರಮಕ್ರಮವಾಗಿ ನರಕದಲ್ಲಿ ಹುಟ್ಟುವುದು (ಪುಟ್ಟಿದ ಲೆಕ್ಕಮಲ್ಲದೆ ಸಮಯೋತ್ತರ ಕ್ರಮದೊಳ್ ಪುಟ್ಟಿ ಮತ್ತಂ ನರಕದ ಜಘನ್ಯಮಪ್ಪ ಪತ್ತು ಸಾಸಿರ ವರುಷದೊಳ್ ಪುಟ್ಟುವುದೊಂದು ಭವಸಂಸಾರಂ: **ಚಾವುಂಡಜಯ,** ಪು. ೨೩೨)

**ಭವಸಂಸ್ಕಾರ** – ಜಾತಿಸ್ಮರಣೆ (ಚಾರಣರ್ಯುಗಳಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತುದಂ ಆಗಳಾಗಳೆ ಪುಟ್ಟಿದ ಭವಸಂಸ್ಕಾರದಿಂದಂ ಸವಿಸ್ತರಮಱಿದು: **ಆದಿಪು,** ೯. ೧೩೧ ವ)

**ಭವಸ್ಮರಣೆ** – ಹಿಂದಿನ ಜನ್ಮದ ನೆನಪು, ಜಾತಿಸ್ಮರಣೆ (ಮಱಿಯಂಚೆಯ ... ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ ಪುಟ್ಟೆ: **ಮಲ್ಲಿನಾಪು,** ೪. ೧೬ ವ)

**ಭವಸ್ಮೃತಿ** – ಭವಸ್ಮರಣೆ (ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾದೋನ್ನತಿಯಾದುದೋ: **ಕಾದಂಬ,** ೧. ೭೭)

**ಭವಾಂತರ** – ಬೇರೆಯ ಹುಟ್ಟು, ಜನ್ಮಾಂತರ (ನೆನೆದಂ ವಿಭಂಗನೀತ ಭವಾಂತರಭೂರಿವೈರಮಂ: **ಶಾಂತಿಪು,** ೭. ೧೦೮)

**ಭವಾಂತರವ್ಯಾಮೋಹ** – ಹಿಂದಿನ ಜನ್ಮದಿಂದ ಬಂದ ಮೋಹ (ಕಣ್ಣಱಿಯದೊಡಂ ಕರುಳಱಿಯದೆ ಮಱುಗಿಸದಿರ್ಪುದೆ ಭವಾಂತರವ್ಯಾಮೋಹಂ: **ಯಶೋಧಚ,** ೩. ೪೪)

**ಭವಾಂಬುಧಿ** – ಸಂಸಾರಸಮುದ್ರ (ಅಭಯರ್ ನಿರೋಗರುಂ ಶ್ರುತವಿಭವಸಮನ್ವಿತರುಮಪ್ಪರ್ ಎಂಬುದು ಪಿರಿದಲ್ತು ಭವಾಂಬುಧಿಯುಮನೀಸುವರ್ ಅಭಯೌಷಧಶಾಸ್ತ್ರದಾನ ಫಳವಿಳಸನದಿಂ: **ಆದಿಪು,** ೧೦. ೧೧)

**ಭವಾವಳಿ** – ಹುಟ್ಟುಸಾವುಗಳ ಪರಂಪರೆ (ಹಸ್ತಿಯು ತನ್ನ ಮುನ್ನಿನ ಭವಾವಳಿಯೆಲ್ಲಮನೆಯ್ದೆ ಪೇೞೆ: **ಪಂಪರಾ,** ೧೫. ೫೩)

**ಭವಾಳಿ** – ಭವಾವಳಿ (ಅಂತು ಭವಾಳಿಯನೋಳಿಯೆ ಪೂರ್ವಾಪರಪರಾಮರ್ಶನಂಗೆಯ್ದು: **ಶಾಂತಿಪು,** ೫. ೭ ವ)

**ಭವ್ಯ** – ಮೋಕ್ಷಕ್ಕೆ ಅರ್ಹತೆಯನ್ನು ಪಡೆದಿರುವ ಸಂಸಾರಿಜೀವ (ಆಮೇನೋ ಭವ್ಯರೆಮೊ ಅಭವ್ಯರೆಮೊ ಎಂದು ಬೆಸಗೊಂಡೊಡೆ: **ವಡ್ಡಾರಾ,** ಪು. ೧೦೦, ಸಾ. ೨೪)

**ಭವ್ಯಚಿಂತಾಮಣಿ** – ಭವ್ಯರ ಆಸೆಗಳನ್ನು ನೆರವೇರಿಸುವವನು (ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ... ಭವ್ಯಚಿಂತಾಮಣಿಯುಂ ತಾನಾಗಿ: **ಆದಿಪು,** ೧. ೪)

**ಭವ್ಯಜೀವ** – ಮೋಕ್ಷಕ್ಕೆ ಯೋಗ್ಯವಾದ ಜೀವ (ಭಟ್ಟಾರಾ ಅದೇಂ ಭವ್ಯಜೀವನೋ ಅಭವ್ಯಜೀವನೊ ಎಂದು ಬೆಸಗೊಂಡೊಡೆ: **ವಡ್ಡಾರಾ,** ಪು. ೧೦. ಸಾ. ೯)

**ಭವ್ಯತೆ** – ಮೋಕ್ಷ ಪಡೆಯುವ ಅರ್ಹತೆ (ಅಮರೇಂದ್ರನುಂ ಶಚಿಯುಂ ಈ ಮರಣಂ ನಮಗಾದೊಡಲ್ತೆ ಭವ್ಯತೆ ಬಳೆದಿರ್ಕುಮೆಂದು ಬಯಸುತ್ತಿರೆ: **ಶಾಂತಿಪು,** ೭. ೪೦)

**ಭವ್ಯಪದ್ಮಾಕರಬೋಧಾದಾಯಿ** – ಭವ್ಯರೆಂಬ ತಾವರೆ ಕೊಳಕ್ಕೆ ಜ್ಞಾನ ನೀಡುವವನು (ನಾಭಿರಾಜಾಂಗನೆ ವಿಶದಯಶೋ ಭಾಗಿಯುಂ ಭವ್ಯಪದ್ಮಾಕರ ಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್: **ಆದಿಪು,** ೭. ೩೬)

**ಭವ್ಯಪ್ರಕರ** – ಭವ್ಯಜನಸಮೂಹ (ಅಕಳಂಕಚಂದ್ರ ವಾಕ್‌ಚಂದ್ರಿಕೆಯಿಂ ಧವಳಿಸೆ ದಿಗಂಬರಶ್ರೀ ಭವ್ಯಪ್ರಕರ ಚಕೋರಂ ನಲಿದುದು ಮುಕುಳಿತವಾಯ್ತು ಅನ್ಯವಾದಿವದನಾಂಭೋಜಂ: **ಮಲ್ಲಿನಾಪು,** ೧. ೧೬)

**ಭವ್ಯಪ್ರಬೋಧಬೋಧಿ** – ಬೋಧಿದುರ್ಲಭ ಎಂಬ ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು (ಅಭಿವಿನುತಧರ್ಮರತಿಯು ದುರ್ಲಭಂ ಅದು ಭವ್ಯಪ್ರಬೋಧಬೋಧಿಯೆನಿಕ್ಕುಂ: **ಸುಕುಮಾಚ,** ೧೨. ೩೭), ನೋಡಿ, **'ದ್ವಾದಶಾನುಪ್ರೇಕ್ಷೆ'**

**ಭವ್ಯಾವಳಿ** – [ಜೈನಮತದಲ್ಲಿ] ನಂಬಿಕೆಯುಳ್ಳ ಭಾವುಕರು (ತ್ರಿದಶಸ್ತುತ್ಯಮಿದು ಆದಿದೇವಚರಿತಂ ಕರ್ಣಾಮೃತಸ್ಯಂದಿಯಕ್ಕೆ ಭವ್ಯಾವಳಿಗೆಂದು ಪೇಳಿಸೆ ಬುಧರ್: **ಆದಿಪು,** ೧೬. ೭೯)

**ಭವ್ಯಾಳಿ** – ಭವ್ಯಾವಳಿ (ನೆಗಟ್ದಜಿತನಜೇಯಂ ... ಜಿನಶ್ರೀಸೇವ್ಯನಪ್ಪಂದು ಭವ್ಯಾಳಿಗೆ ಹಿತಕರನಾದಂ: **ಅಜಿತಪು,** ೧. ೧೦)

**ಭವ್ಯೋತ್ಸವ** – ಮೋಕ್ಷಾಪೇಕ್ಷಿಗಳ ಸಂತೋಷ (ಶ್ರೀಯಂ ತಳೆದಂ ತ್ರಿಜಗಜ್ಜ್ಯಾಯಂ ... ಭವ್ಯೋತ್ಸವದಾಯಿನಿಯಂ ಜೈನಜನಮನೋಹರಚರಿತಂ: **ಚಂದ್ರಪ್ರಪು,**೧೬. ೧)

**ಭಾಜನಾಂಗತರು** – ಒಂದು ಕಲ್ಪವೃಕ್ಷ, ಅಮೂಲ್ಯವಾದ ಪಾತ್ರೆಗಳನ್ನು ಕೊಡುವಂಥದ್ದು, (ಕನತ್ಕನಕಮಣಿಖಚಿತ ಬಹುಭಾಜನಂಗಳಂ ಭಾಜನಾಂಗತರು ಕುಡುತರ್ಕುಂ: **ಆದಿಪು,** ೫. ೩೮); ನೋಡಿ, **'ಅಂಗಕಲ್ಪಕುಜ'**

**ಭಾವ** – ಆಪ್ತನ ಪರ್ಯಾಯವಾದ ತತ್ವ (ಭಾವಮೆಂಬುದು ಕರ್ಮಂಗಳ ಕ್ಷಯುದಿನುಪಶಮುದಿಂ ಕ್ಷಯೋಪಶಮುನದಿನಾತ್ಮನ ಪರ್ಯಾಯಂ: **ಚಾವುಂಡಜಯ,** ಪು. ೬)

**ಭಾವನ** – ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಬಗೆ; ಭವನವಾಸಿ (ವನವಧೂಬ್ರಾತಂ ಔತ್ಸುಕ್ಯವತ್ ಭಾವನಭಾಮಾರಾಜಿ ತದ್ಭಾವನಸುರರ್: **ಆದಿಪು,** ೧೦. ೩೬)

**ಭಾವನಸುರ** – ಭವನಿವಾಸಿ ದೇವತೆ (ವನವಧೂಬ್ರಾತಂ ಔತ್ಸುಕ್ಯವತ್ ಭಾವನಭಾಮಾರಾಜಿ ತದ್ಭಾವನಸುರರ್: **ಆದಿಪು,** ೧೦. ೩೬)

**ಭಾವನಿರ್ದ್ವಂದ್ವ** – ಭಾವನೆಯಲ್ಲಿ ದ್ವಂದ್ವವಿಲ್ಲದ[ವನು], ಸಮಪ್ರಜ್ಞೆಯವನು (ಭಾವನಿರ್ದ್ವಂದ್ವನಾಗಿಯೆ ನೀಂ ರಕ್ಷಿಸು ರಾಹಿಣೇಯನೆನಿಪ ಅಸ್ಮತ್ಪುತ್ರನಂ: **ಜಗನ್ನಾವಿ,** ೩. ೨೩)

**ಭಾವನೆ** – ಅನುಸಂಧಾನ, ಧ್ಯಾನ (ನಿನ್ನ ರೂಪಭಾವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟೆವಟ್ಟು: **ಚಂದ್ರಪ್ರಪು,** ೮. ೮೩); ಗೌರವ (ಜಿನನ ನಮಸ್ಕಾರಮಂತ್ರಂಗಳೊಳ್ ಭಾವನೆಯಂ ತಾಳ್ದಟ್ತಿಯಿಂದಂ ಜಿನಮಹಿಮೆಗಳಂ ಮಾಡು ನೀಂ ಭವ್ಯನೈ: **ಆದಿಪು,** ೩. ೭)

**ಭಾವಪರಿವರ್ತನ** – ಸಂಸಾರದಲ್ಲಿ ಪರಿಭ್ರಮಣ ಮಾಡುವ ಜೀವಗಳಿಗೆ ಉಂಟಾಗುವುದೆಂದು ಹೇಳಲಾಗುವ ದ್ರವ್ಯ, ಕ್ಷೇತ್ರ, ಕಾಲ, ಭವ ಮತ್ತು ಭಾವಗಳೆಂಬ ಐದು ರೀತಿಯ ಪರಿವರ್ತನೆಗಳಲ್ಲಿ ಒಂದು (ಮೂಲೋತ್ತರಪ್ರಕೃತಿಗಳೊಳ್ ಸರ್ವಜಘನ್ಯಸ್ಥಿತಿಯಂ ಮೊದಲ್ಕಟ್ಟಿತತ್ಸಾದೃಶಸಂಪರಾಯವ್ಯವಸ್ಥಾನುಯೋಗದಿಂ ಪ್ರಪ್ರದೇಶಾನುಭಾಗ ಬಂಧಸ್ಥಾನಂಗಳೊಳಗಲಿಸಿ ಸಮುಯೋತ್ತರಾನು

ಕ್ರಮದಿನುತ್ಕೃಷ್ಟಸ್ಥಿತಿವರಂ ಪರಿವಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನಮೆಂಬುದು **ಸುಕುಮಾಚ,** ೬. ೬ ವ)

**ಭಾವಶುದ್ಧಿ** – ವೀತರಾಗನಾದವನಿಗೆ ಮನಸ್ಸು ಶುದ್ಧವಾಗುವುದು; ಇದು ಅಷ್ಟಶುದ್ಧಿಗಳಲ್ಲಿ ಒಂದು (ಭಾವಶುದ್ಧಿ ವಿಶೇಷದಿಂದಮನಿಂದಿತೆಯುಮಾರ್ಯನಾಗೆ ಸತ್ಯಭಾಮೆ ತದಾರ್ಯೆಯಾದಳ್: **ಶಾಂತಿಪು,** ೬. ೧೨೪ ವ)

**ಭಾವಸಂಸಾರ** – ಪಂಚಸಂಸಾರಗಳಲ್ಲಿ ಒಂದು, ಭವಪರಿವರ್ತನದಲ್ಲಿ ಜೀವಗಳಿಗೆ ಉಂಟಾಗುವ ಪರಿವರ್ತನೆಗಳಲ್ಲಿ ಒಂದು (ಜ್ಞಾನಾವರಣೀಯದ ಜಘನ್ಯ ಸ್ಥಿತಿಯುಮಂ ಜಘನ್ಯಕಷಾಯಾಧ್ಯವಸಾಯ ಸ್ಥಾನಮುಮಂ ಜಘನ್ಯಯೋಗದಿಂ ಕಟ್ಟಿದೊಡದೊಂದು ಭಾವಸಂಸಾರಂ: **ಚಾವುಂಡಜಯ,** ಪು. ೨೩೩)

**ಭಾವಿ** – ಕರ್ಮವಶದಿಂದ ಆಗಲೇಬೇಕಾದುದು (ಭಾವಿಯೆನಿಸಿರ್ದ ಭೋಗ ದೊಳಾವುದು ನಿಶ್ಚಯಮತೀತಮದತೀತಮೆನಲ್: **ಚಂದ್ರಪ್ರಪು,** ೨. ೩೬)

**ಭಾವಿತಾತ್ಮ** – ಪರಿಪಕ್ವ ಮನಸ್ಸಿನವನು, ಆತ್ಮಜ್ಞಾನಿ (ದೃಢಚಿತ್ತನಾಗಿ ಭಾವಿಸಿದನೊ ಭಾವಿತಾತ್ಮನೆನೆ ಷೋಡಶಭಾವನೆಯಿಂ ಮುನೀಶ್ವರಂ: **ಮಲ್ಲಿನಾಪು,** ೧೧. ೩೫)

**ಭಾಳಾಕ್ಷಿ** – [ಫಾಲಾಕ್ಷಿ] ಹಣೆಯಲ್ಲಿ ಕಣ್ಣುಳ್ಳವಳು, ಜ್ವಾಲಾಮಾಲಿನಿ ಎಂಬ ಯಕ್ಷಿ (ಚಳತ್ ಭಾಳಾಕ್ಷಿ ಸಂಪ್ರೀತಿಯಿಂ ಜ್ವಾಳಾಮಾಲಿನಿ ಮಾಟ್ಕೆ ಮತ್ಕೃತಿಗೆ ನಿರ್ವಿಘ್ನೋಕ್ತಿನಿವಾಹಮಂ: **ಚಂದ್ರಪ್ರಪು,** ೧. ೯)

**ಭಿಕ್ಷಾಶುದ್ಧಿ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳಲ್ಲಿ ಒಂದು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾ ಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ಭಿಕ್ಷುಕ** – ಜೈನಯತಿ, ಶ್ರಮಣ (ತದಾಶ್ರಮಿಯಪ್ಪ ಲೋಹಿತಾಶ್ವನೆಂಬ ಭಿಕ್ಷುಕಂ ಬಂದು ಚಾರುದತ್ತಂ ಸಮಕ್ಷಮದೊಳಿರ್ದೆತ್ತಣಿಂ ಬಂದಿರೆತ್ತ ಪೋದಪಿರ್ ಎಂಬುದುಂ: **ಕರ್ಣನೇಮಿ,** ೪. ೮೪ ವ)

**ಭೂತಚತುಷ್ಕ** – ಪೃಥ್ವಿ, ಅಪ್ಪು, ತೇಜಸ್, ವಾಯು ಎಂಬ ಮೂಲವಸ್ತುಗಳು (ಅಂಗ ಅಂಗದೊಳೆಲ್ಲಂ ತೀವಿರ್ಪಂ ಭೂಚತುಷ್ಕ ಅವಯವದಿಂ ಅನ್ಯಂ ಆತ್ಮಂ ಅತಿಚೈತನ್ಯಂ: **ಯಶೋಧಚ,** ೪. ೧೭)

**ಭೂತಚತುಷ್ಟಯ** – ಭೂತಚತುಷ್ಕ (ಈ ನಿಮ್ಮ ಜಿನಮತದಜೀವಸಂಭಾವನೆಯೊಳ್ ಪೃಥೀವ್ಯಪ್ತೇಜೋವಾತಾಭಿಧಾನ ಭೂತಚತುಷ್ಟಯದಿಂದಂ ಬೇಱೆ ಜೀವತ್ವಗ್ರಾಹಕಪ್ರಮಾಣಮಿಲ್ಲಂ: **ಶಾಂತಿಪು,** ೮. ೧೨೮ ವ)

**ಭೂತವಾದಿ** – ಭೂಮಿ ನೀರು ಬೆಳಕು ಮತ್ತು ಗಾಳಿಗಳ ಸಂಯೋಗದಿಂದ ಉಂಟಾಗುವ ಚೈತನ್ಯವನ್ನೇ ಜೀವವೆಂದು ವಾದಿಸುವವನು, ನಿರೀಶ್ವರವಾದಿ (ಅನೇಕ ಯುಕ್ತ್ಯೋಕ್ತಿಗಳಿಂ ಭೂತವಾದಿಯಪ್ಪ ಮಹಾಮತಮಂ ನಿರಾಕರಿಸಿ: **ಆದಿಪು,** ೨. ೧೦ ವ)

**ಭೂಷಣಾಂಗ** – ಒಂದು ಕಲ್ಪವೃಕ್ಷ, ಆಭರಣಗಳನ್ನು ನೀಡುವಂಥದು (ಭಾಜನಾಂಗದ ವಸ್ತ್ರಾಂಗದ ಭೂಷಣಾಂಗದ ಅಳವಂ ಚಕ್ರೇಶ್ವರಂ **ತಾಳ್ದಿದಂ: ಆದಿಪು,** ೪. ೩೫), ನೋಡಿ, **'ಅಂಗಕಲ್ಪಕುಜ'**

**ಭೈಕ್ಷಾಸಿದ್ಧಿ** – ಸಂಯಮರಕ್ಷಣೆಗಾಗಿ ಮುನಿಗಳಿಗೆ ಹೇಳಿರುವ ಎಂಟು ಪ್ರಕಾರದ ಶುದ್ಧಿಗಳಲ್ಲಿ ಒಂದು, (ಪ್ರಾಸುಕಾಹಾರಗವೇಷಣ ಪ್ರಣಿಧಾನಪರಾಯಣಮುಮಪ್ಪ ಭೈಕ್ಷಾಸಿದ್ಧಿಯೊಳು ... ಚರ್ಯಾಮಾರ್ಗದಿನಯೋಧ್ಯಾಪುರಮಂ ಪೊಕ್ಕು: **ಅಜಿತಪು,** ೭. ೧ ವ)

**ಭೈಷಜ್ಯದಾನ** – ಆಹಾರದಾನ, ಅಭಯದಾನ, ಶಾಸ್ತ್ರದಾನ ಮತ್ತು ಭೈಷಜ್ಯದಾನಗಳೆಂಬ ನಾಲ್ಕು ಬಗೆಯ ದಾನಗಳಲ್ಲಿ ಒಂದು, ರೋಗಿಗಳಿಗೆ ಔಷಧವನ್ನು ನೀಡುವುದು (ಫಲಮಿನ್ನೌಷಧದಾನದ ಫಲದಿಂ ತೀರ್ಥಕರನಪ್ಪ ಪುಣ್ಯಂ ಬೇಗಂ ಫಲಿಯಿಸಿತು ವಿಷ್ಣುಗದಜೆಂದಲಸದೆ ಭೈಷಜ್ಯದಾನಮಂ ಮಾಳ್ಕೆಜೀವಂ: **ಧರ್ಮಾಮೃತ,** ೪. ೪೧)

**ಭೋಗತೃಷ್ಣೆ** – ಭೋಗಾಕಾಂಕ್ಷೆ (ಅಂತಪಗತಗುರುಶೋಕವೇಗನಾಗಿ ಗಣಧರಚರಣ ಸರಸಿಜಂಗಳ್ಗೆಱಗಿ ತನ್ನ ಭೋಗತೃಷ್ಣೆಯಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ: **ಆದಿಪು,** ೧೬. ೬೦ ವ)

**ಭೋಗಬ್ರಹ್ಮವ್ರತ** – ಒಂದು ಬಗೆಯ ವ್ರತ, ಬ್ರಹ್ಮಚರ್ಯದಲ್ಲಿದ್ದಾಗ ಮೂಗು ಕಿವಿ ಕಣ್ಣು ಎಂಬ ಭೋಗೇಂದ್ರಿಯಗಳಿಂದ ಗಂಧ ರೂಪ ಶಬ್ದಗಳ ಅನುಭವವನ್ನು ಮಾತ್ರ ಮಾಡತಕ್ಕದ್ದು, ಗೃಹಸ್ಥಾಶ್ರಮಕ್ಕೆ ಬಂದ ಮೇಲೆ ಕಾಮಬ್ರಹ್ಮವ್ರತ ಅಂದರೆ ರಸ ಸ್ಪರ್ಶ ಇವುಗಳನ್ನು ಅನುಭವಿಸತಕ್ಕದ್ದು (ಭೋಗಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನುತ್ತರಕ್ರಿಯೆಯರ್ಪಿನೆಗಂ ನಡಯಿಸುವುದು ವ್ರತಾವತರಣಕ್ರಿಯೆ: **ಚಾವುಂಡಜಯ,** ಪು. ೧೮೨)

**ಭೋಗಭೂಮಿ** – ಭೂಮಿಯ ಮೇಲೆ ಪುಣ್ಯವಂತರು ಹುಟ್ಟುವ ಪ್ರದೇಶ, ಅತ್ಯಂತ ಸಂತೋಷವನ್ನು ಪಡೆಯುವ ಪ್ರದೇಶ (ಈ ಭರತಾವನಿ ಭೋಗಭೂಮಿ ಭೂಭಾಗಿ ಸುಖಾಪ್ತಿಯಂ ಪಡೆದುದು: **ಶಾಂತಿಪು,** ೧೨. ೨೪)

**ಭೋಗಾಂತರಾಯ** – ಭೋಗದಲ್ಲಿ ವಿಘ್ನವನ್ನುಂಟುಮಾಡುವ ಕರ್ಮ (ಆ ಮಹಾಭಾಗ್ಯೆಗೆ ಭೋಗಾಂತರಾಯಮನುಂಟುಮಾಡಿದ ನೋವುಂ ಮಕ್ಕಳ್ ಪಡೆಯದ ನೋವುಂ ಅಟಲಂ ಒದವಿಸೆ: **ನೇಮಿನಾಪು,** ೧. ೯೨ ವ)

**ಭೋಗಾಭೋಗ** – ಭೋಗಸಾಮಗ್ರಿಗಳಿಂದ ಸಿಕ್ಕುವ ಸುಖ (ವಿದ್ಯುತ್ ಕ್ಷಣಿಕಂ ನಿಟ್ಟಿಯೆ ತನುಭೃದ್ಗಣ ಯೌವನ ರೂಪ ವಿಭವ ಭೋಗಾಭೋಗಂ: **ಆದಿಪು,** ೪. ೭೫)

**ಭೋಜನಾಂಗ** – ಬಯಸಿದ ಆಹಾರ ನೀಡುವ ಕಲ್ಪವೃಕ್ಷ, (ಅಮೃತಾನ್ನಮನೊಲ್ದೀಗುಂ ಆಗಳುಂ ಭೋಜನಾಂಗ ಕಲ್ಪಾವನಿಜಂ: ಆದಿಪು, ೫. ೩೯), ನೋಡಿ **'ಅಂಗಕಲ್ಪಕುಜ'**

**ಭೌಮ** – ಅಷ್ಟಾಂಗಮಹಾನಿಮಿತ್ತದ ಒಂದು ಅಂಗ, (ಭೌಮಮೆಂಬುದು ಘನತ್ವ ಶೀತ ಸ್ನಿಗ್ಧ ರೂಕ್ಷಾದಿ ವಿಭಾವನೆಯಿಂದಂ ಮೇಣ್ ಪೂರ್ವಾದಿ ದಿಕ್ಸೂತ್ರ ನಿವಾಸದಿಂದಂ ಹಾನಿವೃದ್ಧಿ ಜಯಾಪಜಯಾದಿ ವಿಜ್ಞಾನಮಂ ನೆಲದೊಳಿರ್ದ ಸುವರ್ಣ ರಜತಾದಿಗಳಂ ಸೂಚಿಸುವುದು: **ಚಾವುಂಡಜಯ,** ಪು. ೧೫೪)

**ಭೌಮಾಷ್ಟಮಿ** – ಮಹಾನವಮಿಯ ಹಿಂದಿನ ದಿನ, ಅಂದರೆ ಆಶ್ವಯುಜ ಶುಕ್ಲ ಅಷ್ಟಮಿ (ಚಂಡಿಕೆಯ ಪೂಜೆಗೆಟ್ಟಿಂದಂ ನಾನಾ ವಿಧದರ್ಚನೆಯಿಂ ಮಾನೋಮಿಯ ಮುಂದೆ ಬಂದ ಭೌಮಾಷ್ಟಮಿಯೊಳ್: **ಯಶೋಧಚ,** ೩. ೨೩); ನೋಡಿ, **'ಜೀವದಯಾಷ್ಟಮಿ'**

**ಭ್ರಾಮರಿ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚಿನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

# ಮ

**ಮಂತ್ರಶಕ್ತಿ** – ನಯಶಾಸ್ತ್ರದ ಒಂದು ವಿಭಾಗ, ಇದರಲ್ಲಿ ಉತ್ಸಾಹ, ಮಂತ್ರಿ ಮತ್ತು ಪ್ರಭು ಎಂದು ಮೂರು ಬಗೆ, ವಿವಿಧ ವಿಷಯಗಳ ಬಗೆಗಿನ ವಿವೇಚನೆ (ಶಕ್ತಿಯೆಂಬುದುತ್ಸಾಹ ಮಂತ್ರಿ ಪ್ರಭುವಿಕಲ್ಪದಿಂ ತ್ರಿವಿಧಮಕ್ಕುಂ; ಅಲ್ಲಿ ವಿಕ್ರಮಬಳಮುತ್ಸಾಹಶಕ್ತಿ, ವಿವಿಧ ವಸ್ತುವಿಚಾರಣಾಸಾಮರ್ಥ್ಯಂ ಮಂತ್ರಶಕ್ತಿ, ಕೋಶದಂಡ ಸ್ವೀಕರಣಂ ಪ್ರಭುಶಕ್ತಿಯಕ್ಕುಂ: **ಚಾವುಂಡಜಯ,** ಪು. ೨೫೬)

**ಮಂದರ** – ದೇವತೆಗಳು ತೀರ್ಥಂಕರರಿಗೆ ಪಂಚಕಲ್ಯಾಣಗಳನ್ನು ನೆರವೇರಿಸುವ ಸ್ಥಳವಾದ ಪರ್ವತ, ಮೇರು (ಮೂಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ: **ಆದಿಪು,** ೧. ೫೦)

**ಮಂದರಾದ್ರಿ** – ಮಂದರಪರ್ವತ (ಕೊಡಂಬೆರಸು ಆಳಿಗಟ್ಟಿ ಭೋರ್ ಭೋರೆನೆ ಪೋಪ ಬರ್ಪ ಅಮರಸಂಹತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ: **ಶಾಂತಿಪು,** ೧೦. ೪೫)

**ಮಂದರಾದ್ರೀಂದ್ರಾಭಿಷೇಕ** – ಒಂದು ಗರ್ಭಾನ್ವಯಕ್ರಿಯೆ, ಮಂದರಪರ್ವತದಲ್ಲಿ ಮಾಡುವ ಜಿನಶಿಶುವಿನ ಅಭಿಷೇಕ (ಮಂದರಾದ್ರೀಂದ್ರಾಭಿಷೇಕ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಮಂದರಾಭಿಷೇಕಕ್ರಿಯೆ** – ಸುರರು ಅಭಿಷೇಕ ಮಾಡುವುದು (ಮಂದರಾಗ್ರದೊಳ್ ದುಗ್ಧಾಬ್ಧಿಜಲದಿಂ ಸುರೇಂದ್ರರಭಿಷೇಕಂಗೆಯ್ವುದು ಮಂದರಾಭಿಷೇಕಕ್ರಿಯೆ: **ಚಾವುಂಡಜಯ,** ಪು. ೧೮೫)

**ಮಂದಾರ** – ಮಂದರ ಪರ್ವತ (ಆ ಮಂದಾರದ ಪೂರ್ವಾಪರ ದಿಗ್ವಿಭಾಗಂಗಳೊಳ್ ವಿದೇಹಂಗಳಿರ್ದುವು: **ಆದಿಪು,** ೧. ೫೦ ವ)

**ಮಣಿರತ್ನ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದು. ಶ್ರೀಗೃಹದಲ್ಲಿ ಹುಟ್ಟಿದ್ದು (ಎರಡಜೆಯೊಳಂ ಚಂದ್ರಾದಿತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ ಸ್ಫುರಿತಮಣಿರತ್ನದೊಳಂ: **ಆದಿಪು,** ೧೩. ೪೯)

**ಮತಿಜ್ಞಾನ** – ಮತಿ ಶ್ರುತ ಅವಧಿ ಮನಃಪರ್ಯಾಯ ಮತ್ತು ಕೇವಲ ಎಂಬ ಐದು ವಿಧವಾದ ಜ್ಞಾನಗಳಲ್ಲಿ ಒಂದು. ಇಂದ್ರಿಯಗಳ ಮೂಲಕ ಅಥವಾ ಮನಸ್ಸಿನ ಮೂಲಕ ವರ್ತಮಾನಕಾಲದ ಪದಾರ್ಥಗಳನ್ನು ತಿಳಿಯುವುದು. ಇದರಲ್ಲಿ ಒಟ್ಟು ಮುನ್ನೂರ ಮೂವತ್ತಾರು ಭೇದಗಳು (ಈಯೊಂದೆ ಮತಿಜ್ಞಾನಕ್ಕಾಯ ತಿವೆತ್ತೊಂದಿ ತೋಱುಗುಂ ತತ್ತ್ವಾಭಿಪ್ರಾಯದವಗ್ರಹಮೀಹೆಯವಾಯಂ ಧಾರಣಮೆನಿಪ್ಪ ನಾಲ್ಕುಂ ಭೇದಂ: ಮತ್ತಮದು ಬಹುಬಹುವಿಧಂ ಕ್ಷಿಪ್ರಮನಿಶ್ಶ್ರಿತಮನುಕ್ತಂ ಧ್ರುವಮೆಂದಾಱು ತದಿತರಂಗಳಿಂತು ಪ್ರತ್ಯೇಕಂ ಪನ್ನೆರಡು ಭೇದಮಕ್ಕುಂ: ಅಲ್ಲಿಯವಗ್ರಹಮರ್ಥಾವಗ್ರಹಂ ವ್ಯಂಜನಾವಗ್ರಹಮೆಂದಿರ್ತೆಱಂ ಚಕ್ಷುರಿಂದ್ರಿಯಕ್ಕಂ ಮನಕ್ಕಮರ್ಥಾವಗ್ರಹಮಲ್ಲದೆ ವ್ಯಂಜನಾವಗ್ರಹಮಿಲ್ಲ: ಇಂತು ಸ್ಪರ್ಶನರಸನಘ್ರಾಣಶ್ರೋತ್ರೇಂದ್ರಿಯಂಗಳೆಂಬ ನಾಲ್ಕುಮೊಂದೊಂದರ್ಕೆಱುವತ್ತು ತೆಱಂ ಚಕ್ಷುರಿಂದ್ರಿಯಂ ನಾಲ್ವತ್ತೆಂಟು ತೆಱಂ ಮನಮುಮನಿತೆ ತೆಱಂ: ಇಂತು ಮತಿಜ್ಞಾನಂ ಮುನ್ನೂಱುಮೂವತ್ತಾಱು ಭೇದಮಕ್ಕುಂ: **ಚಂದ್ರಪ್ರಪು,** ೧೪. ೪೧ ಹಾಗೂ ಮುಂದಿನ ವ)

**ಮತ್ಯಜ್ಞಾನ** – ಅಜ್ಞಾನತ್ರಿತಯಗಳಲ್ಲಿ ಒಂದು (ಮತ್ಯಜ್ಞಾನಂ ಶ್ರುತಜ್ಞಾನಂ ವಿಭಂಗಜ್ಞಾನಮುಮೆಂಬ ಅಜ್ಞಾನತ್ರಿತಯಮುಂ: **ಸುಕುಮಾಚ,** ೮. ೪ ವ)

**ಮದ್ಯಾಂಗ** – ಭೋಗಭೂಮಿಯಲ್ಲಿರುವ ಹತ್ತು ಕಲ್ಪಕುಜಗಳಲ್ಲಿ ಒಂದು. ಮದ್ಯ ನೀಡುವಂಥದು (ಮಧುಗಳನೆಡೆಯುಡುಗದೆ ಕುಡುಗುಂ ಉಚಿತ ಮದ್ಯಾಂಗಕುಜಂ: **ಆದಿಪು,** ೫. ೩೨)

**ಮಧ್ಯಮಪಾತ್ರ** – ದಾನಸ್ವೀಕರಿಸುವವರಲ್ಲಿನ ಒಂದು ಬಗೆ. ಸಮ್ಯಗ್ದರ್ಶನಶುದ್ಧನೂ ಅಣುವ್ರತಧಾರಿಯೂ ಆದವನು (ಶ್ರೀಸಮ್ಯಗ್ದರ್ಶನವಿಶುದ್ಧನುಂ ಅಣುವ್ರತಧಾರಿಯುಮಪ್ಪ ಶ್ರಾವಕಂ ಮಧ್ಯಮಪಾತ್ರಂ: **ಆದಿಪು,** ೧೦. ೯ ವ)

**ಮನಃಪರ್ಯಾಯ** – ಮನಃಪರ್ಯಾಯಜ್ಞಾನ. ಮತಿ ಶ್ರುತ ಅವಧಿ ಮನಃಪರ್ಯಾಯ ಮತ್ತು ಕೇವಲ ಎಂಬ ಪಂಚವಿಧಜ್ಞಾನದಲ್ಲಿ ನಾಲ್ಕನೆಯದು. ಬೇರೆಯವರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಜ್ಞಾನ (ನೆಗಳ್ದುದು ದೀಕ್ಷಾನಂತರಂ ಅಗಣಿತಮಹೋದಯಂ ಮನಃಪರ್ಯಯಂ ಅಂತೊಗೆದಾ ಚತುರ್ಜ್ಞಾನ ದೊಳಾವಗಮೆಸೆದಂ ಜ್ಞಾನರೂಪನಾದಿಬ್ರಹ್ಮಂ: **ಆದಿಪು,** ೯. ೭೭)

**ಮನಃಪರ್ಯಾಯಜ್ಞಾನ** – ಐದು ವಿಧವಾದ ಜ್ಞಾನಗಳಲ್ಲಿ ಒಂದು; ಇತರರ ಅಂತರಂಗವನ್ನು ತಿಳಿಯುವುದು (ತ್ರಿರಾತ್ರಂ ದೀಕ್ಷೋಪವಾಸಂಗೆಯ್ದು ಲಬ್ಧಸಪ್ತರ್ಧಿಭೂಷಣಂ ಮನಃಪರ್ಯಾಯಜ್ಞಾನ ಪ್ರತಿಬಿಂಬದರ್ಪಣನಾಗಿ: **ಶಾಂತಿಪು,** ೧೧. ೧೦೬ ವ); ನೋಡಿ, **'ಜ್ಞಾನ'**

**ಮನಃಪರ್ಯಾಯಜ್ಞಾನಿ** – ಮನಃಪರ್ಯಾಯಜ್ಞಾನವುಳ್ಳವನು (ಪನ್ನಿರ್ಛಾಸಿರದೇೞ್ನೂರ್ರೈವ ದಿಂಬರ್ ಮನಃಪರ್ಯಾಯ ಜ್ಞಾನಿಗಳುಂ ಅನಿಬರೆ ವಾದಿಗಳುಂ: **ಆದಿಪು,** ೧೬. ೪೦ ವ)

**ಮನಃಪ್ರವೀಚರಣ** – ಮನಸ್ಸಿನಲ್ಲಿ ಇಂದ್ರಿಯ ಸುಖಾನುಭವ (ಕೂಡಿಸದ ಕೂಟದ ಸಂತಸಮೆಂಬಿವೆಲ್ಲಮಾರಯ್ಯೆ ಮನಃಪ್ರವೀಚರಣದಿಂ ಸಮಸಂದು: **ಚಂದ್ರಪ್ರಪು,** ೯. ೫೬)

**ಮನಃಪ್ರವೀಚಾರ** – ಮನಃಪ್ರವೀಚರಣ (ಮಾದೇವಿಯರೆಣ್ಬರ್ ಮದನೋದಯಮಂ ಕುಡೆ ಮನಃಪ್ರವೀಚಾರದೊಳಂತಾ ದೇವಂ ಸಂಚಿತಪುಣ್ಯೋದಯದಿಂದನಿತು ಮಹಿಮೆಯಂ ಕೈಕೊಂಡಂ: **ಆದಿಪು,** ೬. ೧೪)

**ಮನು** – ಮನುಷ್ಯಕುಲ ಮಾರ್ಗದರ್ಶಕರಾದ ಹದಿನಾರು ಮಂದಿ ಕುಲಧರರು. ಮನುಗಳು ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತ್, ನಾಭಿರಾಜ, ಋಷಭದೇವ ಮತ್ತು ಭರತ (ಮನ್ವಂತರಾತಿಕ್ರಮದೊಳ್ ಪದಿನಾಲ್ಕನೆಯ ಮನು ಪುಟ್ಟಿದಂ: **ಆದಿಪು,** ೬. ೬೫ ವ); ಪ್ರಜೆಗಳ ಜೀವನೋಪಾಯದ ಬಗ್ಗೆ ಚಿಂತಿಸಿದವನು, ಆದಿತೀರ್ಥಂಕರ (ಪ್ರಜಾಜೀವನೋಪಾಯಮನನದಿಂದೆ ಮನುವುಂ ನಿಜಕುಲೋದ್ಧರಣದಿಂ ಕುಲಧರನುಂ: **ಆದಿಪು,** ೮. ೭೫ ವ)

**ಮನುಜಗತಿ** – ಮನುಷ್ಯ ಜನ್ಮ; ಚತುರ್ಗತಿಗಳಲ್ಲಿ ಒಂದು (ಮನುಜಗತಿ ಗತಿಗಳೊಳ್ ಪಾವನಂ: **ಪಂಪರಾ,** ೧೬. ೪೪), ನೋಡಿ **'ಚತುರ್ಗತಿ'**

**ಮನುಷ್ಯಜೀವ** – ಮನುಷ್ಯರು ಇರುವ ಲೋಕದ ಬಗೆಬಗೆಯ ರೀತಿಗಳು (ಮನುಷ್ಯಜೀವಂ ಭೋಗಭೂಮಿ ಕರ್ಮಭೂಮಿ ಸಮುದ್ಭವಭೇದದಿಂ ದ್ವಿವಿಧಮಕ್ಕುಂ; ಭೋಗಭೂಮಿಯುಂ ದೇವಕುರೂತ್ತರಕುರ್ವಾದಿ ಭೇದದಿಂ ಮೂವತ್ತು ತೆಱನಕ್ಕು ಮುತ್ತಮದುತ್ತಮ ಮಧ್ಯಮ ಜಘನ್ಯಭೂಮಿ ಭೇದದಿಂ ಮೂದೆಱನಾಗಿ ತೋರ್ಕು ... ಕರ್ಮಭೂಮಿಗಳ್ ಭರತಾದಿ ಭೇದದಿಂ ಪದಿನೈದು ಪರಿಯಕ್ಕುಂ ತದ್ದ್ವಿವಿಧವರಾರ್ಯಮ್ಲೇಚ್ಛ ಪ್ರಭೇದದಿಂ ದ್ವಿವಿಧರಪ್ಪರ್ ... ವ್ಯವಸಾಯಂ ಗಱಕತ್ತಂ ವ್ಯವಹಾರಂ ವಿದ್ಯೆ ಶಿಲ್ಪಸೇವನಮುಂ ಸಂಭವಿಸುವ ಷಟ್ಕರ್ಮದಿಂದವೆ ಷಡ್ವಿಧಮಕ್ಕುಂ: **ಧರ್ಮಾಬಾಮ,** ೧೬. ೨೬೮ ವ, ೨೬೯ ವ ಮತ್ತು ೨೭೦)

**ಮರುತ್ತ್ರಿಕ** – ಮೂರು ಬಗೆಯ ವಾಯುಗಳು (ಅದು ಅನಾದಿ ಅನಿಧನಯುತಂ ಅದು ಅಕೃತ್ರಿಮಮಂ ಅದು ಮರುತ್ತ್ರಿಕಾವೇಷ್ಟಿತಂ: **ಆದಿಪು,** ೧. ೪೪) ನೋಡಿ, **'ವಾಯುತ್ರಿತಯ'**

**ಮಲ್ಲಿನಾಥ** – ಹತ್ತೊಂಬತ್ತನೆಯ ತೀರ್ಥಂಕರ (ದಿವ್ಯಭಾಷಾವ್ಯಪಾರೋದಾರನಾದಂ ಕೊಡುಗೆಮಗೆ ಸುಖಾವಾಪ್ತಿಯಂ ಮಲ್ಲಿನಾಥಂ: **ಮಲ್ಲಿನಾಪು,** ೧. ೧)

**ಮಹ** – ಸಕಲ ವಿನಯಜನಗಳು ಜಿನಾಭಿಷೇಕ ಸಮಯದಲ್ಲಿ ನಾನಾ ವಿಧವಾಗಿ ಮಾಡುವ ಅಭಿಷೇಕ ಪೂಜೆ (ಜಿನೇಂದ್ರ ಮಹಾಭಿಷೇಕದೊಳ್ ನಾಳಿಕೇರೇಕ್ಷುರಸಾಮ್ರರಸ ಘೃತಕ್ಷೀರದಧಿ ಕಷಾಯೋದಕ ಚತುಷ್ಕುಂಭದೊಳ್ ಗಂಧೋದಕಸವನಂ ತಂತಮ್ಮ ಚಿತ್ತಾನುಸಾರವೃತ್ತಿಯಿಂ ಸಕಲ ವಿನೇಯ ಜನಂಗಳ್ ಮಾಟ್ಪಿ ಮಹಮೆಂಬ ಪೂಜೆಯುಂ: **ಸುಕುಮಾಚ,** ೬. ೨೫ ವ)

**ಮಹತ್ತರದಿಕ್ಕುಮಾರಿಕೆ** – ರುಚಕಾಚಳದ ಕೂಟಗಳ ದಿಕ್ಕುಮಾರಿಕೆ (ಕೂಟತಳಂಗಳೊಳವನಲಂಕರಿಸಿರ್ಪ ವಿಜಯೆ ವೈಜಯಂತೆ ಜಯಂತೆಯಪರಾಜಿತೆಯಾನಂದೆ ನಂದೋತ್ತರೆ ನಂದೆ ನಂದನವರ್ಧನೆಯರೆಂಬ ಮಹತ್ತರದಿಕ್ಕುಮಾರಿಕೆಯೆಣ್ಬರುಂ: **ಶಾಂತಿಪು,** ೯. ೧೬೪ ವ)

**ಮಹತ್ತರದೇವಿ** – ಸಾಮಾನಿಕ ದೇವತೆ (ಚೆಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡವಟ್ಟು: **ಆದಿಪು,** ೨. ೬೭ ವ)

**ಮಹತ್ತರಿಕೆ** – ಮಹತ್ತರದೇವಿ (ವಿಕಟಕೂಟಾಧೀಶೆಯರಪ್ಪ ರುಚಿಕರುಚಕಾಸ್ಯೆ ರುಚಿಕಾಂತೆ ರುಚಿಕಪ್ರಭೆಯೆಂಬೀ ನಾಲ್ವರುಂ ದಿಕ್ಕುಮಾರಿಕಾ ಮಹತ್ತರಿಕೆಯರುಮಂ ... ಬೆಸೆಸುವುದಂ: **ಆದಿಪು,** ೭. ३ ವ)

**ಮಹರ್ಧಿಕದೇವ** – ಪ್ರಭಾವಶಾಲಿಯಾದ ದೇವ (ಬ್ರಹ್ಮಕಲ್ಪದೊಳ್ ಪತ್ತು ಸಾವಿರ ಸಾಗರೋಪಮಾಷ್ಯಕಮೊಡೆಯ ಮಹರ್ಧಿಕದೇವನಾಗಿ ಪುಟ್ಟಿದಳ್: **ಧರ್ಮಾಮೃತ,** ೪. ೧೬೦ ವ)

**ಮಹಾಜಾಳಿ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚಿನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

**ಮಹಾತಪ** – ಸಿಂಹ ನಿಷ್ಕ್ರೀಡಿತಾದಿ ಮಹಾತಪಗಳು (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಪ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ३)

**ಮಹಾತಮಃಪ್ರಭೆ** – ಏಳನೆಯ ನರಕ (ಅಲ್ಲಿಂದತ್ತಲೇಕರಜ್ಜ್ವಂತರದೊಳಷ್ಟಸಹಸ್ರ ಯೋಜನಬಾಹುಲ್ಯದಿಂ ಮಹಾತಮಃಪ್ರಭೆಯೆಂಬೇೞನೆಯ ನರಕಮಿರ್ಕುಂ: **ಸುಕುಮಾಚ,** ೧೧. ೪೧ ವ)

**ಮಹಾನಿಲ** – ಭೂಲೋಕವನ್ನು ಆವರಿಸಿರುವ ವಾಯು (ಎಂಟುಂ ಪೊಡವಿಗಳಂ ತಾಳ್ದದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ: **ಶಾಂತಿಪು,** ೧೨. ೫೧)

**ಮಹಾಪುರಾಣ** – ತ್ರಿಷಷ್ಠಿಶಲಾಕಾ ಪುರುಷರನ್ನು ಕುರಿತ, ಜಿನಸೇನರು ಮತ್ತು ಗುಣಭದ್ರರಿಂದ ಸಂಸ್ಕೃತದಲ್ಲಿ ರಚಿತವಾದ ಪುರಾಣ (ಜಿನರ್ಗಂ ತ್ರಿಕಾಲಯೋಗಂ ಜಿನರ್ಗಂ ಸ್ವಾಧ್ಯಾಯಂ ಅಯ್ದುಮಾಸಮಿತಿಗಳುಂ ಜಿನರ್ಗಮೊಳವು ಉಳ್ಳೊಡಂ ನೆಱೆಯೆ ನೋಡಿ ನಂಬುಗೆ ಮಹಾಪುರಾಣದೊಳ್ ಬುಧರ್: **ಅಜಿತಪು,** ೧೨. ३೦)

**ಮಹಾಪೂಜೆ** – ವ್ರತಸಮಾಪ್ತಿಯಂತಹ ವಿಶೇಷಪ್ರಸಂಗಗಳಲ್ಲಿ ಅತ್ಯಂತಸಂಭ್ರಮದಿಂದ ಮಾಡುವ ಪೂಜೆ (ಮಹಾಮಹಮೆಂಬ ಮಹಾಪೂಜೆಯುಂ ಮಹಾ ವಿಭೂತಿಯಿಂ ಪದಿನಾಲ್ಕು ದಿವಸಂಬರಂ ನಿರಂತರಂ ಮಾಡೆ: **ಆದಿಪು,** ೧೬. ೨೩ ವ)

**ಮಹಾಪ್ರಾತಿಹಾರ್ಯ** – ಜಿನನಿಗೆ ಒದಗುವ ಅಶೋಕ ವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಃಷಷ್ಟಿ, ರತ್ನಜಡಿತ ಸುವರ್ಣಪೀಠ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ ಎಂಬ ಎಂಟು ಮಂಗಳ ಲಾಂಛನಗಳು (ಸಕಳ ಶ್ರಾವಕವ್ರತಂಗಳಂ ಷೋಡಶ ತೀರ್ಥಕರಭಾವನೆಗಳಂ ಚತುಸ್ತ್ರಿಂಶದತಿಶಯಂಗಳುಮಂ ಅಷ್ಟಮಹಾ ಪ್ರಾತಿಹಾರ್ಯಂಗಳುಮಂ: **ಆದಿಪು,** ३. ४೦ ವ)

**ಮಹಾಮಹ** – ಮಹಾರಾಜನು ಚತುರ್ಮುಖ ಮಂಟಪದಲ್ಲಿ ಮಾಡುವ ಕಲ್ಪದ್ರುಮ, ಚತುರ್ಮುಖ, ಸರ್ವತೋಭದ್ರ, ಐಂದ್ರಧ್ವಜ, ಅಷ್ಟಾಹ್ನಿಕ, ಬಲಿ, ಸವನ, ತ್ರಿಸಂಧ್ಯಾಸೇವೆ ಎಂಬ ಎಂಟು ಬಗೆಯ ಪೂಜೆಗಳು ಸೇರಿದ ಪೂಜೆ ಜಿನಪೂಜೆ (ಜಿನಭವನದೊಳ್ ಎಂಟು ದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯಂ ... ಮಾಡಿದಿಂಬೞಿಯಂ: **ಆದಿಪು,** ೨. ४೯ ವ); ಸೌಧರ್ಮೇಂದ್ರನು ಮಾಡುವ ಪೂಜೆ (ವರುಷವರುಷಾಂತರದೊಳಾಷಾಢ ಕಾರ್ತಿಕ ಫಾಲ್ಗುಣ ಮಾಸಂಗಳ ನಂದೀಶ್ವರಪರ್ವದಿನಂಗಳೊಳಂ ತೀರ್ಥಕರ ಪರಮದೇವರ್ಗೆ ಪಂಚ ಮಹಾಕಲ್ಯಾಣ ವಿಭೂತಿಗಳೊಳಂ ಸೌಧರ್ಮೇಂದ್ರಂ ಮಾಡ್ಪ ಮಹಾಮಹಮೆಂಬ ಪೂಜೆಯುಂ: **ಸುಕುಮಾಚ** ೬. ೨೫ ವ)

**ಮಹಾಮಹಿಮೆ** – ರಾಜರು ಮಾಡುವ ಮಹಾ ಜಿನಪೂಜೆ (ಸಮಸ್ತ ಧಾರ್ಮಿಕಜನಂಗಳಂ ಬರಿಸಿ ಸರ್ವತೋಭದ್ರಮೆಂಬ ಮಹಾಮಹಿಮೆಯಂ ಮಹೋತ್ಸವದಿಂದ ಎಂಟು ದಿವಸಂಬರಂ ಮಾಡಿ: **ಆದಿಪು,** ೧೬. ೬೨ ವ)

**ಮಹಾವೀರ** – ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ವರ್ಧಮಾನ (ಶ್ರೀ ವರ್ಧಮಾನ ಸನ್ಮತಿದೇವ ಮಹಾವೀರ ವೀರಮುಖ್ಯ ಸಮಸ್ತೋರ್ವೀನಿಳಯವಿನುತ ದಶಶತಪಾವನ ಮಂಗಳಂ ಜಿನಂ ತಳೆದೆಸದಂ: **ಆಚವರ್ಧ**, ೧೬. ३೦)

**ಮಹಾವ್ರತ** – ಮುನಿಗಳು ಪಾಲಿಸಬೇಕಾದ ಪಂಚವ್ರತಗಳ ಗರಿಷ್ಠ ಆಚರಣೆ; ಪಂಚಪಾಪಗಳನ್ನು ಮನಸ್ಸಿನಲ್ಲಿ ಮತ್ತು ಕೃತಿಯಲ್ಲಿ ಮಾಡದ, ಮಾಡಿಸದ ಹಾಗೂ ಅವುಗಳಿಗೆ ಒಪ್ಪಿಗೆ ನೀಡದ – ಹೀಗೆ ಒಂಬತ್ತು ಪ್ರಕಾರದ ಮುನಿಗಳ ವ್ರತ (ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚ ಮಹಾವ್ರತಂಗಳಂ ಏಜೆಸಿ: **ವಡ್ಡಾರಾ**, ಪು ೬, ಸಾ ३)

**ಮಹಾಶುಕ್ರ** – ದ್ವಾದಶಕಲ್ಪಗಳಲ್ಲಿ ಹತ್ತನೆಯದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ**, ಪು ೯೭, ಸಾ ೨೬); ನೋಡಿ, **'ದ್ವಾದಶಕಲ್ಪ'**

**ಮಹಿಮೆ** – ಅರ್ಧಮಂಡಳೇಶ್ವರರು ಮಾಡುವ ಪೂಜೆ (ಅರ್ಧಮಂಡಳಿಕರ್ಮಾಡ್ಪ ಮಹಿಮೆಯೆಂಬ ಪೂಜೆಯುಂ: **ಸುಕುಮಾಚ**, ೬. ೨೫ ವ): ಪೂಜೆ (ಜಿನನ ನಮಸ್ಕಾರಮತ್ರಂಗಳೊಳ್ ಭಾವನೆಯಂ ತಾಳ್ದಟ್ಟಿಯಿಂದಂ ಜಿನಮಹಿಮೆಗಳಂ ಮಾಡು: **ಆದಿಪು**, ३. ೭); ಮಟ್ಟ, ಅಂತಸ್ತು (ಪುರುಪರಮೇಶ್ವರನಿರೆ ಭರತನನೆಮ್ಮ ಮಹಿಮೆಗಂತದು ದೊರೆಯೇ: **ಆದಿಪು**, ೯. ೧೦೮)

**ಮಹೇಂದ್ರ** – ಮಹೇಂದ್ರಕಲ್ಪದಲ್ಲಿರುವ ಇಂದ್ರ (ಅನುದಿನಮೀ ಗತವೃಜಿನಂ ಜಿನೇಂದ್ರಪೂಜಾವಿಧಾನಮುಂ ಮಾಡಿ ಮಹೇಂದ್ರನುಮನೊಡನಿಜೆಸಿ ನಾಕಮಮಮಾಥನೆನಿಸಿದಂ: **ಶಾಂತಿಪು**, ೫. ೧೦೮)

**ಮಹೇಂದ್ರಕಲ್ಪ** – ಹದಿನಾರು ಸ್ವರ್ಗಗಳಲ್ಲಿ ನಾಲ್ಕನೆಯದು (ಪರಿತ್ಯಕ್ತಾಹಾರಶರೀರನೆಂ ಸಮಾಧಿವಡೆದು ಮಹೇಂದ್ರಕಲ್ಪದೊಳ್ ಸಪ್ತಸಾಗರೋಪಮಪ್ರಮಿತಜೀವಿತನೆಂ ಸಾಮಾನಿಕ ದೇವನಾಗಿ ಪುಟ್ಟಿದೆಂ: **ಆದಿಪು**, ३. ೫೦ ವ)

**ಮಹೇಂದ್ರಕಲ್ಪಜ** – ಮಹೇಂದ್ರಕಲ್ಪದಲ್ಲಿ ಹುಟ್ಟಿದವನು (ಕೃತ್ರಿಮಚೈತ್ಯಾಲಯಮಮಂ ಬಂದಿಸಲಾ ಮಹೇಂದ್ರಕಲ್ಪಜನುಂ ಮಹಾವಿಭೂತಿಯಿಂ ಬಂದು: **ಆದಿಪು**, ೨. ೧೯ ವ)

**ಮಱುಮೆಯ್** – ಮಱುಭವ (ಈ ಭವದಿಂದಮಾದ ವಾಸನೆ ಮಱುಮೆಯ್ಯುಮಕ್ಕುಂ ಅದಜೆಂದೆನಗಂ ಸಮಂತು ಮುನ್ನಿನ ಭವಮೀ ಭವಂ ಮಱುಭವಂ ಸಫಲಂ: **ಆದಿಪು**, ೪. ೫೨)

**ಮಾಧ್ಯಸ್ಥವೃತ್ತಿ** – ದುಷ್ಟರ ಬಗ್ಗೆ ವ್ರತಸ್ಥರು ಇರಿಸಿಕೊಳ್ಳಬೇಕಾದ ತಟಸ್ಥ ಭಾವನೆ (ಸಕಳಶರೀರಗುಣಾಧಿಕ ದುಃಖಾರ್ದಿತಾವಿನೀತರೊಳ್ ಮೈತ್ರಿಪ್ರಮೋದಕಾರುಣ್ಯ ಮಾಧ್ಯಸ್ಥವೃತ್ತಿಗಳಂ ಭಾವಿಸುತ್ತುಂ: **ಆದಿಪು**, ೯. ೧३೦ ವ)

**ಮಾನಕಷಾಯ** – ನಾಲ್ಕು ಮಾನಸಿಕ ದೋಷಗಳಲ್ಲಿ ಒಂದು (ಅಂತಃಕರಣ ದೊಳಿನಿಸಾನುಂ ನಿಂದುದೊಂದು ಮಾನಕಷಾಯಂ ಮುನಿಪತಿಗೆ ಪೋಗೆ ಪುಟ್ಟಿದುದನಂತವಸ್ತುಪ್ರಕಾಶಿ ಕೇವಳಬೋಧಂ: **ಆದಿಪು,** ೧೪. ೧೪೫); ನೋಡಿ, **'ಕಷಾಯ'**

**ಮಾನಸ್ತಂಭ** – ಸಮವಸರಣಮಂಟಪದ ನಡುವಣ ಕಂಬ (ರಾಜಚಿಹ್ನಂಗಳನಿರಿಸಿ ಧೂಳೀಶಾಳ ಮಾನಸ್ತಂಭಾಂಭಃಖಾತಿಕಾವಲ್ಲೀವನೋಪವನಪತಾಕಾವನಿ ಕಲ್ಪಭೂರುಹ: **ಆದಿಪು,** ೧೦. ೫೨ ವ)

**ಮಾನುಷೋತ್ತರಪರ್ವತ** – ಮಧ್ಯಮಲೋಕದ ಒಂದು ಪರ್ವತ, ಇದು ಪುಷ್ಕರದ್ವೀಪದ ನಟ್ಟನಡುವೆ ಗೋಲಾಕಾರವಾಗಿರುತ್ತದೆ; ಈ ಪರ್ವತವನ್ನು ದಾಟಿ ವಿದ್ಯಾಧರರು ಮತ್ತು ಋದ್ಧಿಮುನಿಪ್ರಾಪ್ತ ಮುನಿಗಳು ಹೋಗಲಾರರು; ಆದ್ದರಿಂದ ಇದಕ್ಕೆ ಮಾನುಷೋತ್ತರ ಎಂಬ ಹೆಸರು (ವಳಯಾಕೃತಿಯಾಗಿ ಬಳಸಿದ ಮಾನುಷೋತ್ತರ ಪರ್ವತಮನಿಳಿಸುವ ಜಾತರೂಪಮಯ ವಿಶಾಲವಳಯದೊಳಗೆ: **ಆದಿಪು,** ೧೦. ೩೩ ವ)

**ಮಾಯಾನಿದ್ರೆ** – ಮಂತ್ರಹಾಕಿ ಬರಿಸುವ ನಿದ್ದೆ, ಜಿನಶಿಶುವಿನ ಜನನ ಸಂದರ್ಭದಲ್ಲಿ ಸೌಧರ್ಮೇಂದ್ರನ ಸತಿಯು ಜಿನಮಾತೆಗೆ ಮಾಯಾನಿದ್ರೆ ಬರಿಸಿ ಜನ್ಮಾಭಿಷೇಕಕ್ಕೆ ಮಗುವನ್ನು ಹೊತ್ತೊಯ್ಯುತ್ತಾಳೆ (ಮಾಯಾನಿದ್ರೆಯನಿಂದ್ರನ ಜಾಯೆ ಜಿನಾಂಬಿಕೆಗೆ ಪಡೆದು ತಡೆಯದೆ ... ಮಾಯಾಶಿಶುವೊಂದನಿರಿಸಿ: **ಕರ್ಣನೇಮಿ,** ೮. ೧೧೪)

**ಮಾಯಾರ್ಭಕ** – ಜಿನಶಿಶು ಹುಟ್ಟಿದಾಗ ಅದಕ್ಕೆ ಜನ್ಮಾಭಿಷೇಕವನ್ನು ನೆರವೇರಿಸಲು ನಿಜವಾದ ಮಗುವನ್ನು ತೆಗೆದುಕೊಂಡು ಇಂದ್ರಾಣಿಯು ಜಿನಮಾತೆಯ ಬಳಿ ಇಡುವ ಕೃತಕ ಮಗು (ಐರಾದೇವಿಯ ಮುಂದೆ ಮಾಯಾರ್ಭಕನನಿರಿಸಿ ಜಿನಾರ್ಭಕನನೆತ್ತಿಕೊಂಡು ಬರೆ: **ಶಾಂತಿಪು,** ೧೦. ೯ ವ)

**ಮಾಯಾಶಲ್ಯ** – ವ್ರತಸ್ಥನಿಗೆ ಬರುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು (ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ: **ಧರ್ಮಾಮೃ,** ೫. ೮೮ ವ)

**ಮಾಯಾಶಿಶು** – ಅಭಿಷವನಕ್ಕಾಗಿ ಜಿನಶಿಶುವನ್ನು ಕೊಂಡೊಯ್ಯುವ ಮುನ್ನ ಶಚೀದೇವಿ ಜಿನಜನನಿಯ ಪಕ್ಕದಲ್ಲಿ ಮಲಗಿಸಿದ ತೋರಿಕೆಯ ಶಿಶು (ಅಖಿಳಭುವನ ಜನನಿಯನಾಗಳ್ ಮಱೆಯಿಸಿ ಮಾಯಾನಿದ್ರೆಯಿಂ ಉಱೆ ಮಾಯಾಶಿಶುವನಿರಿಸಿ ಮುಂದಂಬಿಕೆಯಾ: **ಆದಿಪು,** ೭. ೪೫)

**ಮಾರ್ಗಪ್ರಭಾವನೆ** – ಜಿನಧರ್ಮವನ್ನು ಹೊಳಪುಗೊಳಿಸುವುದು (ಸನ್ಮಾರ್ಗಪ್ರಕಾಶನದಿಂ ಮಾರ್ಗಪ್ರಭವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ: **ಆದಿಪು,** ೨. ೨೨ ವ); ಷೋಡಶಭಾವನೆಗಳಲ್ಲಿ ಒಂದು, ಜ್ಞಾನ ಉಪವಾಸ ಪೂಜೆ ದಾನ ಮೊದಲಾದವುಗಳಿಂದ ಸದ್ಧರ್ಮಪ್ರಕಾಶನ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ,

ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಮಾರ್ಗರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಮಾರ್ಗರುಚಿಯೆಂಬುದು ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗಲಕ್ಷಣಮಪ್ಪ ಮೋಕ್ಷಮಾರ್ಗಶ್ರವಣಾನಂತರಸಮುತ್ಪನ್ನ ಶ್ರದ್ಧಾನಂ: **ಚಾವುಂಡಜಯ,** ಪು. ೩೩೬)

**ಮಾರ್ದವ** – ಹತ್ತು ಕುಲಧರ್ಮಗಳಲ್ಲಿ ಒಂದು, ಮೃದುಮನಸ್ಸು ಹೊಂದುವುದು (ಎಂಬಿನಮುತ್ತಮಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ಮಾಲ್ಯ** – ಭೋಗಭೂಮಿಯ ಹತ್ತು ಕಲ್ಪವೃಕ್ಷಗಳಲ್ಲಿ ಒಂದು, ಹೂಮಾಲೆಗಳನ್ನು ನೀಡುವ ಕಲ್ಪವೃಕ್ಷ (ಮಾಲ್ಯಾತೋದ್ಯಜ್ಯೋತಿರಮೂಲ್ಯಾಭರಣ ಪ್ರದೀಪ ವಸನಾಶನ ಸತ್ಕಲಗೃಹಪಾತ್ರದಾತೃ ಗುಣಾಲ್ಯರ್ಚಿತ ದಶವಿಧಾನ ಕಲ್ಪಕುಜಂಗಳ್; **ಪಾರ್ಶ್ವನಾಪು:** ೧೬. ೫೬)

**ಮಾಲ್ಯಮಹೀಜ** – ಹತ್ತು ಕಲ್ಪಕುಜಗಳಲ್ಲಿ ಒಂದು, ಬೇಕಾದ ಹೂಮಾಲೆಯನ್ನು ನೀಡುವ ಕಲ್ಪವೃಕ್ಷ (ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯದಜಿದೋಲಗಿಪುದು ಮಾಲೆಗಾಜಿನಂ ಪೋಲ್ತುದಗ್ರ ಮಾಲ್ಯಮಹೀಜಂ: **ಆದಿಪು,** ೫. ೩೬)

**ಮಾಲ್ಯಾಂಗ** – ಮಾಲ್ಯ (ಅದಿರ್ಮುತ್ತೆಯ ವಕುಲದ ನಾಗದ ಪೊಂಗೇದಗೆಯ ಹೇಮತಾಮರಸದ ಕುಂದದ ಬಣ್ಣವಾಸಿಗಂಗಳನುದಾತ್ತ ಮಾಲ್ಯಾಂಗಮಹಿರುಹಂ ಕುಡುತಿರ್ಕುಂ: **ಶಾಂತಿಪು,** ೬. ೧೦೨)

**ಮಾಸ** – ಎರಡು ಪಕ್ಷಗಳು ಅಥವಾ ಮೂವತ್ತು ದಿವಸಗಳು (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬. ೬೮ ವ)

**ಮಾಸೋಪವಾಸ** – ಒಂದು ತಿಂಗಳ ಕಾಲ ಮಾಡುವ ಉಪವಾಸ ವ್ರತ (ಭುವನನುತಮಾಗೆ ಪಕ್ಷೋಪವಾಸ ಮಾಸೋಪವಾಸಮಂ ನಿಯಮದೆ ಮಾಡುವ ಜಿನಮುನಿ: **ಸಮಯಪ,** ೭. ೭)

**ಮಾಹೇಂದ್ರ** – ಹದಿನಾರು ಕಲ್ಪಗಳಲ್ಲಿ ನಾಲ್ಕನೆಯದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ

ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಮಿಥ್ಯಾಚತುಷ್ಟಯ** – ಇದು ಸುಳ್ಳು, ಇದರ ಪರಿಚಯ ಇಲ್ಲ, ಆಗ ಅಲ್ಲಿ ನಾನಿರಲಿಲ್ಲ, ಆ ಕಾಲಕ್ಕೆ ನಾನು ಹುಟ್ಟಿರಲಿಲ್ಲ ಎಂಬ ನಾಲ್ಕು ಬಗೆಯ ಸುಳ್ಳುಗಳು (ತದ್ವಾರಾವಸಾನದೊಳ್ ನಿಂದು ಮಿಥ್ಯಾಚತುಷ್ಟಯ ಅಲಂಕಾರಮಾಗಿರ್ದ ಚತುಃಪಥಸಭಾಮಂಟಪದೊಳಿರ್ದ ವಿಟಕೋಟಿಯಂ ಕಂಡು: **ಶಾಂತಿಪು,** ೮. ೯೦ ವ)

**ಮಿಥ್ಯಾಜ್ಞಾನಿ** – ಅಜ್ಞಾನಿ, ಜೈನತತ್ವದಲ್ಲಿ ನಂಬಿಕೆಯಿಲ್ಲದವನು (ಇರ್ವರುಂ ಮಿಥ್ಯಾಜ್ಞಾನಿಗಳ್ ಶೂನ್ಯವಾದಿಗಳ್: **ಚಾವುಂಪು,** ಪು. ೧೭೬, ಸಾ. ೧೦)

**ಮಿಥ್ಯಾತ್ವ** – ನಿಜವಾದ ತತ್ವಜ್ಞಾನವನ್ನು ನಂಬದಿರುವುದು; ಇದರಲ್ಲಿ ವಿಪರೀತ, ಏಕಾಂತ, ವಿನಯ, ಸಂಶಯ, ಅಜ್ಞಾನ ಎಂಬ ಐದು ಬಗೆ (ಭವ ಭವದೊಳ್ ಪೆರ್ಚಿದ ಕೆರ್ಚುಱಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾಶ್ರವಣಂ ಪೈತ್ತಿಕಮಾಗಿರ್ದವರ್ಗೆ ಪಾಲ್ ಕೈಪೆಯಪ್ಪವೊಲ್ ಕೈಪೆವಲಂ: **ಅಜಿತಪು,** ೨. ೯೨)

**ಮಿಥ್ಯಾದೃಷ್ಟಿ** – ಅಭವ್ಯನ ದೃಷ್ಟಿ (ಜನಾಪವಾದ ಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದು ಅರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದು: **ಪಂಪರಾ,** ೧೫. ೭೫ ವ)

**ಮಿಥ್ಯಾವಾದಿ** – ಒಂದು ಬೌದ್ಧ ಪಂಗಡ, ವಿಜ್ಞಾನವನ್ನು ಆಶ್ರಯಿಸಿದವನು (ಈ ಸ್ವಸಂವಿತ್ತರಂಪರೆ ಪೋಕುಂ ಪ್ರಳಯಕ್ಕೆ ತತ್ ಕ್ಷಣಿಕ ಮಿಥ್ಯಾವಾದಿ ವಾದೀಂದ್ರರಿಂ: **ಶಾಂತಿಪು,** ೮. ೧೩೫)

**ಮಿಥ್ಯಾಶಲ್ಯ** – ವ್ರತಸ್ಥನನ್ನು ಬಾಧಿಸುವ ಮೂರು ಬಾಧೆಗಳಲ್ಲಿ ಒಂದು; ಸರಿಯಲ್ಲದ ದೃಷ್ಟಿಯನ್ನು ಹೊಂದಿರುವುದು (ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ: **ಧರ್ಮಾಮೃ,** ೫. ೮೮ ವ), ನೋಡಿ, **'ಶಲ್ಯತ್ರಯ'**

**ಮುಂಜಿಗಟ್ಟು** – ಹುಲ್ಲಿನ ಉಡಿದಾರ ಕಟ್ಟು, ಉಪನಯನ ಮಾಡು (ಆತನುಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ: **ವಡ್ಡಾರಾ,** ಪು ೭೩, ಸಾ ೨೦)

**ಮುಂಜಿಬಂಧನಕ್ರಿಯೆ** – ಉಪನಯನ (ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮುಂಜಿಬಂಧನಕ್ರಿಯೆಯಂ ಮಾಡಿದ ಬಟಿಕ್ಕೆ: **ವಡ್ಡಾರಾ,** ಪು ೭೩, ಸಾ ೨೧)

**ಮುಕ್ಕೊಡೆ** – ಜಿನಪ್ರತಿಮೆಯ ಹಿಂದೆ ಸಾಲಾಗಿ ಇರುವ ಚಕ್ರವರ್ತಿ ಲಾಂಛನದ ಮೂರು ಕೊಡೆಗಳು (ಶ್ರೀಮದಶೋಕಂ ಮುಕ್ಕೊಡೆ ಚಾಮರತತಿ ದಿವ್ಯಭಾಷೆ ಸುತೂರ್ಯರವಂ ಪೂಮಟಿ ಕೇಸರಿಪೀಠಂ ಭಾಮಂಡಳಮೆಸೆಯೆ ನೆಗಟ್ದಿನಾದಿಜಿನೇಂದ್ರಂ: **ಚಾವುಂಡಜಯ,** ಪು, ೧, ಪದ್ಯ ೨)

**ಮುಕ್ತಜೀವ** – ಜೀವತತ್ವಮುಕ್ತ ಹಾಗೂ ಸಂಸಾರಿ ಮುಕ್ತ ಎಂಬ ಎರಡು ಬಗೆಗಳಲ್ಲಿ ಒಂದು (ಆ ಜೀವತತ್ತ್ವಮುಂ ಸಂಸಾರಿಮುಕ್ತಭೇದದಿಂ ದ್ವಿವಿಧಮಕ್ಕುಂ ಅಲ್ಲಿ ಮುಕ್ತಿಜೀವಮೇಕಪ್ರಕಾರಮ: **ಆದಿಪು.** ೧೦. ೬೩ ವ)

**ಮುಕ್ತಾವಳಿತಪ** – ಒಂದು ಉಪವಾಸ ಒಂದು ಪಾರಣೆ, ಎರಡು ಉಪವಾಸ ಒಂದು ಪಾರಣೆ, ಮೂರು ಉಪವಾಸ ಒಂದು ಪಾರಣೆ, ನಾಲ್ಕು ಉಪವಾಸ ಒಂದು ಪಾರಣೆ, ಐದು ಉಪವಾಸ ಒಂದು ಪಾರಣೆ, ನಾಲ್ಕು ಉಪವಾಸ ಒಂದು ಪಾರಣೆ, ಮೂರು ಉಪವಾಸ ಒಂದು ಪಾರಣೆ, ಎರಡು ಉಪವಾಸ ಒಂದು ಪಾರಣೆ, ಒಂದು ಉಪವಾಸ ಒಂದು ಪಾರಣೆ – ಹೀಗೆ ೨೫ ಉಪವಾಸ ಹಾಗೂ ೯ ಪಾರಣೆ ಮಾಡುವ ವ್ರತ (ವಿಜಯಾಖ್ಯಮುಖ್ಯಮುನಿನಿಕಟದೊಳ್ ಮುಕ್ತಾವಳೀತಪಮಂ ಕೈಕೊಂಡು ಗೆಲ್ಲಂಗೊಂಡಂ: **ಆದಿಪು,** ೩. ೫೮ ವ)

**ಮುಕ್ತಿಪದ** – ಬಿಡುಗಡೆ, ಮೋಕ್ಷ (ಅನಾದಿಬಂಧನಬಂಧ ವ್ಯಭಾವಕರ್ಮವಿಗಮದಿಂ ಅನಂತಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ: **ಆದಿಪು,** ೧೦. ೬೩ ವ)

**ಮುಕ್ತಿಶ್ರೀ** – ಮೋಕ್ಷಲಕ್ಷ್ಮಿ (ಎಯ್ದುದಜಿರೊಳ್ ಅಳವಡದುದುಂ ಎಯ್ದುದುದನೆ ಬಯಸುತಿರ್ಪುದುಂ ಜೀವಕ್ಕೇಗೆಯ್ದುಂ ಇದು ಸಹಜಂ ಅನ್ನೆಗಂ ಎಯ್ದುಗುಂ ಎನ್ನೆಗಂ ಉದಾತ್ತ ಮುಕ್ತಿಶ್ರೀಯಂ: **ಆದಿಪು,** ೯. ೫೨)

**ಮುಕ್ತಿಸ್ಥಾನ** – ಮೋಕ್ಷ (ಕಷ್ಟಂ ದುಃಖಾನಳಸಂಪ್ಲುಷ್ಟಂ ಚಿಃ ಗತಿಚತುಷ್ಟಯಂ ಪ್ರಾಣಿಗೆ ಸಂತುಷ್ಟತೆಯನೆಯ್ದೆ ಪಡೆದುಮಭೀಷ್ಟಸುಖಪ್ರದಮದೊಂದೆ ಮುಕ್ತಿಸ್ಥಾನಂ: **ಆದಿಪು,** ೯. ೫೧)

**ಮುಖ್ಯ ಕಾಲ** – ಮಧ್ಯಮಖಂಡದಲ್ಲಿನ ಎರಡು ಕಾಲಗಳ ಪೈಕಿ ಒಂದು: ಆದಿಮಧ್ಯಾಂತಗಳಿಲ್ಲದ, ಒಂದು ಅವಸ್ಥೆಯಿಂದ ಮತ್ತೊಂದಕ್ಕೆ ಹೊಂದಿಕೆಯಾಗಬಲ್ಲ ವರ್ತನಾಸ್ವರೂಪವುಳ್ಳ ಹಾಗೂ ತನ್ನ ಯೋಗ್ಯತಾನುಗುಣವಾಗಿ ಗುಣಪರ್ಯಾಯಗಳಿಂದ ಪರಿವರ್ತನೆಯನ್ನು ಹೊಂದುವ ಪದಾರ್ಥಗಳನ್ನು ಪರಿವರ್ತನಗೊಳಿಸಲು ಸಹಾಯಕವೂ ಲೋಕಾಕಾರಪ್ರದೇಶ ಪರಿಮಾಣವೂ ಆದ ನಮ್ಮಂಥವರಿಗೆ ಕಲ್ಪನಾಮಾತ್ರವಾದರೂ ಸರ್ವಜ್ಞರಿಗೆ ಪ್ರತ್ಯಕ್ಷಗೋಚರವಾದುದು ಮುಖ್ಯಕಾಲ (ಆದಿಮಧ್ಯಾವಸಾನವಿರಹಿತಮುಂ ವರ್ತನಾಲಕ್ಷಣಮುಂ ಪರಿಣಾಮದ್ರವ್ಯ ಪರಿವರ್ತನಕಾರಣಮುಂ ಲೋಕಾಕಾರಪ್ರದೇಶಪ್ರಮಾಣ ಪರಿಣಾಮಮುಂ ಅಸ್ಮದಾದ್ಯನುಮೇಯಮುಂ ಸರ್ವಜ್ಞಗೋಚರಮುಂ ಅಪ್ಪುದು ಮುಖ್ಯಕಾಲ: **ಆದಿಪು,** ೬. ೪೮ ವ)

**ಮುಡಿಪು** – ವ್ರತದ ಮೂಲಕ ಮರಣಿಸು (ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ಮುಡಿಪಿ ನಿರಾಕುಳಂ: **ಆದಿಪು,** ೫. ೪೮)

**ಮುನಿ** – ಶ್ರಮಣ, ಜೈನಸನ್ಯಾಸಿ (ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆಮ ಈ ಮನೋರಥಂ ಮಂತ್ರಗುಪ್ತಿಯೊಳ್ ನೆರೆದು: **ಆದಿಪು,** ೬. ೨೪ ವ); ಪಂಚ ಪರಮೇಷ್ಠಿಗಳಲ್ಲಿ ಒಬ್ಬ, ಸಿದ್ಧ (ಮುನಿಜನಮೋದಿಸಿದೋಜೆ

ಯೊಳನುವದಿಪುದಿದೊಂದೆ ಕೊಂಡಕುಂದಾನ್ವಯನಂದನರನ ಶುಕ ಮೆಂದೆನಗಿನಿಸನನುಗ್ರಹಂಗೆಯ್ಗೆ ಕರುಣದಿಂ ಮುನಿನವಹಂ: **ಆದಿಪು,** ೧. ೧೪)

**ಮುನಿನಿವೇದಕ** – ತಾಪಸಿಯ ಬರವನ್ನು ತಿಳಿಸುವವನು (ನಡೆದೇಱಿಡಿಯಂ ಜಿನನಿರ್ದೆಡೆಗೆಱಗಿ ಬೞಿಕ್ಕಂ ಮಚ್ಚುಗೊಟ್ಟಂ ... ಆ ಮುನಿನಿವೇದಕಂಗೆ ನೃಪೇಂದ್ರಂ: **ಶಾಂತಿಪು,** ೧. ೮೩)

**ಮುಮುಕ್ಷು** – ಮೋಕ್ಷಾಪೇಕ್ಷಿ (ಆ ಕ್ಷಣದೊಳ್ ಅಗ್ನಿಭೂತಿ ಮುಮುಕ್ಷುಗೆ ಮೂಱನೆಯ ದಿವ್ಯಸರ್ವಾವಧಿ ಪುಣ್ಯಕ್ಷೇತ್ರ ಶುಭಸ್ಥಾನ ಸಮಕ್ಷದೊಳಾದುದು: **ಸುಕುಮಾಚ,** ೮. ೪೬)

**ಮುಮುಕ್ಷುವೃತ್ತಿ** – ತಾಪಸ ಕ್ರಮ (ಕಾಮಸುಖೋಚಿತಮತಿಗಳ್ ನಾಮೆತ್ತ ಮುಮುಕ್ಷುವೃತ್ತಿಯಂ ತಾಳ್ದಿದವರ್ ತಾಮೆತ್ತ: **ಆದಿಪು** ೫. ೬೮)

**ಮುಹೂರ್ತ** – ಎರಡು ಗಳಿಗೆಯ ಅವಧಿ (ಅದು ಸಮಯ ಆವಳಿಕಾ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ: **ಆದಿಪು,** ೬. ೪೮ ವ)

**ಮೂಢತ್ರಯ** – ಲೋಕಮೂಢ, ದೇವತಾಮೂಢ, ಪಾಷಂಡಿಮೂಢ ಎಂಬ ಮೂಢಭಾವನೆಗಳು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ಮೂಲಗುಣ** – ಮುನಿಗಳಿಗೆ ಬೇಕಾದ ಆವಶ್ಯಕ ಗುಣಗಳು: ಪಂಚ ಮಹಾವ್ರತ, ಪಂಚ ಸಮಿತಿ, ಪಂಚೇಂದ್ರಿಯನಿಗ್ರಹ, ದಿಗಂಬರತ್ವ, ಕೇಶಲುಂಚನ ಪ್ರತಿಜ್ಞೆ, ಷಡಾವಶ್ಯಕಗಳಲ್ಲಿ ನಿರ್ಬಾಧಕತ್ವ, ಸ್ನಾನರಾಹಿತ್ಯ, ದಂತಧಾವನರಾಹಿತ್ಯ, ನಿಂತು ಮಾಡುವ ಊಟ, ಒಂದೇ ಹೊತ್ತಿನ ಊಟ (ಮತ್ತಮಿವು ಮೊದಲಾಗಿ ಇರ್ಪತ್ತೆಂಟು ಮೂಲಗುಣಂಗಳೊಳಂ ಉತ್ತರಗುಣಂಗಳೊಳಂ ಉತ್ತರೋತ್ತರಂ ನೆಗೞ್ದು: **ಆದಿಪು,** ೬. ೨೮ ವ)

**ಮೂಲೋಕ** – ಜೈನ ಸೃಷ್ಟಿಕಲ್ಪನೆಯ ಮೂರು ಲೋಕಗಳು; ಸುಮೇರುಪರ್ವತದ ಕೆಳಗಡೆಯಲ್ಲಿ ಅಧೋಲೋಕವಿದೆ; ಅದನ್ನು ಸುತ್ತಲೂ ಆವರಿಸಿದಂತೆ ಮಧ್ಯಲೋಕವಿದೆ; ಅದರ ತಲೆದಿಸೆಯಲ್ಲಿ ಊರ್ಧ್ವಲೋಕವಿದೆ (ನೆಲಸಿರ್ಪುದಧಸ್ಸ್ಥಳಂಬಿಡಿದಧೋಲೋಕಂ ಸಮಂತೆಯ್ದೆ ಸುತ್ತಲು ಮಿರ್ಪುದು ಮಧ್ಯಲೋಕಮೆಸೆದಿರ್ಪ ಚೂಳಿಕಾಭಾಗದಾದಲೆಯೊಳ್ನಿಂದ ಪುದೂರ್ಧ್ವಲೋಕಮೆನೆ ಮೂಲೋಕಕ್ಕೆ: **ಆದಿಪು:** ೧. ೫೦)

**ಮೂಲೋತ್ತರಗುಣ** – ಆಚಾರ್ಯರಿಗೆ ಇರಬೇಕಾದ ಮೂವತ್ತಾರು ಗುಣಗಳು: ದ್ವಾದಶ ತಪಸ್ಸು, ಷಡಾವಶ್ಯಗಳು, ಪಂಚಾಚಾರಗಳು, ದಶಧರ್ಮಗಳು, ತ್ರಿಗುಪ್ತಿಗಳು (ಮತ್ತಂ ಒಳಗಣ ಆಱುಂ ತಪದೊಳಗಂ ... ನಿಟ್ಟೆವಡಿಸಿ ಮೂಲೋತ್ತರಗುಣಂಗಳಂ ಉತ್ತರೋತ್ತರಂ ಪೆರ್ಚಿಸಿ: **ಶಾಂತಿಪು,** ೯. ೧೦೮ ವ)

**ಮೂವತ್ತಾರುಂ ಗುಣ** – ಆಚಾರ್ಯನಿಗೆ ಅಗತ್ಯವಾದ ದ್ವಾದಶ ತಪಸ್ಸು, ಷಡಾವಶ್ಯಕ, ದಶಧರ್ಮ, ಪಂಚಾಚಾರ ಮತ್ತು ತ್ರಿಗುಪ್ತಿಗಳೆಂಬ ಮೂಲೋತ್ತರಗುಣಗಳು (ಮೂವತ್ತಾಱುಗುಣಂಗಳ್ ತಮಗಮರ್ದಿರೆ ಸಂದ್ಯೆದುಮಾಚಾರದೊಳ್ ಸದ್ಭಾವಂ ಕಯ್ಗಣ್ಮೆ ... ಓಸರಿಸೆ ಕಳೆಗೆ ಸಂಸಾರಕಾಂತಾರದಿಂದಂ: **ಆದಿಪು,** ೧. ೩)

**ಮೂವತ್ತೆರಡು ನಾಡು** – ವಿದೇಹಕ್ಷೇತ್ರದ ನಾಡುಗಳು (ಪದನಂ ಕಾಣಿಸಿಕೊಳ್ವುವಲ್ಲಿ ಮಟೆಗಳ್ ಷಡ್ಭಾಗಮಂ ಕೊಂಡು ತಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ ಶ್ರೀಜೈನಧರ್ಮಂ ಪೊದಳ್ದಿದವುತ್ತಿರ್ಪುದು ಮತ್ತಿನ ಅನ್ಯಸಮಯಕ್ಕುತ್ಪತ್ತಿಯಿಲ್ಲ ಒಂದಱೊಳ್ ಪದಿನಾರಾಗಿ ನಿರಂತರಂ ಸೊಗಯಿಕುಂ ಮೂವತ್ತರೆಟ್ನಾಡುಗಳ್: **ಆದಿಪು,** ೧. ೫೧)

**ಮೂಱುಮೂಢಗಳು** – ಲೋಕಮೂಢ, ದೇವತಾಮೂಢ, ಪಾಷಂಡಿಮೂಢ ಎಂಬ ಮೂಢಭಾವನೆಗಳು (ಶಂಕಾದಿ ಅಷ್ಟಮಲಂಗಳುಂ ಎಂಟುಮದಂಗಳುಂ ಮೂಱು ಮೂಢಮುಂ ಆಱು ಅನಾಯತನ ಸೇವೆಗಳುಂ ಎಂದಿಂತು ಇಪ್ಪತ್ತೈದು ದೋಷಂಗಳಿಂದಗಲ್ದ ಸಮ್ಯಕ್ತ್ವಮನೊಡೆಯನಾಗಿ: **ವಡ್ಡಾರಾ,** ಪು ೬, ಸಾ ೨೨)

**ಮೂಱುರತ್ನಂಗಳ್** – ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರಗಳೆಂಬ ರತ್ನತ್ರಯಗಳು (ಆ ಮುನಿಚಕ್ರವರ್ತಿಯ ಮನದೊಳ್ ಮೂಱುರತ್ನಂಗಳ್ ಬೆಳಗಿದುವು ಈ ಸಕಳಚಕ್ರವರ್ತಿಯ ಮನೆಯೊಳ್ ಪದಿನಾಲ್ಕು ರತ್ನಂಗಳ್ ಬೆಳಗಿದುವು: **ಆದಿಪು,** ೬. ೨೪ ವ)

**ಮೂಱುವಿದ್ಯೆ** – ಕುಲವಿದ್ಯೆ, ಜಾತಿವಿದ್ಯೆ ಮತ್ತು ಸಾಧಿತವಿದ್ಯೆಗಳು ಎಂಬ ಮೂರು ಬಗೆಯ ವಿದ್ಯೆಗಳು (ಜವ್ವನಿಗನಾಗಿ ಕುಲ ಜಾತಿ ಸಾಧಿತವಿದ್ಯೆಯೆಂಬ ಮೂಱುವಿದ್ಯೆಗಳೊಳಂ ಸಂಪೂರ್ಣನಾಗಿ ಸುಖದಿಂದಿರ್ಪುದುಂ: **ಧರ್ಮಾಮೃತ,** ೮. ೬೪ ವ)

**ಮೃತಕಸೆಜ್ಜೆ** – ಒಂದು ಬಗೆಯ ತಪಸ್ಸು (ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ: **ವಡ್ಡಾರಾ,** ಪು. ೨೯. ಸಾ. ೧)

**ಮೃಷತತ್ತ್ವ** – ಮಿಥ್ಯಾತತ್ವ (ಕಿಲ್ಬಿಷವಿಷಂ ಪುದಿದಿರ್ಪ ಕುದೃಷ್ಟಿಗೆ ಆತ್ಮತತ್ತ್ವಮೆ ಮೃಷತತ್ತ್ವಮಾಗಿ ... ತೋರ್ಕುಂ: **ಸಮಯಪ,** ೧೧. ೧೫೪)

**ಮೃಷಾನಂದ** – ಒಂದು ಬಗೆಯ ರೌದ್ರಧ್ಯಾನ; ಸುಳ್ಳಾಡುವ ಆನಂದ (ಬಂಚಿಸಲೆಂದು ನುಡಿವ ಮೃಷಾನಂದ ವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾನಂದಂ ಎಂಬುದಕ್ಕುಂ: **ಅಜಿತಪು,** ೮. ೨೮ ವ); ಸುಳ್ಳು ಹೇಳಿ ನಂಬಿಸಿ ಸಂತೋಷಿಸುವುದು (ಸ್ವಬುದ್ಧಿಕಲ್ಪಿತಯುಕ್ತಿಗಳಿಂ ಪೆಱರ್ ನಂಬುವಂತವರಂ ಬಂಚಿಸಲ್ವೇಡಿ ನುಡಿವ ಮೃಷಾವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾನಂದಮೆಂಬ ದ್ವಿತೀಯರೌದ್ರಂ: **ಚಾವುಂಡಪು,** ಪು, ೩೮೫)

**ಮೋಕ್ಷ** – 'ಸಪ್ತತತ್ವ'ಗಳಲ್ಲಿ ಒಂದು; ಎಲ್ಲದರಿಂದ ಬಿಡುಗಡೆ ಹೊಂದಿ ಆತ್ಮ ಪರಿಶುದ್ಧಗೊಳ್ಳುವುದು (ಜೀವಾಜೀವಾಸ್ರವ ಬಂಧ ಸಂವರನಿರ್ಜರಾಮೋಕ್ಷ ಭೇದದಿಂ ಸಪ್ತವಿಧಂ ... ಮೂಲೋತ್ತರಾದಿ ಭೇದಭಿನ್ನ ಕರ್ಮಪ್ರಕೃತಿಗಳ ನಿರ್ಮೂಳೋಚ್ಚಿತ್ತಿ ಮೋಕ್ಷಮೆಂಬುದುಂ: **ಆದಿಪು,** ೧೦. ೬೩ ವ)

**ಮೋಕ್ಷಗತಿ** – ಮುಕ್ತಿ (ವೀತರಾಗತ್ವಂ ಅಂಬುರುಹಶ್ರೇಣಿಗುದಾತ್ತ ಮೋಕ್ಷಗತಿ ಪೌಷ್ಯಕ್ಕಾದುದು ಆವಂ ದಿಗಂಬರಸಾಂಗತ್ಯ ತಮಪ್ರಭಾವಮೆನಸುಂ ಮೆಯ್ವೆತ್ತೊಡೇನಾಗದೋ: **ಪುಷ್ಪದಂಪು,** ೬. ೫೫)

**ಮೋಕ್ಷಗಾಮಿ** – ಮುಕ್ತಿಯೆಡೆ ಸಾಗುವವನು (ಸಗರಸುತರೆಲ್ಲರುಂ ಮೋಕ್ಷಗಾಮಿಗಳ್: **ಅಜಿತಪು,** ೧೨. ೨೯)

**ಮೋಕ್ಷಪ್ರಾಸಾದ** – ಮುಕ್ತಿಯ ಸ್ಥಿತಿ (ಮೋಕ್ಷಪ್ರಾಸಾದಾರೋಹಣ ನಿಶ್ರೇಣೀಭೂತ ಕ್ಷಪಕ ಶ್ರೇಣಿಪ್ರಾಯೋಗ್ಯಾಧಃಪ್ರವೃತ್ತಿಕರಣಪರಿಣತಂ ಅಪೂರ್ವಕರಣ ಕ್ಷಪಕಂ ಪ್ರಥಮ ಶುಕ್ಲಧ್ಯಾನಪರಿಣತನಾಗಿರ್ದ: **ಆದಿಪು,** ೧೦. ೧೪ ವ)

**ಮೋಕ್ಷಮಾರ್ಗ** – ತಪಸ್ಸಿನ ದೀಕ್ಷೆ (ವಿಂಶತಿಸಹಸ್ರ ಸಮಾಜಂಬೆರಸು ಮಂದರಸ್ಥವಿರರೆಂಬ ಮುಮುಕ್ಷುಗಳ ಸಮಕ್ಷದೊಳ್ ಮೋಕ್ಷಮಾರ್ಗಮಂ ಕೈಕೊಂಡು: **ಆದಿಪು,** ೩. ೭೨ ವ)

**ಮೋದಕ್ರಿಯೆ** – ಗರ್ಭಿಣಿಗೆ ಒಂಬತ್ತನೆಯ ತಿಂಗಳಲ್ಲಿ ಮಾಡುವ ಮಂಗಳಕಾರ್ಯ (ಒಂಬತ್ತನೆಯ ತಿಂಗಳೊಳ್ ಪರ್ವಸ್ಥಿತಿಯೊಳಾದರಂಬೆರಸು ದ್ವಿಜೋತ್ತಮರಿಂ ಗೋತ್ರಿಕಾಬಂಧನಮುಂ ಮಂಗಲಮಂತ್ರಪ್ರಸಾದಮುಂ ರಕ್ಷಾಸೂತ್ರಮುಂ ಗರ್ಭಿಣಿಗೆ ಮಾಟ್ಪುದು ಮೋದಕ್ರಿಯೆ: **ಚಾವುಂಡಜಯ,** ಪು. ೧೮೧)

**ಮೋಹನೀಯ** – ಆತ್ಮನ ಬಂಧನಕ್ಕೆ ಕಾರಣವಾಗುವ 'ಮೂಲಕರ್ಮ'ಗಳಲ್ಲಿ ಒಂದು (ಮತ್ತಿರ್ಪತ್ತೆಂಟು ತೆಱದ ಮೋಹನೀಯುವೆಂಬ ಕರ್ಮದ ಕೇಡಿನಿಂ ಅನಂತಸುಖಿಗಳಾದರ್: **ವಡ್ಡಾರಾ,** ಪು. ೧೫೪, ಸಾ. ೨೩)

**ಮೋಹನೀಯಕರ್ಮ** – ಮೋಹನೀಯ (ಬೞಿಯಂ ಮೋಹನೀಯ ಕರ್ಮೋಪಶಮನ ದೊಳ್ ವಿಶುದ್ಧ್ಯತಿಶಯವಿಶೇಷದಿನುಪಶಮ ಶ್ರೇಣ್ಯಾರೋಹಣಂ ಗೆಯ್ದು: **ಆದಿಪು,** ೬. ೩೩ ವ)

**ಮೌಂಜಿ** – ಬ್ರಹ್ಮಚಾರಿಯು ಧರಿಸುವ ಮುಂಜಹುಲ್ಲಿನ ದಾರದ ಉಡಿದಾರ (ಜಿನರೂಪಮಂ ಬಿಸುಟ್ಟು ಮೌಂಜಿ ವಲ್ಕಲ ಕೌಲೀನ ದಂಡಧರರಾಗಿ ಪರಿವ್ರಾಜಕವೇಷಮಂ ಕೆಯ್ಕೊಂಡು: **ವರ್ಧಮಾಪು,** ೬. ೧೦ ವ)

**ಮೌಖರ್ಯ** – ಅನವಶ್ಯಕ ಮಾತನ್ನಾಡಿ ಹಿಂಸಿಸುವುದು (ಪುದಿದ ಸಮೀಕ್ಷಾದಿ ಕರಣಂ ಉದಯಿಪ ಕಂದರ್ಪಂ ಅಂತೆ ಕೌತ್ಕುಚ್ಯಂ ಪೆರ್ಚಿದ ಮೌಖರ್ಯಂ ಅನರ್ಥಕ್ಯದೊಳ್ ವ್ಯತಿಕ್ರಮಮತಿಪ್ರಸಾಧನಸಹಿತಂ: **ಸುಕುಮಾಚ,** ೬. ೨೦); ಒಂದು **'ಅನರ್ಥದಂಡ ವಿರತಿ'**

**ಮೌನವ್ರತ** – ಮಾತನಾಡದೇ ಇರುವ ವ್ರತ (ಇತ್ತ ವೃಷಭನಾಥನುಂ ಮೌನವ್ರತದಿಂ ಯೋಗಯೋಗ್ಯಪ್ರದೇಶದೊಳ್ ಅವಹಿತಧ್ಯಾನನಾಗಿ ವಿಹಾರಿಸಿ: **ಚಾವುಂಡಜಯ,** ಪು. ೪೩)

**ಮೌನಾಧ್ಯಯನವೃತ್ತತ್ವ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಮೌನ ಶಾಸ್ತ್ರಾಭ್ಯಾಸ (ಮೌನಾಧ್ಯಯನವೃತ್ತತ್ವ ... ಇಂದ್ರಾಭಿಷೇಕ ಗುರುಪೂಜೋಪಲಂಭನ ಯೌವರಾಜ್ಯ ... ಎಂಬ ಅಯ್ವತ್ತಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಮೌನಾಧ್ಯಯನಕ್ರಿಯೆ** – ಗುರುಸನ್ನಿಧಿಯಲ್ಲಿ ಸಕಲಶ್ರುತಗಳನ್ನು ಅಭ್ಯಸಿಸುವುದು (ದೀಕ್ಷೋಪವಾಸಂಗೆಯ್ದು ಪಾರಣವಿಧಿಯೊಳ್ ವಾಚಂಯಮನನುಂ ವಿನಿತಾತ್ಮನುಂ ವಿಶುದ್ಧಕರಣನುಮಾಗಿ ಸಕಳಶ್ರುತಮಂ ಮೊದಲಿಂ ತಗುಬ್ದಿ ಗುರುಸನ್ನಿಧಿಯೊಳೋದಿದೊಡೀ ಭವದೊಳ್ ಯೋಗ್ಯತೆಯಂ ಮಾೞ್ಕುಂ, ಮಱುಭವದೊಳ್ ಪ್ರಸನ್ನಮಕ್ಕುಮಿದು ಮೌನಾಧ್ಯಯನಕ್ರಿಯೆ: **ಚಾವುಂಡಜಯ,** ಪು. ೧೮೪)

**ಮ್ಲೇಂಛಖಂಡ** – ಮನುಷ್ಯಕ್ಷೇತ್ರದಲ್ಲಿ ಬರುವ ಆರ್ಯಖಂಡ ಮತ್ತು ಮ್ಲೇಚ್ಛಖಂಡ ಎಂಬ ಎರಡು ಖಂಡಗಳಲ್ಲಿ ಒಂದು (ಅಱುದಿಂಗಳ್ಗೆ ಸೇನಾನಾಯಕಂ ಸಾಧಿಸಿ ಮಗುಳ್ದು ಬರೆ ದಕ್ಷಿಣಭರತದ ನರರಂ ವಿದ್ಯಾಧರರನಡಿಗೆಱಗಿಸಿ ಬೞಿಯಂ ಮ್ಲೇಂಛಖಂಡಮಂ ಬಾಯ್ಕೇಳಿಸಿ: **ಅಜಿತಪು,** ೯. ೩೪ ವ)

**ಮ್ಲೇಚ್ಛಖಂಡ** – ಮನುಷ್ಯಕ್ಷೇತ್ರದಲ್ಲಿ ಬರುವ ಆರ್ಯಖಂಡ ಮತ್ತು ಮ್ಲೇಚ್ಛಖಂಡ ಎಂಬ ಎರಡು ಖಂಡಗಳಲ್ಲಿ ಒಂದು (ತೆಱೆವ ತೆಱನಿಂತುಟಿಂತೀ ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ ತೆಱೆದದಱ ಬೆಂಕೆ ಪೋಪಿನಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ: **ಆದಿಪು,** ೧೩. ೩೫)

## ಯ

**ಯಕ್ಷ** – ವ್ಯಂತರ ದೇವತೆಗಳ ಒಂದು ವರ್ಗ (ಆನೀ ವಟವೃಕ್ಷ ನಿವಾಸಿಯೆಂ ಮನೋಹರನೆಂಬ ಯಕ್ಷನೆಂ: **ವಡ್ಡಾರಾ,** ಪು. ೫೬, ಸಾ. ೧೬)

**ಯಕ್ಷರು** – ಇಪ್ಪತ್ತನಾಲ್ಕು ಮಂದಿ (ವೃಷಭಮುಖನುಂ ಮಹಾಯಕ್ಷನುಂ ತ್ರಿಮುಖನುಂ ಯಕ್ಷೇಶ್ವರನುಂ ತುಂಬುರನುಂ ಕುಸುಮನುಂ [ವರನಂದಿಯುಂ] ಮಾರ್ತಂಡನುಂ ವಿಜಯನುಂ ಅಜಿತನುಂ ಬ್ರಹ್ಮನುಂ ಈಶಾನನುಂ ಕುಮಾರನುಂ ಷಣ್ಮುಖನುಂ ಕಿನ್ನರನುಂ ಗರುಡನುಂ ಗಂಧರ್ವನುಂ ವಿಜಯನುಂ ಕುಬೇರನುಂ ವರುಣನುಂ ವಿದ್ಯುತ್ಪ್ರಭನುಂ ಸರ್ವಾಹ್ಣನುಂ ಧರಣೇಂದ್ರನುಂ ಮಾತಂಗಮನುಂ ಎಂದು ಯಕ್ಷರ್ ಇಪ್ಪತ್ತನಾಲ್ವರಪ್ಪರ್: **ಅಜಿತಪು,** ೧೧. ೨೦ ವ)

**ಯಕ್ಷಿ** – ಪ್ರತಿಯೊಬ್ಬ ತೀರ್ಥಂಕರನ ಬಳಿ ಇರುವ ಶಾಸನ ದೇವತೆ (ಯಕ್ಷಿ ಬರೆ ಕಂಡು ತಾಂ ಪ್ರತ್ಯಕ್ಷಂ ಕರೆದೆನ್ನಂ ಇತ್ತಳೀ ಪುತ್ರನಂ: **ಕರ್ಣನೇಮಿ,** ೬. ೪೦); ಇವರು ಇಪ್ಪತ್ತನಾಲ್ಕು ಮಂದಿ (ಚಕ್ರೇಶ್ವರಿಯುಂ ರೋಹಿಣಿಯುಂ ಪ್ರಜ್ಞಪ್ತಿಯುಂ ವಜ್ರಶೃಂಖಳೆಯುಂ ಪುರುಷದತ್ತೆಯುಂ ಮನೋವೇಗೆಯುಂ ಕಾಳಿಯುಂ ಜ್ವಾಲಾಮಾಲಿನಿಯುಂ ಮಹಾಕಾಳಿಯುಂ ಮಾನವಿಯುಂ ಗೌರಿಯುಂ ಗಾಂಧಾರಿಯುಂ ವೈರೋಟಿಯುಂ ಅನಂತಮತಿಯುಂ ಮಾನಸಿಯುಂ ಮಹಾಮಾನಸಿಯುಂ ಜಯೆಯುಂ [ವಿಜಯೆಯುಂ] ಅಪರಾಜಿತೆಯುಂ ಬಹುರೂಪಿಣಿಯುಂ ವಿದ್ಯುತ್ಪ್ರಭೆಯುಂ ಕೂಷ್ಮಾಂಡಿಯುಂ ಪದ್ಮಾವತಿಯುಂ ಸಿದ್ಧಾಯಿನಿಯುಮೆಂದು ಶಾಸನದೇವಿಯರಿರ್ಪತ್ತುನಾಲ್ವರ್: **ಅಜಿತಪು,** ೧೧. ೨೦ ವ)

**ಯಕ್ಷೇಂದ್ರ** – ಯಕ್ಷರ ಒಡೆಯ, ಕುಬೇರ (ಕುಂದದ ಶರನಿಧಿ ಯಕ್ಷೇಂದ್ರನಿಧಿಯಿದೆನೆ ಸೊಗಯಿಸುಗುಂ: **ರಾಜಶೇವಿ,** ೬. ೧೧೩)

**ಯಜ್ಞಮಂತ್ರ** – ಮಂತ್ರಗಳಲ್ಲಿನ ಐದು ಬಗೆಗಳಲ್ಲಿ ಒಂದು, ಪರಮೇಷ್ಠಿಸೇವೆಗೆ ಕಾರಣವಾಗುವುದು (ಕ್ರಿಯಾಮಂತ್ರಂ ಸಪ್ತಪರಮ ಸ್ಥಾನಾರ್ಹಂತ್ಯಮುಂ ಮಾಳ್ಕುಂ; ಅಗ್ನಿಹೋತ್ರಮಂತ್ರಂ ಸಿದ್ಧಸೇವೆಗೆ ಹೇತು; ಯಜ್ಞಮಂತ್ರ ಪರಮೇಷ್ಠಿಸೇವಗೆ ಹೇತು; ಸಂಯಮಮಂತ್ರ ಸಕಲ ವೃತ್ತಿಗೆ ಹೇತು, ಕರ್ಣಜಾಪ್ಯಮಂತ್ರಂ ಶಿವಗತಿಗೆ ಕಾರಣಂ, ಇವಯ್ದು ನಿರವದ್ಯ ಮಂತ್ರಂಗಳ್: **ಚಾವುಂಡಜಯ,** ಪು. ೧೮೮)

**ಯತಿಧರ್ಮ** – ಮುನಿಯು ಪಾಲಿಸಬೇಕಾದ ಹತ್ತು ಕರ್ತವ್ಯಗಳು (ಉತ್ತಮಕ್ಷಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಮೆಂದಿಂತು ದಶವಿಧಂ ಯತಿಧರ್ಮಂ: **ಜೀವಸಂ,** ೧೨. ೨ ವ)

**ಯತಿಸಮಿತಿ** – ಮುನಿಸಮುದಾಯ (ಪರಮತಪಶ್ಚರಣನಿರತ ಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣರೂಪ ಪಾತ್ರದತ್ತಿಯುಂ: **ಆದಿಪು,** ೧೫. ೧೩ ವ)

**ಯತ್ಯಾಶ್ರಮ** – [ಯತಿ+ಆಶ್ರಮ] ಯತಿಯ ಸ್ಥಿತಿ (ಅಂತಾ ತ್ರಿಲೋಕಗುರು ಧರಾತಳಂ ಪೊಗಟ್ವಿನಂ ಯತ್ಯಾಶ್ರಮದೊಳ್ ನಿಂದಂ: **ಆದಿಪು,** ೬. ೨೪ ವ)

**ಯಥಾಖ್ಯಾತಚರಿತ** – ಜೈನಾಗಮಗಳಲ್ಲಿ ಹೇಳಿದ ಅನುಷ್ಠಾನದಂತೆ ಕಷಾಯಗಳನ್ನೆಲ್ಲ ಕಳೆದುಕೊಂಡು ಆತ್ಮನ ಸ್ವಾಭಾವಿಕ ಸ್ವರೂಪವನ್ನು ಹೊಂದಿದವನು (ಪರಿಪೂರ್ಣಮೆನಿಸೆ ಗುಣಪರಿಕರಂ ಯಥಾಖ್ಯಾತಚರಿತನಾಗಿ ಜಿನಂ ಮುಕ್ತಿರಮಾಕಚಗ್ರಹಸ್ತಪರಿರಂಭಾರಂಭಕೇಳಿಗುತ್ಸುಕನಾದಂ: **ಪಂಪರಾ,** ೧೬. ೮೦)

**ಯಥಾಖ್ಯಾತಚಾರಿತ್ರ** – ಮೋಹನೀಯ ಕರ್ಮಗಳನ್ನೆಲ್ಲ ಕಳೆದುಕೊಂಡ ಆತ್ಮನ ಸ್ಥಿತಿ, ಸಪ್ತಸಂಯಮಗಳಲ್ಲಿ ಒಂದು (ವೀತರಾಗದ್ವೇಷ ಭಾವನಾಭಾವಿತ ಯಥಾಖ್ಯಾತ ಚಾರಿತ್ರಕ್ಷೀಣ ಕಷಾಯ ವೀತರಾಗಛದ್ಮಸ್ಥ: **ಆದಿಪು,** ೧೦. ೧೪ ವ)

**ಯಶಸ್ಕೀರ್ತಿ** – ಎಪ್ಪತ್ತೆರಡು ನಾಮಪ್ರಕೃತಿಗಳಲ್ಲಿ ಒಂದು, ಜೀವನಿಗೆ ಕೀರ್ತಿ ಬರುವಂತೆ ಮಾಡುವಂಥದು (ಯಶಸ್ಕೀರ್ತಿ ಅಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂ ಗಳೆಂಬ ಎಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ)

**ಯಶೋಧರೆ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಯಶೋಭದ್ರ** – ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ಯಾನ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು ಗುಣ, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ; ವಿಜುಗೀಷುಗಳ ಸಶಕ್ತವಾದ ಸೈನ್ಯಗಳೆರಡು ಯುದ್ಧಕ್ಕೆ ತೊಡಗುವುದು ಯಾನ (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಳ್ಪುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೇಳ್ವುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹದ್ವಯಾವ ಸ್ಥಾನಂ ದ್ವೈಧೀಭಾವವಕ್ಕುಂ: **ಚಾವುಂಡಜಯ,** ಪು, ೨೫೭)

**ಯುದ್ಧವೀರ್ಯ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚಿನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

**ಯುವರಾಜಕ್ರಿಯೆ** – ಯೌವರಾಜ್ಯಾಭಿಷೇಕವನ್ನು ಹೊಂದುವುದು (ಕುಮಾರಕಾಲದೊಳ್ ಯುವರಾಜ್ಯಾಭಿಷೇಕಮಂ ಪಡೆವುದು ಯುವರಾಜಕ್ರಿಯೆ: **ಚಾವುಂಡಜಯ,** ಪು. ೧೮೫)

**ಯೋಗತ್ಯಾಗಕ್ರಿಯೆ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಜನರ ಅನುಗ್ರಹಕ್ಕಾಗಿ ಮಾಡುತ್ತಿದ್ದ ತೀರ್ಥಾಟನೆಯನ್ನು, ಸಮವಸರಣವನ್ನು ತ್ಯಜಿಸುವುದು (ಸಮವಸರಣಂ ವಿಸರ್ಜಿಸಿ ವಿಹಾರಾದಿಗಳಂ ಮಾಳ್ಪುದು ಯೋಗತ್ಯಾಗಕ್ರಿಯೆ: **ಚಾವುಂಡಜಯ,** ಪು. ೧೮೭)

**ಯೋಗತ್ರಯ** – ಭಾವಾಸ್ರವವನ್ನುಂಟುಮಾಡುವ ಮನ ವಚನ ಮತ್ತು ಕಾಯ ಎಂಬ ಮೂರು ಪ್ರವೃತ್ತಿಗಳು (ಗತಗೌರವತ್ರಯಂ ನಿರ್ಜಿತದಂಡತ್ರಯನಪೇತ ಶಲ್ಯತ್ರಯನಪ್ರತಿಹತಯೋಗತ್ರಯನಪಗತ ಕಾಲತ್ರಯನನಾಪ್ತಗುಪ್ತಿತ್ರಿತಯಂ **ಪುಷ್ಪದಂಪು,** ೧೪. ೧೫)

**ಯೋಗನಿರೋಧ** – ಮನೋವಾಕ್ಕಾಯಗಳ ಚಂಚಲತೆಯನ್ನು ನಿಗ್ರಹಿಸುವುದು (ವೃಷಭನಾಥಂ ... ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ: **ಆದಿಪು,** ೧೬. ೪೦ ವ)

**ಯೋಗನಿರ್ವಾಣಸಂಪ್ರಾಪ್ತಿ** – ಒಂದು ಗರ್ಭಾನ್ವಯ ಕ್ರಿಯೆ (ಯೋಗನಿರ್ವಾಣಸಂಪ್ರಾಪ್ತಿ ಯೋಗ ನಿರ್ವಾಣಸಾಧನ ... ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿಯೆಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗನಿರ್ವಾಣಸಂಪ್ರಾಪ್ತಿಕ್ರಿಯೆ** – ಮೋಕ್ಷದತ್ತ ಗಮನವಿಟ್ಟು ಯೋಗಸಿದ್ಧಿನಿಮಿತ್ತವಾಗಿ ನಡೆಯುವುದು (ಏಕತ್ವಮಮಂ ಭಾವಿಸಿ ನಿತ್ಯಾನಂತ ಸುಖಾಸ್ಪದಮಪ್ಪ ಲೋಕಾಗ್ರದೊಳ್ ಮತಿಯುನಿಟ್ಟು ಯೋಗಸಿದ್ಧಿನಿಮಿತ್ತಂ ನೆಗಟ್ಬುದು ಯೋಗನಿರ್ವಾಣಸಂಪ್ರಾಪ್ತಿಕ್ರಿಯೆ: **ಚಾವುಂಡಜಯ,** ಪು. ೧೮೪)

**ಯೋಗನಿರ್ವಾಣಸಾಧನ** – ಒಂದು ಗರ್ಭಾನ್ವಯ ಕ್ರಿಯೆ (ಯೋಗನಿರ್ವಾಣಸಂಪ್ರಾಪ್ತಿ ಯೋಗ ನಿರ್ವಾಣಸಾಧನ ... ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿಯೆಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗನಿರ್ವಾಣಸಾಧನಕ್ರಿಯೆ** – ಪಂಚಪರಮೇಷ್ಠಿಗಳಲ್ಲಿ ಮನಸ್ಸನ್ನಿರಿಸಿಕೊಂಡು ಜೀವಿತದ ಕೊನೆಯಲ್ಲಿ ಯೋಗನಿರ್ವಾಣಸಾಧನವನ್ನು ಸಾಧಿಸುವುದು (ಆಹಾರಮುಂ ಶರೀರಮುಂ ತೋಱಿದುತ್ತಮಾದ್ವಯದೊಳ್ ಕೃಶಾಗ್ರಹನಾಗಿ ಸನ್ಯಸ್ತದೇಹಂ ಪ್ರಶಸ್ತಮತಿಯಿಂ ಮನೋವಚಕಾಯಯಂಗಳಂ ತನ್ನಿಂ ಬೇಱಾಗಿ ಬಗೆದು ಪಂಚಪರಮೇಷ್ಠಿಪದದೊಳ್ ಮನೋವೃತ್ತಿಯನ್ನಿಱಿಸಿ ಜೀವಿತಾಂತ್ಯದೊಳ್ ಯೋಗನಿರ್ವಾಣಸಾಧನಮಂ ತನಗೆ ಮಾಟ್ಬುದು ಯೋಗನಿರ್ವಾಣಸಾಧನಕ್ರಿಯೆ: **ಚಾವುಂಡಜಯ,** ಪು. ೧೮೪)

**ಯೋಗಪಲ್ಯಂಕಾಸನ** – ಯೋಗದಲ್ಲಿನ ಅರ್ಧಪದ್ಮಾಸನ (ಪೌಷ್ಯಮಾಸದ ಪೌರ್ಣಮೀ ದಿನದಂದು ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿ ಮುಖನಾಗಿರ್ದಂ: **ಆದಿಪು,** ೧೬. ೪೦ ವ)

**ಯೋಗಪ್ರಯೋಗ** – ಯೋಗನಿರತತೆ (ಸ್ತಿಮಿತೇಕ್ಷಣಮಭ್ರೂಭಂಗಂ ಅನಾಪಾಂಗಾವಲೋಕನಂ ಸುಶ್ಲಿಷ್ಟೋತ್ತಮದಶನಚ್ಛದ ಮಾನಸಮುಮರ್ದುದು ಯೋಗಪ್ರಯೋಗದೊಳ್ ಮುನಿಪತಿಯಾ: **ಆದಿಪು,** ೯. ೮೭)

**ಯೋಗವರ್ತನ** – ತಪಸ್ಸಿನಲ್ಲಿ ತೊಡಗುವುದು; ಮನೋವಾಕ್ಕಾಯಗಳ ಸಂಬಂಧ (ನಿರಂಜನರಾಗಿರ್ದುಂ ಅಶೇಷಲೋಕನಿಹಿತಾರ್ಥಗ್ರಾಹಿಗಳ್ ಯೋಗವರ್ತನ ಮೊಂದುಂ ತಮಗೆಂದುಂ ಇಲ್ಲೆನಿಸಿಯುಂ ಸಿದ್ಧರ್ಕಳ್: **ಪುಷ್ಪದಂಪು,** ೧. ೨)

**ಯೋಗವಿಡಿಸು** – ಕರ್ಮಗಳ ಆಸ್ರವ ಸಂಬಂಧವನ್ನು ನಿಲ್ಲಿಸು (ಸುಕುಮಾರನ ಮೋಹಬಂಧದ ಬಳ್ಳವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ ... ತ್ರಿಲೋಕಪ್ರಜ್ಞಪ್ತಿಯಿಂ ಪರಿವಡಿಗೆಯ್ವಾಗಳ್: **ಸುಕುಮಾಚ,** ೧೧. ೩೮ ವ)

**ಯೋಗಶಾಸ್ತ್ರ** – ಪಾತಂಜಲ ಯೋಗ (ಭರತಸುತಂ ಮರೀಚಿಪರಿಗೃಹೀತ ಪರಿವ್ರಾಜಕವೇಷಂ ... ಕಾಪಿಲಸಿದ್ಧಾಂತಮುಮಂ ಯೋಗಶಾಸ್ತ್ರಮುಮಂತೋಱಿ ಲೋಕಮಂ ಸಮ್ಯಗ್‌ಜ್ಞಾನಪರಾಙ್ಮುಖಂ ಮಾಡಿದಂ: **ಆದಿಪು,** ೬. ೬೩ ವ)

**ಯೋಗಸಮ್ಮಹ** – ಒಂದು ಗರ್ಭಾನ್ವಯ ಕ್ರಿಯೆ; ಕೇವಲಜ್ಞಾನ ಪಡೆದನಂತರ ಹೊಂದುವ ಪೂಜೆ (ಯೋಗಸಮ್ಮಹಾ ಆರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿ ಎಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗಸಮ್ಮಹಕ್ರಿಯೆ** – ಕೇವಲಜ್ಞಾನೋತ್ಪತ್ತಿಯ ನಂತರದ ಪೂಜೆ (ದೀಕ್ಷಾಗ್ರಹಣಾ ನಂತರಂ ಘಾತಿಕ್ಷಯದೊಳ್ ಕೇವಳಜ್ಞಾನೋತ್ಪತ್ತಿಯಾಗೆ ತತ್ಪೂಜೆಯನೆಯ್ದುವುದು: **ಚಾವುಂಡಜಯ,** ಪು ೧೮೭)

**ಯೋಗಾಚಾರ** – ಬೌದ್ಧಮತ (ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತ ನಿತಥಾಭಿಧಾಯಿಗಳ್ ... ಆತ್ಮನಿರಾಕರಣಮನೆ ನುಡಿದು ಮಾಣೆ: **ಆದಿಪು,** ೨. ೭ ವ)

**ಯೌವರಾಜ್ಯ** – ಒಂದು ಗರ್ಭಾನ್ವಯ ಕ್ರಿಯೆ, ಯುವರಾಜ ಪಟ್ಟ ಕಟ್ಟುವುದು (ಗುರುಪೂಜೋಪಲಂಭನ ಯೌವರಾಜ್ಯ ಸ್ವರಾಜ್ಯ ... ಅರ್ಹಂತ್ಯವಿಹಾರಯೋಗ ತ್ಯಾಗಾಗ್ರನಿವೃತ್ತಿಯೆಂಬ ಅಯ್ವತ್ತುಮೂಱು ... ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

## ರ

**ರತಿ** – ಚಾರಿತ್ರಮೋಹಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ನವನೋಕಷಾಯಗಳಲ್ಲಿ ಒಂದು, ಮೆಚ್ಚುಗೆಯನ್ನು ಉಂಟುಮಾಡುವುದು (ಕ್ರಮುಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯ ಜುಗುಪ್ಸಾಭಿಧಾನ ನೋಕಷಾಯಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ರತ್ನತ್ರಯ** – ಮೋಕ್ಷಸಾಧನಗಳಾದ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್ ಚಾರಿತ್ರಗಳು (ಇವಱಿಂ ಸಮ್ಯಗ್ದರ್ಶನಮುಜ್ಜ್ವಳಿಕಂ ಅದುವೆ ಸಮ್ಯಜ್ಞಾನಕ್ಕೆ ಅವಕಾಶಮಕ್ಕುಂ ಅಂತದು ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ: **ಆದಿಪು,** ೫. ೫೯); ಪಂಪ ಪೊನ್ನ ರನ್ನ ಎಂಬ ಮೂವರು ಜೈನ ಕನ್ನಡ ಕವಿಗಳು (ಕವಿಜನದೊಳ್ ರತ್ನತ್ರಯಪವಿತ್ರಮೆನೆ ನೆಗೞ್ದ ಪಂಪನುಂ ಪೊನ್ನಿಗನುಂ ಕವಿರತ್ನನುಂ ಈ ಮೂವರ್ ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ: **ಅಜಿತಪು,** ೧೨. ೩೮)

**ರತ್ನತ್ರಿತಯ** – ರತ್ನತ್ರಯ; ಸಮ್ಯಕ್‌ಜ್ಞಾನ, ಸಮ್ಯಕ್‌ದರ್ಶನ ಮತ್ತು ಸಮ್ಯಕ್‌ಚಾರಿತ್ರಗಳು (ಕಣಿ ರತ್ನತ್ರಿತಯಕ್ಕೆ ಇದೇಂ ಪಿರಿದೆನಲ್ ರತ್ನಾಕರಂ ರತ್ನತೋರಣರತ್ನಾಸನ ರತ್ನವಿಭ್ರಮಣ: **ಆದಿಪು,** ೧೬. ೪)

**ರತ್ನಪ್ರಭೆ** – ಏಳು ನರಕಗಳಲ್ಲಿ ಮೊದಲನೆಯದು, (ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳಗೆ ... ಪುಟ್ಟಿದೈ: **ಶಾಂತಿಪು,** ೭. ೮೩ ವ)

**ರತ್ನಾವಳಿ** – ಒಂದು ವ್ರತ (ಅವರ ಪಕ್ಕದೆ ಮಿಕ್ಕಿ ರತ್ನಾವಳಿಯೆಂಬ ನೋಂಪಿಯಂ ನೋಂತು: **ಕರ್ಣನೇಮಿ,** ೧೪. ೧೯ ವ)

**ರತ್ನಾವಳಿತಪ** – ಒಂದು ಉಪವಾಸ ಎರಡು ಪಾರಣೆ, ಒಂದು ಉಪವಾಸ ಮೂರು ಪಾರಣೆ, ಒಂದು ಉಪವಾಸ ನಾಲ್ಕು ಪಾರಣೆ, ಒಂದು ಉಪವಾಸ ಐದು ಪಾರಣೆ, ಐದು ಉಪವಾಸ ಒಂದು ಪಾರಣೆ, ನಾಲ್ಕು ಉಪವಾಸ ಒಂದು ಪಾರಣೆ, ಮೂರು ಉಪವಾಸ ಒಂದು ಪಾರಣೆ, ಎರಡು ಉಪವಾಸ ಒಂದು ಪಾರಣೆ, ಒಂದು ಉಪವಾಸ ಒಂದು ಪಾರಣೆ – ಹೀಗೆ ೩೦ ಉಪವಾಸ ಹಾಗೂ ೩೦ ಪಾರಣೆ ಮಾಡುವ ವ್ರತ (ಪ್ರಭಾವತಿಯುಂ ಪದ್ಮಾವತಿ ಆರ್ಯಿಕಾ ಪಾದಮೂಲದೊಳ್ ಉಪಾರ್ಜಿತ ರತ್ನಾವಳಿತಪದೊಳ್ ಅಚ್ಯುತಕಲ್ಪದೊಳ್ ಪ್ರತೀಂದ್ರಪದವಿಯಂ ಪಡೆದಳ್: **ಆದಿಪು,** ೩. ೫೮ ವ)

**ರಥಾವರ್ತ** – ಹತ್ತು ವಿಧವಾದ ಪೂಜೆಗಳಲ್ಲಿ ಒಂದು, ವಿದ್ಯಾಧರರು ಮಾಡುವ ಪೂಜೆ (ವಿದ್ಯಾಧರರರ್ಮಾಟ್ಪಿ ರಥಾವರ್ತಮೆಂಬ ಪೂಜೆಯುಂ: **ಸುಕುಮಾಚ,** ೬. ೨೫ ವ)

**ರಮ್ಯಕ** – ಜಂಬೂದ್ವೀಪದ ಏಳು ಜನಪದಗಳಲ್ಲಿ, ಈ ಕ್ಷೇತ್ರದ ದಕ್ಷಿಣಕ್ಕೆ ಹಿಮವತ್ಪರ್ವತವೂ ಉತ್ತರಕ್ಕೆ ಮಹಾಹಿಮವತ್ಪರ್ವತವೂ ಪೂರ್ವಪಶ್ಚಿಮ ಸಮುದ್ರಗಳೂ ಇರುತ್ತವೆ; ಇದು ಒಂದು ಜಘನ್ಯಭೋಗಭೂಮಿ (ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತೈರಾವತಗಳೆಂಬೇೞು ಜನಪದಂಗಳಿಂದಂ: **ಆದಿಪು,** ೧. ೪೮ ವ)

**ರಸಋದ್ಧಿ** – ಮುನಿಗಳಿಗೆ ಒದಗಿಬರುವ ಎಂಟು ಋದ್ಧಿಗಳಲ್ಲಿ ಒಂದು, ಇದರಲ್ಲಿ ಆಲಸ್ಯ ವಿಷತ್ವ ದೃಷ್ಟಿವಿಷತ್ವ ಕ್ಷೀರಸ್ರವಿತ್ವ ಮಧುರಾಸ್ರವಿತ್ವ ಆಜ್ಯಾಂಸ್ರವಿತ್ವ ಅಮೃತಾಸ್ರವಿತ್ವ ಎಂಬ ಆರು ಪ್ರಕಾರ (ಆಲಸ್ಯವಿಷತ್ವಂ ದೃಷ್ಟಿವಿಶತ್ವಂ ಕ್ಷೀರಾಸ್ರವತ್ವಂ ಮಧ್ವಾಸ್ರವತ್ವಂ ಸರ್ಪಿರಾಸ್ರವತ್ವಮಮೃತಾಸವತ್ವಮೆಂದನೇಕಪ್ರಕಾರ ಷಟ್ಪ್ರಕಾರಮಾದ ರಸಋದ್ಧಿಯೊಳಂ: **ಚಂದ್ರಪ್ರಭ,** ೧೪. ೩೦ ವ)

**ರಸಪಂಚಕ** – ಸಿಹಿ, ಹುಳಿ, ಕಟು, ಕಷಾಯ, ತಿಕ್ತ ಎಂಬ ಐದು ರುಚಿಗಳು (ಪೂರ್ವಶರೀರಬಂಧನಸಂಘಾತವರ್ಣ ರಸಪಂಚಕ ಸಂಸ್ಥಾನ ಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ: **ಆದಿಪು,** ೧೬. ೪೯ ವ)

**ರಸಪರಿತ್ಯಾಗ** – ಬಾಹ್ಯತಪಗಳಲ್ಲಿ ಒಂದು, ರುಚಿಕರವಾದುದನ್ನು ಸೇವಿಸದಿರುವುದು (ಕರಮೆ ಮುನಿ ದುಗ್ಧದಧ್ಯಾದಿ ರಸಂಗಳನೆಯ್ದೆ ತೊಱೆದು ... ನಾಲ್ಕನೆಯ ರಸಪರಿತ್ಯಾಗವೆಂಬ ತಪಮಂ ತಳೆದಂ: **ಚಂದ್ರಪ್ರಭ,** ೧೧. ೧೧)

**ರಹೋವ್ಯಾಖ್ಯಾನ** – ಸತ್ಯಾಣುವ್ರತದ ಒಂದು ಅತಿಚಾರ, ಗಂಡಹೆಂಡಿರ ಗುಟ್ಟು ಬಯಲುಮಾಡುವುದು (ನಾನಾ ಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋವ್ಯಾಖ್ಯಾನ ನ್ಯಾಸಾಪಹಾರಕ್ರಮಂ ಅನುಗತಿಯಿಂ: **ಸುಕುಮಾಚ,** ೬. ೧೪)

**ರಾತ್ರಿಭುಕ್ತ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಆರನೆಯ ವರ್ಗಕ್ಕೆ ಸೇರಿದವನು – ರಾತ್ರಿ, ಊಟ ಮಾಡುವ ಹಾಗೂ ಹಗಲಲ್ಲಿ ಹೆಂಡಿರೊಡನೆ ಕೂಡದ ವ್ರತ ತೊಟ್ಟವನು (ಇರುಳಲ್ಲದೆ ಪಗಲೊಳ್ಪೆಂಡಿರ ಸೇವೆಯನೆಯ್ದೆ ಬಿಟ್ಟು ಮುಂ ಪೇಟ್ದ ಗುಣಂ ಬೆರಸಿರ್ದಾ ಶ್ರಾವಕನುರ್ವರೆಯೊಳ್ ತಾಂ ರಾತ್ರಿಭುಕ್ತನಾಜನೆ ಯಾತಂ: **ಧರ್ಮಾಮೃತ,** ೫. ೯೪)

**ರಾತ್ರಿಭುಕ್ತಿವ್ರತಿಕ** – ರಾತ್ರಿಭುಕ್ತ (ದಿವದೊಳ್ ಸುರತವ್ಯಾಪಾರವಿನೋದಮಂ ಅನ್ನಪಾನವುಂ ರಾತ್ರಿಯೊಳಾಸೆವಡುವುದುನುಱಿದು ಎಸಗುವ ವಿವೇಕಿಯಾಜನೆಯ ರಾತ್ರಿಭುಕ್ತಿವ್ರತಿಕಂ: **ಸುಕುಮಾಚ,** ೬. ೩೧)

**ರಿತು ವಿಮಾನ** – ಋತು ವಿಮಾನ, ಸೌಧರ್ಮೇಂದ್ರನ ವಿಮಾನ (ಇದು ರಿತುವಿಮಾನಮಂ ತನ್ನುದಗ್ರಚೂಳಿಕೆಯೊಳ್ ಆಂತುಕೊಂಡಿರೆ ಸಗ್ಗಕ್ಕಿದು ನಿಚ್ಚಣಿಗೆಪ್ಪವೊಲಿರ್ದುದಲ್ತೆ: **ಆದಿಪು,** ೨. ೩೧)

**ರುಚಕಾಚಳ** – ಸುಮೇರುಪರ್ವತದ ಬಳಿಯ ಒಂದು ಪರ್ವತಶ್ರೇಣಿ. (ರುಚಕಾಚಳದ ಮೂಡಣದೆಸೆಯೊಳನಿಂದಿತಮೆಂಬ ಸ್ವಸ್ತಿಕಮೆಂಬ ದಿನಮೆಂಬ ಕಾಂಚನಮೆಂಬ ವಿಡೂರಮೆಂಬಂಜನಮೆಂಬರಿಷ್ಟಮೆಂಬಂಜನಮೂಲಕಮೆಂಬ ಕನಕಮೆಂಬ ಕೂತಳಂಗಳೊಳ್: **ಶಾಂತಿಪು,** ೯. ೧೬೪ ವ)

**ರುತುವಿಮಾನ** – ಅರುವತ್ತುಮೂರು ಇಂದ್ರಕಗಳಲ್ಲಿ ಮೊದಲನೆಯದು (ತುತ್ತತುದಿ ರುತುವಿಮಾನಮನೊತ್ತಿದುದು ನಗವ ಪೆಂಪನದೇನೆಂವೊಗಟ್ಟೆಂ: **ಅಜಿತಪು,** ೧೧. ೭)

**ರೂಪಪರಾವರ್ತನ** – ರೂಪ ಬದಲಾಯಿಸುವಿಕೆ, ಹಾಗೆ ಮಾಡುವ ವಿದ್ಯೆ (ರೂಪಪರಾವರ್ತನಂ ಎಂಬ ವಿದ್ಯೆಯಿಂ ಅಭಿಪ್ರಾಯಂ ವಿಯದ್ಗಾಮಿ ಭೂಮಿಪನೊಳ್ ತೊಟ್ಟುದಂ: **ಶಾಂತಿಪು,** ೨. ೬೬): (ಒಂದು ರೂಪಂ ಕೆಯ್ಕೊಂಡು ಬಿಸುಟ್ಟಂತೆ ಪೆಱಪೆಱವು ಕೊಂಡಂತೆ ಲೋಕದೊಳುಳ್ಳ ರೂಪೆಲ್ಲಮಂ ಕೂಡಿಕೊಂಡೊಡದೊಂದು ರೂಪಪರಾವರ್ತನಂ: **ಜೀವಸಂ,** ೫. ೨ ವ)

**ರೂಪಮದ** – ತನ್ನ ಚೆಲುವಿನ ಬಗೆಗಿನ ಅಹಂಕಾರ, ಅಷ್ಟಮದಗಳಲ್ಲಿ ಒಂದು (ಬಲಮದಮದೊಂದು ರೂಪಮದಮದೊಂದು ... ಅಲ್ಲದೆ ಬೇಱ್ ರಾಗಮುಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಡ ಮುಂದುಗಾಣ್ಬರೇ: **ಪಂಪರಾ,** ೬. ೧೪)

**ರೂಪಾನುಪಾತ** – ದೇಶವ್ರತಾತಿಚಾರಗಳಲ್ಲಿ ಒಂದು, ತನ್ನ ರೂಪವನ್ನು ಬೇರೆಯವರಿಗೆ ತೋರಿಸುವುದು (ಕಪಟದೊಳೇಂ ಪ್ರೇಷಣ ಶಬ್ದ ಪುದ್ಗಲ ಕ್ಷೇಪಸಮುದಿತನಯನಂ ತಾವತಿಚಾರಂಗಳ್ ರೂಪಾನುಪಾತಮಂ ಪ್ರಮಿತದೇಶನಿ ಯಮವ್ರತದೊಳ್: **ಸುಕುಮಾಚ,** ೬. ೧೯)

**ರೌದ್ರಧ್ಯಾನ** – ಕೆಟ್ಟುದರಲ್ಲಿ ಕಾಣುವ ಸಂತೋಷ; ಹಿಂಸಾನಂದ, ಮೃಷಾನಂದ, ಸ್ತೇಯಾನಂದ, ಪರಿಗ್ರಹಾನಂದ ಎಂಬ ನಾಲ್ಕು ಬಗೆ (ಬಹ್ವಾರಂಭ ಸುರಂಭ ರೌದ್ರಧ್ಯಾನಪರಿಣತಂ: **ಆದಿಪು,** ೨. ೧೧ ವ); ಇದರಲ್ಲಿ ನಾಲ್ಕು ಭೇದ (ಹಿಂಸಾನಂದಮೆಂಬ ಪ್ರಥಮರೌದ್ರಂ ... ಮೃಷಾನಂದಮೆಂಬ ದ್ವಿತೀಯರೌದ್ರಂ ... ಸ್ತೇಯಾನಂದಮೆಂಬ ತೃತೀಯರೌದ್ರಂ ... ಸಂರಕ್ಷಣಾನಂದಮೆಂಬ ಚತುರ್ಥರೌದ್ರಂ: **ಚಾವುಂಡಜಯ,** ಪು. ೩೦೫)

**ರೌಪ್ಯಾಚಳ** – ಹಿಮತ್ಪರ್ವತ (ಇಳಾಚಕ್ರವಿಖ್ಯಾತ ಭೂಭೃತ್ಪ್ರಭು ಚಕ್ರಾಧೀಶನೊಳ್ ಮುಟ್ಟಿರಿಪವೊಲೆಸೆದಿರ್ದತ್ತು ರೌಪ್ಯಾಚಳೇಂದ್ರಂ: **ಆದಿಪು,** ೧೩. ೪೬)

**ರೌಪ್ಯಾದ್ರಿ** – ಬೆಳ್ಳಿಯ ಬೆಟ್ಟ (ನಗಂ ಚಂಚತ್ ಚಂದ್ರರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂತಿರ್ದುದು: **ಅಜಿತಪು,** ೪. ೬೮)

**ರೌರವ** – ಒಂದು ನರಕ (ಬಹುವಿಧ ದೇಹಗಳ್ವೆರಸು ರೌರವಮಂ ಪೊಕ್ಕಂ: **ಚಾವುಂಪು,** ಪು. ೩೭೦. ಸಾ. ೧೧)

## ಲ

**ಲಕ್ಷಣ** – ಅಷ್ಟಾಂಗಮಹಾನಿಮಿತ್ತಗಳಲ್ಲಿ ಒಂದು (ಲಕ್ಷಣಮೆಂಬುದು ಶಿರೋಮುಖ ಗ್ರೀವಾದಿಗಳೊಳ್ ಶ್ರೀವೃಕ್ಷ ಸ್ವಸ್ತಿಕ ಭೃಂಗಾರ ಕಲಶ ಕುಲಿಶ ಲಕ್ಷಣವೀಕ್ಷಣಾದಿಂದಂ ತ್ರಿಕಾಲಸ್ಥಾನಮಾನೈಶ್ವರ್ಯಾದಿಗಳನಱಿವುದು: **ಚಾವುಂಡಜಯ,** ಪು. ೧೫೪)

**ಲಕ್ಷ್ಮಿ** – ಜಿನಜನನಿಯನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಆರು ಮಂದಿ ದೇವತೆಗಳಲ್ಲಿ ಒಬ್ಬಳು (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

**ಲಕ್ಷ್ಮೀಮಂಡಪ** – ಸಮವಸರಣದ ನಡುವಣ ಮಂಡಪದ ಹೆಸರು (ಶ್ರೀಮದ್ದ್ವಾದಶಕೋಷ್ಠಸ್ತೋಮಂ ದಳವಾಗೆ ವಿಷ್ಟರಂ ಕರ್ಣಿಕೆ ಪೊಂದಾಮರೆಯೊಂದಂದದೆ ಲಕ್ಷ್ಮೀಮಂಡಪಮೆಸೆದುದಸಮಗುಣ ಗಂಧಾರ್ಹಂ: **ಪಾರ್ಶ್ವನಾಪು,** ೧೬, ೭೦)

**ಲಕ್ಷ್ಮೀಮತಿ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಲಬ್ಧಿ** – ಮೋಕ್ಷಪೂರ್ವಜ್ಞಾನ (ಲಬ್ಧಿ ಕೂಡೆ ಸನ್ಮಾರ್ಗಮಂ ಆದಂ ಸೂಕ್ತದತ್ತಣಜೆವಿಂದಂ ಸಮ್ಯಕ್ ದೃಷ್ಟಿಯಾಗಿ ತಪಮಂ ಕೊಂಡಂ: **ಸಮಯಪ,** ೮. ೧೯೪)

**ಲಬ್ಧಿಗ್ರಹಣ** – ಸಮ್ಯಕ್ತ್ವವನ್ನು ಪಡೆಯುವುದು (ಜಿನದೀಕ್ಷಾಗ್ರಹಣಮಂ ಪಡೆದಳ್ ಲಬ್ಧಿಗ್ರಹಣದಿನೊಳ್ಪುವಡೆವುದೊಂದಚ್ಚರಿಯೇ: **ಪಂಪರಾ,** ೨. ೨೫)

**ಲಬ್ಧಿತ್ರಯ** – ಕಾಲ, ಕರಣ, ಉಪಶಮ ಎಂಬ ಮೂರು ಲಬ್ಧಿಗಳು (ಅಂತು ತನಗೆ ಕಾಲಲಬ್ಧಿಯುಂ ಕರಣಲಬ್ಧಿಯುಂ ಉಪಶಮಲಬ್ಧಿಯುಂ ಎಂಬ ಲಬ್ಧಿತ್ರಯಂ ದೊರೆಕೊಳೆ: **ಆದಿಪು,** ೩. ೧ ವ)

**ಲಬ್ಧಿಪಂಚಕ** – ಐದು ಬಗೆಯ ಲಬ್ಧಿಗಳು (ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ: **ಸುಕುಮಾಚ,** ೩. ೩೯ ವ)

**ಲಬ್ಧಿಬಧಿರಸಮ** – ಹುಟ್ಟುಕಿವುಡನಂತೆ ಮತ್ತೇನನ್ನೂ ಕೇಳದೆ ಜಿನೋಪದಿಷ್ಟತತ್ತ್ವವನ್ನು ಮಾತ್ರ ಏಕಚಿತ್ತದಿಂದ ಗ್ರಹಣಮಾಡುವವನು (ಲಬ್ಧಿಬಧಿರಸಮನೆಂಬೊಂ ನಱುಂಗಿ ಕಿವುಡನಂತೆ ತೊಟ್ಟಗೆಯ್ಯದೆ ತನ್ನ ಮನೋಭಿಲಷಿತಮಪ್ಪರ್ಥಮಂ ಕೇಳ್ದು ಕೈಕೊಳ್ಗುಂ: **ಚಾವುಂಡಜಯ,** ಪು. ೭)

**ಲಬ್ಧಿಬುದ್ಧ** – ಸಮ್ಯಕ್‌ಜ್ಞಾನಿ (ಅನುಕೂಲಕನುವಂ ಆಲಸ್ಯನುಂ ಅವಕಾರ್ಯನುಂ ಲಬ್ಧಿಬುದ್ಧಸದೃಶನುಂ: **ಅಜಿತಪು,** ೧೧. ೩ ವ)

**ಲಬ್ಧಿವಿಹೀನ** – ಕಾಲಲಬ್ಧಿ ಇಲ್ಲದವನು (ಕುದೃಷ್ಟಿಯಂ ಕಂಡಿನಿಸುಂ ಮುಟಿಯಂ ಲಬ್ಧಿವಿಹೀನಂ ... ದರ್ಶನಶುದ್ಧಂ: **ಸಮಯಪ,** ೧೩. ೫೬)

**ಲಬ್ಧೋಪದೇಶ** – ಉಪದೇಶ ಪಡೆದವನು (ನೀಂ ಪೋಗಿ ಕಾಲ್ಗೆಱಗಲೊಡಂ ಕೇವಲಜ್ಞಾನಮಕ್ಕುಂ ಎಂದು ಬೆಸಸಿದೊಡೆ ಲಬ್ಧೋಪದೇಶನಾಗಿ ... ಬಂದೆಱಗಿ: **ಆದಿಪು,** ೧೪. ೧೪೩ ವ)

**ಲಾಂತವ** – ಒಂದು ಕಲ್ಪ (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಲಿಪಿಸಂಖ್ಯಾನಸಂಗ್ರಹ** – ಒಂದು ಗರ್ಭಾನ್ವಯ ಕ್ರಿಯೆ, ಅಕ್ಷರಾಭ್ಯಾಸ (ಲಿಪಿಸಂಖ್ಯಾನಸಂಗ್ರಹ ಉಪನಯನಬ್ರತಚರ್ಯ ... ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಲಿಪಿಸಂಖ್ಯಾನಸಂಗ್ರಹಕ್ರಿಯೆ** – ಮಗುವಿಗೆ ಅಕ್ಷರಾಭ್ಯಾಸಕ್ಕೆ ತೊಡಗುವುದು (ಅಯ್ದನೆಯ ವರ್ಷದೊ ಜಿನಪೂಜಾಪೂರ್ವಕಮುಪಾಧ್ಯಾಯರಂ ಮನ್ನಿಸಿ ಪ್ರಥಮಾಕ್ಷರಮಂ ತೋರ್ಪುದು ಲಿಪಿಸಂಖ್ಯಾನಸಂಗ್ರಹಕ್ರಿಯೆ: **ಚಾವುಂಡಜಯ,** ಪು. ೧೮೨)

**ಲೇಶ್ಯಾ** – ಕರ್ಮಸಂಬಂಧವಾದ ಬಣ್ಣಗಳು ಆರು: ಕೃಷ್ಣ, ನೀಲ, ಕಪೋತ, ಪೀತ, ಪದ್ಮ, ಶುಕ್ಲ; ಇವು ಕ್ರಮವಾಗಿ ಆಲಸ್ಯ, ಬುದ್ಧಿಹೀನತೆ, ಅವಿವೇಕ, ವಿಷಯಲಂಪಟತೆ, ಅಭಿಮಾನ, ಕಾಪಟ್ಯ, ಅತಿನಿದ್ರೆ ಇವುಗಳಿಗೆ ಕಾರಣ (ಅಂತವಿಶ್ರಾಂತ ಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧ ಲೇಶ್ಯಾಪರಿಣಾಮಪರಿಪೂರ್ಣಂ ಅಪ್ರಮತ್ತಗುಣಸ್ಥಾನದೊಳ್ ನಿಂದು ... ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ: **ಮಲ್ಲಿನಾಪು,** ೧೪. ೫೭ ವ)

**ಲೇಶ್ಯಾಶುದ್ಧಿ** – ಕರ್ಮಸಂಬಂಧೀ ಬಣ್ಣಗಳ ನಾಶ (ಅಂತು ಪೊಱಗಣ ಒಳಗಣ ಎರಡುಂ ಲೇಶ್ಯಾಶುದ್ಧಿಯಂ ತಾಳ್ದಿ ತಱತಱಿಸಿ ಶೀತಳತಳದೊಳಗೆ ಬಳ್ವಳ ಬಳೆದು: **ಶಾಂತಿಪು,** ೯. ೩೩ ವ)

**ಲೇಶ್ಯಾವಿಶುದ್ಧಿ** – ಲೇಶ್ಯೆಯು ಮಂದವಾಗುತ್ತ ನಡೆದು ಇಲ್ಲವಾಗುವುದು (ಜ್ಞಾನಾದಿ ಪರಿಣಾಮಂಗಳೊಳ್ ನಿರತಿಶಯ ಲೇಶ್ಯಾವಿಶುದ್ಧಿಯಂ ತಾಳ್ದಿ: **ಆದಿಪು,** ೧೦. ೧೪ ವ)

**ಲೇಶ್ಯೆ** – ಆತ್ಮವು ಯಾವುದರ ಮುಖಾಂತರ ಪುಣ್ಯಾಪಾಪಗಳಿಗೆ ಅಧೀನವಾಗುವುದೋ ಅದಕ್ಕೆ ಲೇಶ್ಯೆ ಎಂಬ ಹೆಸರು (ಗತಿಮೆಯ್ವೆತ್ತ ಕಷಾಯಲಿಂಗತತಿ ಮಿಥ್ಯಾದರ್ಶನ ಜ್ಞಾನಮಪ್ರತಿಮಾಸಂಯುತ ತಾನಸಿದ್ಧತೆ ನಿತಾಂತಂ ಲೇಶ್ಯೆಯೆಂದಿರ್ಪತೊಂದು ತೆಱಂ: **ಸುಕುಮಾಚ,** ೮. ೬)

**ಲೋಕನಾಡಿಕಾ** – ತ್ರಸಜೀವಗಳ ಉತ್ಪತ್ತಿ ಸ್ಥಳ (ಸಪ್ರವೀಚಾರಗುಣನುಂ ಲೋಕನಾಡಿಕಾಭ್ಯಂತರ ಗತಾವಧಿಜ್ಞಾನನುಂ: **ನೇಮಿನಾಪು,** ೪. ೬೫ ವ)

**ಲೋಕಪಾಲ** – ಪ್ರತಿಯೊಬ್ಬ ಇಂದ್ರನಿಗೂ ಪೂರ್ವಾದಿ ದಿಕ್ಕುಗಳ ರಕ್ಷಕರಾಗಿರುವ ದಿಕ್ಪಾಲರು (ಸೋಮ ಯಮ ವರುಣ ಕುಬೇರಪ್ರಮುಖ ಲೋಕಪಾಲಾಭಿಯೋಗ್ಯ ದಿಗ್ಗಜೇಂದ್ರ ದೇವವಿಹಾರಪ್ರಾಸಾದಾಭಿರಾಮಮುಂ: **ಆದಿಪು,** ೧. ೪೯ ವ);

**ಲೋಕಪಾಳ** – ಹತ್ತು ದೇವತಾವರ್ಗಗಳಲ್ಲಿ ಒಂದು (ಸಾಮಾನಿಕ ತ್ರಾಯಸ್ತ್ರಿಂಶತ್ಪಾರಿಷದ ಆತ್ಮರಕ್ಷ ಲೋಕಪಾಳ ಅಭಿಯೋಗ್ಯ ಕಿಲ್ಬಿಷರೊಡನೆ: **ಆದಿಪು,** ೭. ೪೨ ವ)

**ಲೋಕಪೂರಣಕ್ರಿಯಾ** – ಕೇವಲಿಗಳ ಆತ್ಮವು ಭೂಮಂಡಲದ ವಾಯುತ್ರಯದೊಡನೆ ಬೆರೆಯುವುದು (ವ್ಯಾಪ್ತಸಪ್ತಘನರಜ್ಜುಪ್ರಮಾಣಾಶೇಷ ಜಗತ್ಪ್ರದೇಶ ಲೋಕಪೂರಣ ಕ್ರಿಯಾಪರಿಸಮಾಪ್ತಿಯಂ ಮಾಡಿ: **ಆದಿಪು,** ೧೬. ೪೯ ವ)

**ಲೋಕಮೂಢ** – ಲೋಕದ ನಿಜ ಸ್ವರೂಪವನ್ನು ತಿಳಿಯದವನು (ಧರದೊಳ್ ಕಮ್ಮರಿಯೊಳ್ ಮದೋರ್ವಿರುಹದೊಳ್ ಸಪ್ತಾರ್ಚಿಯೊಳ್ ನೀರ್ಗಳೊಳ್ ಭರದಿಂ ದೇಹಮನಿಕ್ಕಿಯುಜ್ಜುಗದೆ ಮಿಥ್ಯಾತೀರ್ಥಮಂ ಮಿಂದುಮಾದರದಿಂ ದುಷ್ಟರ ಪೇಟ್ಕೆಯೊಳ್ ನೆಗಟ್ಟುಮತ್ಯಾನಂದದಿಂದೆಯ್ದುವಂ ಸುರಲೋಕಂಗಳನೆಂಬ ಗಾವಿಲನವಂ ತಾಂ ಲೋಕಮೂಢಂ ನೃಪಾ: **ಧರ್ಮಾಮೃತ,** ೫. ೧೫೩)

**ಲೋಕಮೂಢತ್ವ** – ಮೂಢತ್ರಯಗಳಲ್ಲಿ ಒಂದು, ಅಕೃತ್ರಿಮ ಲೋಕಸ್ವರೂಪವನ್ನು ತಿಳಿಯದಿರುವುದು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ಲೋಕಾಂತಿಕದೇವ** – ಬ್ರಹ್ಮಸ್ವರ್ಗದ ಅಂತ್ಯಪಟಲದಲ್ಲಿನ ಅಷ್ಟವಿಧ ದೇವತೆಗಳು; ಇವರು ವಿಷಯವಿರಕ್ತರು, ಇವರು ಚತುರ್ದಶಪೂರ್ವಧರರು, ತೀರ್ಥಂಕರರಿಗೆ ವೈರಾಗ್ಯವುಂಟಾದಾಗ ಅವರ ಪ್ರಶಂಸೆಗಾಗಿ ಭೂಲೋಕಕ್ಕೆ ಬರುವರು (ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ದತೋಯ ತುಷಿತ ಅವ್ಯಾಬಾಧ ಅರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು: **ಆದಿಪು,** ೯. ೬೦ ವ)

**ಲೋಕಾಕಾರ** – ಅಧೋ, ಮಧ್ಯ, ಊರ್ಧ್ವ ವಿಭಾಗಗಳುಳ್ಳ ಲೋಕದ ಆಕಾರವು ಸೊಂಟದ ಮೇಲೆ ಎರಡೂ ಕೈಗಳನ್ನಿಟ್ಟು ಕಿಸುಗಾಲಿನಲ್ಲಿ ನಿಂತ ವ್ಯಕ್ತಿಯನ್ನು ಹೋಲುವಂಥದು (ಲೋಕಾಕಾರಮಂ ಅಭಿನಯಿಪಾಕಾರಂ ನೆಗಟ್ ನಿಂದು ವೈಶಾಖಸ್ಥಾನಾಕಾರದೊಳ್ ಮರುದ್ ವೃತನಾ ಕುಳಿಶಾಯುಧನದೊಂದು ಚೆಲ್ವಂ ಪಡದಂ: **ಆದಿಪು,** ೭. ೧೧೬)

**ಲೋಕಾಕಾರಕಥನ** – ಲೋಕಾಕಾರಗಳ ವರ್ಣನೆ, ಪುರಾಣದ ಎಂಟು ಅವಯವಗಳಲ್ಲಿ ಒಂದು (ಆ ಪುರಾಣಕ್ಕಂ ಲೋಕಾಕಾರಕಥನಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಮಣೀಯಥಾಖ್ಯಾತಮುಂ ತೀರ್ಥಮಹಿಮೆ ಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವಿಧಾನ ವರ್ಣನಮುಂ ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ.: **ಆದಿಪು,** ೧. ೪೨ ವ)

**ಲೋಕಾಕಾಶ** – 'ಷಡ್ದ್ರವ್ಯ'ಗಳನ್ನು ಹೊಂದಿರುವ ಆಕಾಶಪ್ರದೇಶ (ಲೋಕಾಕಾಶಪ್ರದೇಶ ಪ್ರಮಾಣಪರಿಮಾಣಮುಂ ಅಸ್ಮದಾದ್ಯನುಮೇಯಮುಂ ಸರ್ವಜ್ಞಪ್ರತ್ಯಕ್ಷಗೋಚರ ಮಪ್ಪುದು ಮುಖ್ಯಕಾಲಂ: **ಆದಿಪು,** ೬. ೪೮)

**ಲೋಕಾಯತ** – ನಾಸ್ತಿಕ (ಎಂದು ತಥಾಗತಮತಮಂ ತಿರಸ್ಕರಿಸಿ ತನ್ನೊಳ್ ಅಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತ ಶಾಕ್ಯಮತಾವಲಂಬಿಯಂ ಅನವಲಂಬಿತಂ ಗೆಲ್ದು: **ಶಾಂತಿಪು,** ೮. ೧೪೭ ವ)

**ಲೋಕಾಯತಿಕ** – ನಾಸ್ತಿಕತೆ (ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಲಚ್ಚುವಿಡಿದು: **ಆದಿಪು,** ೨. ೭ ವ)

**ಲೋಚು** – ಮುನಿಗಳು ತಮ್ಮ ತಲೆಗೂದಲನ್ನು ತಾವೇ ಕಿತ್ತುಕೊಳ್ಳುವುದು (ಉನ್ಮೀಲಿತ ಲೋಚನೆ ಲೋಚಂ ಮಾಡಲೆಂದು ... ಕೋಮಲಾಂಗುಲಿಗಳ್ ... ಕುಂತಳ ಕಮಳವನದೊಳಗೆ ಪುಗುವಾಗಳ್: **ನೇಮಿನಾಪು,** ೩. ೨೮ ವ)

**ಲೋಚುಗೆಯ್** – ಜಿನದೀಕ್ಷೆ ಪಡೆದವರ ಕೂದಲು ಕೀಳು (ಲೋಚುಗೆಯ್ದ ಅಂಕಕಾಱಂಗೆ ಪಂಚರಾಯಿತದ ತೊಗಲನೇಱಿಸುವಂತೆ ಪಂಚಮಹಾವ್ರತಂಗಳನೇಱಿಸಿ: **ಹರಿವಂಶ,** ೧೦. ೩೦ ವ)

**ಲೋಹಿತಾಶ್ವ** – ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

# ವ

**ವಂದನಮಾಲಿಕೆ** – ವಿಶೇಷ ಸಂದರ್ಭಗಳಲ್ಲಿ ಬೀದಿಗಳಲ್ಲಿ ಕಟ್ಟುವ ತೋರಣ (ಹರಿಚಂದನ ವಂದನಮಾಲಿಕೆಗಳ್ ಪರಿವೇಷ್ಟಿಸೆ ಮೆಱೆದುವು ಶಾಲಿಕೆಗಳ್: **ಚಂದ್ರಪ್ರಪು,** ೪. ೬೩)

**ವಂದನಮಾಲೆ** – ವಂದನಮಾಲಿಕೆ (ತನ್ನ ಪುರದ ಪೋಪ ಬರ್ಪ ರಾಜಮಾರ್ಗದೊಳಂ ಚತುರ್ವಿಂಶದರ್ಹತ್ಪ್ರತಿಮಾವಿರಾಜಮಾನ ಹೇಮದಾಮ ವಿಲಂಬಿತ ಮಣಿಘಂಟಾಸಮನ್ವಿತ ವಂದನಮಾಲೆಗಳಂ: **ಆದಿಪು,** ೧೬. ೧೧ ವ)

**ವಂದನಮಾಳಾ** – ತೋರಣ (ಸಂಛನ್ನ ವಂದನಮಾಳಾ ಲಲಿತಾಂಶುಕಧ್ವಜ ವಿಳಾಸಾಕೀರ್ಣಮಂ ಮೆಚ್ಚಿ ಪೊಕ್ಕಂ ಅಯೋಧ್ಯಾಪುರಮಂ: **ಆದಿಪು,** ೧೪. ೧೪೯)

**ವಂದನಮಾಳೆ** – ತೋರಣ (ವಂದನಮಾಳೆಗಳಿಂದ ಸ್ಪಂದಿತಕೇತುಗಳಿನೆಸೆವ ನಿಜಮಂದಿರದೊಳ್ ತಂದು ಕುಮಾರನಂ ಇರಿಸಿದನಂದು: **ಕರ್ಣನೇಮಿ,** ೫, ೩೮)

**ವಂದನಾಭಕ್ತಿ** – ಪ್ರಕೀರ್ಣಕಗಳಲ್ಲೊಂದು, ಅರ್ಹದಾದಿಗಳ ವಂದನೆಯ ಲಕ್ಷಣ; ಭಾವಪೂಜಾಭೇದ (ಶ್ರೀ ಜಿನಚಂದ್ರಂ ವಿಬುಧಸಮಾಜಂಬೆರಸು ಅಂದು ವಂದನಾಭಕ್ತಿಯೊಳೇಂ ರಾಜಿಸಿದನೋ: **ಶಾಂತಿಪು,** ೫.೧)

**ವಕ್ತೃ** – ಬಹುಶ್ರುತತತ್ವನ್ನೊಳಗೊಂಡಂತೆ ಎಂಟು ಗುಣಗಳುಳ್ಳವನು (ವಕ್ತೃವೆಂಬೊಂ ಪ್ರವಯಸ್ಕನುಂ ವಪುಷ್ಮಂತನುಮರೋಗನುಂ ಬಹುಶ್ರುತನುಂ ಪ್ರಗಲ್ಭನುಂ ಮೇಧಾವಿಯುಂ ನಿರೂಪಕ್ರಿಯಾಪ್ರವೃತ್ತನುಂ ಚಾರಿತ್ರವಂತನೆಂದಷ್ಟಗುಣ ಸಮನ್ವಿತನಕ್ಕು: **ಚಾವುಂಡಜಯ,** ಪು. ೫)

**ವಜ್ರಕಾಂಡ** – ಚಕ್ರವರ್ತಿಗೆ ಲಭಿಸುವ ಬಿಲ್ಲು (ವಜ್ರಕಾಂಡಮೆಂಬ ಚಾಪದಿಂದಂ ಸಿಂಹಾಟಕಮೆಂಬ ಕೊಂತದಿಂದಂ: **ಶಾಂತಿಪು,** ೧೧. ೮೪ ವ)

**ವಜ್ರಮಯ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲೊಂದಾದ ಚರ್ಮರತ್ನದ ಹೆಸರು (ಅಗಾಧಜಲದುರ್ಗಸಮುತ್ತರಣ ನಿರತ ಸಕಳ ಶಿಬಿರ ಸಂಧಾರಣಶಕ್ತಿ ಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ: **ಆದಿಪು,** ೧೧. ೩ ವ)

**ವಜ್ರವೃಷಭನಾರಾಚಸಂಹನನ** – ವಜ್ರಕ್ಕೆ ಸಮಾನವಾದ ಅಸ್ತಿಪಂಜರವು ನಿರ್ಮಾಣವಾದ ಹಾಗೂ ವಜ್ರಸಮಾನವಾದ ಕೀಲುಗಳಿಂದ ಕೀಲಿತವಾದ ದೇಹ (ಅಂತು ನಿಸ್ವೇದ ನಿರ್ಮಲ ಕ್ಷೀರಗೌರಕ್ತಜ ಸಮಚತುರಸ್ರಸಂಸ್ಥಾನ ವಜ್ರವೃಷಭನಾರಾಚಸಂಹನನುಂ: **ಆದಿಪು,** ೮. ೪ ವ)

**ವಣಿಗ್ವಂಶ** – ಆದಿದೇವನು ವಿಭಾಗಿಸಿದ ಮೂರು ವರ್ಣಗಳಲ್ಲಿ ಒಂದು, ವಣಿಕರು ಎಂಬ ವರ್ಣ (ತನ್ನ ಪಡೆದ ಕ್ಷತ್ರಿಯವಣಿಕ್ಶೂದ್ರರೆಂಬ ಮೂಱುವರ್ಣಂಗಳೊಳಗೆ ... ವಣಿಗ್ವಂಶಕ್ಕೆ ಪಾಶುಪಾಲ್ಯ ಕೃಷಿ ಪಣ್ಯಕರ್ಮಂಗಳುಮಂ: **ಆದಿಪು,** ೮. ೬೪ ವ); ವೈಶ್ಯವರ್ಣ (ವಣಿಗ್ವಂಶಕ್ಕೆ ಜಳಸ್ಥಳಯಾತ್ರಾಸಂವೃತಮರ್ಥ ಪ್ರವರ್ತನಮುಮಂ: **ಆದಿಪು,** ೮ ೭೩ ವ)

**ವನವಧು** – ವ್ಯಂತರ ದೇವತೆ (ವನವಧೂಬ್ರಾತಂ ಔತ್ಸುಕ್ಯವದ್ಭಾವನಭಾಮಾರಾಜಿ ತದ್ಭಾವನಸುರರ್ ಅಖಿಳ ವ್ಯಂತರ ಜ್ಯೋತಿರಿಂದ್ರರ್: **ಆದಿಪು,** ೧೦. ೩೬)

**ವರ್ಣಚತುಷ್ಕ** – ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಎಂಬ ಸಾಂಪ್ರದಾಯಿಕ ವೈದಿಕ ವಿಭಾಗಕ್ರಮ (ವದನಂ ತೋಳ್ ತೊಡೆ ಪಾದಮೆಂಬಿವನಿವರ್ ಶುಶ್ರೂಷೆಗೆಯ್ಯಲ್ಕೆ ಲಾಭದಲಂಪಿಂ ನಡೆಯಲ್ಕೆ ಕೈದುವಿಡಿಯಲ್ಕೋದಲ್ಕಜಂ ಬೇಱೆ ತೋಱಿದೊಡಾ ವರ್ಣಚತುಷ್ಕಮಂ ಕುಮತಿಗಳ್: **ಆದಿಪು,** ೮. ೭೩)

**ವರ್ಣತ್ರಯ** – ಆದಿದೇವನು ಸ್ಥಾಪಿಸಿದ ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಮೂರು ವರ್ಣಗಳು (ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಮಿನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಜಿಪಲೆಂದು: **ಆದಿಪು,** ೮. ೭೨ ವ);

**ವರ್ಣಲಾಭ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಬ್ರಾಹ್ಮಣತ್ವವನ್ನು ಪಡೆಯುವುದು (ವಿವಾಹ ವರ್ಣಲಾಭ ಕುಲಚರ್ಯಾ ಗೃಹೀಶಿತ್ವ ... ವಿಹಾರಯೋಗ್ಯ ತಾನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾಧಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವರ್ಣಲಾಭಕ್ರಿಯೆ** – ಮಕ್ಕಳನ್ನು ಗೃಹಧರ್ಮದಲ್ಲಿ ಅನುಷ್ಠಿಸುವುದು (ಪಿತೃದತ್ತ ಧನಮಂ ದಾನಧರ್ಮಾದಿಗಳೊಳ್ ತವಿಸಿ ಜಸಮುಂ ಧರ್ಮಮನುಪಾರ್ಜಿಸುವ ವಸ್ತು ಮಕ್ಕಳಂ ಗೃಹಧರ್ಮದೊಳನುಷ್ಠಿಸುವುದು ವರ್ಣಲಾಭಕ್ರಿಯೆ: **ಚಾವುಂಡಜಯ,** ಪು. ೧೮೩)

**ವರ್ಣಸಂಕರ** – ಮದುವೆಯ ಮೂಲಕ ಜಾತಿಗಳು ಬೆರಕೆಯಾಗುವುದು (ಪ್ರಜಾಪತಿಯುಂ ... ಯಥಾಯೋಗ್ಯಮುಪದೇಶಂಗೆಯ್ದು ವರ್ಣಸಂಕರ ಮಾಗಲೀಯದೆ ತಂತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ: **ಆದಿಪು,** ೮. ೬೪ ವ)

**ವಸನಾಂಗಕುಜ** – ಬೇಕಾದ ಬಟ್ಟೆ ನೀಡುವ ಕಲ್ಪಕುಜ (ಪಟಿ ಚಿತ್ರವಟಿ ಜೋಗಂ ಪಟಿಯಂ ದೇವಾಂಗಮೆಂಬ ಬಸನಂಗಳನೇಂ ಫಳಿಯಿಸುವುವೋ ... ವಸನಾಂಗಕುಜಂ: **ಆದಿಪು,** ೫. ೩೪)

**ವಸುಂಧರೆ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ವಸುಧಾರೆ** – ಪಂಚಾಶ್ಚರ್ಯಗಳಲ್ಲಿ ಒಂದು, ಚಿನ್ನದ ಮಳೆ (ಬೆಸಸಿದೊಡೆ ಮೂಱು ಪೊೞ್ತುಂ ವಸುಧಾರೆಯನೊಸೆದು ಮೂಱುಕೋಟಿಯುಮರೆಯರಂ ವಸುಪತಿ ಕರೆದು ರಾಜಾವಸ್ಥದೊಳೇಂ ಪಿರಿದೊ ಜಿನನ ಪುಣ್ಯಾತಿಶಯಂ: **ಅಜಿತಪು,** ೩. ೫); ಚಿನ್ನದ ಮಳೆ (ವಸುಧಾರೆ ನಾಡೆಯುಂ ಕಣ್ಗೆಸದಳಮಾಯ್ತು ಅಮರಕರ ಪರಿಚ್ಯುತಮೆತ್ತಂ: **ಆದಿಪು,** ೧೦. ೨)

**ವಸ್ತುಸ್ತವ ರೂಪಸ್ತವ ಗುಣಸ್ತವ** – ಮಹಾಪುರುಷನ ಮಹಿಮೆ ಗುಣಾತಿಶಯ ಮತ್ತು ಚೆಲುವನ್ನು ಕುರಿತು ಸ್ತೋತ್ರಮಾಡುವುದು (ವಸ್ತುಸ್ತವ ರೂಪಸ್ತವ ಗುಣಸ್ತವಂಗಳಿನಿಂದ್ರಂ ಭವರಿಪುವಂ ಸ್ತುತಿಯಿಸಿ: **ಪುಷ್ಪದಂಪು,** ೧೧. ೫೮)

**ವಸ್ತ್ರಾಂಗ** – ಕಲ್ಪಕುಜಗಳಲ್ಲಿ ಒಂದು, ಬೇಕಾದ ಬಟ್ಟೆಯನ್ನು ನೀಡುವಂಥದು (ವಸ್ತ್ರಾಂಗದ ಭೂಷಣಾಂಗದಳವಂ ಚಕ್ರರ್ಶವರಂ ತಾಳ್ದಿದಂ: **ಆದಿಪು,** ೪. ೩೫)

**ವಾಕ್ಯಶುದ್ಧಿ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳು (ಭಾವ ಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ವಾತವಲಯ** – ಅನಂತವಾದ ಲೋಕವನ್ನು ಆವರಿಸಿರುವ ವಾಯುಸಮೂಹ (ಕವಾಟಕ್ರಿಯೆಯಂ ನೆಱಪಿ ತದನಂತರಸಮಯದೊಳ್ ವಾತವಳಯಮುಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ: **ಆದಿಪು,** ೧೬. ೪೯ ವ)

**ವಾತ್ಸಲ್ಯ** – ಸಮ್ಯಕ್‌ದರ್ಶನದ ಒಂದು ಅಂಗ (ನಿರ್ವೃತಿಶ್ರೀಯ ಭಂಡಾರದಮೂಲ್ಯ ವಸ್ತುವೆನಿಪ ವಾತ್ಸಲ್ಯದ ಕಥೆಯಂ ಇಂತೆಂದು ಪೇೞ್ದರ್: **ಧರ್ಮಾಮೃ,** ೮. ೩ ವ)

**ವಾನಬ್ಯಂತರ** – ಭವನವಾಸಿಗ, ವಾನವ್ಯಂತರ ಜ್ಯೋತಿಷ್ಯ ಮತ್ತು ಕಲ್ಪವಾಸಿ ಎಂಬ ನಾಲ್ಕು ವಿಧವಾದ ದೇವತಾವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವನು; ವಾನಬ್ಯಂತರರಲ್ಲಿ ಎಂಟು ವಿಧ (ಕಿನ್ನರ ಕಿಂಪುರುಷ ಮಹೋರಗ ಗಂಧರ್ವ ಯಕ್ಷ ರಾಕ್ಷಸ ಭೂತ ಪಿಶಾಚಾಭಿಧಾನತ್ವದಿನಷ್ಟವಿಧರಪ್ಪ ವಾನಬ್ಯಂತರರುಂ ... ಒಂದಾಗಿ: **ಸುಕುಮಾಚ,** ೮. ೬೫ ವ)

**ವಾನರಚಿಹ್ನ** – ಸುಗ್ರೀವ (ವಾನರಚಿಹ್ನಂ ತನ್ನಭಿಮಾನಂ ನಿಂದತ್ತು ಪೂಣ್ಕೆ ಸಂದತ್ತೆನಗೆಂದೇನೆಸೆದನೋ: **ಪಂಪರಾ,** ೧೦. ೫೨)

**ವಾನರವಿದ್ಯೆ** – ವಾನರರೂಪವನ್ನು ಹೊಂದುವ ಒಂದು ಬಗೆಯ ವಿದ್ಯೆ (ಹನುಮಂ ... ವಾನರವಿದ್ಯೆಯಂ ತಳೆದು ವಾನರರೂಪುಮನಾಂತು ವಿದ್ವಿಷತ್ಸೇನೆಯೊಳಾನೆಯಂ ಕುದುರೆಯಂ: **ಪಂಪರಾ:** ೧೦. ೨೧೮)

**ವಾನವ್ಯಂತರ** – ವಾನಬ್ಯಂತರ, ನಾಲ್ಕು ಬಗೆಯ ದೇವತಾವರ್ಗಗಳಲ್ಲಿ ಒಂದು (ದೇವಗತಿ ನಾಲ್ಕಕ್ಕುಂ ಎಂತೆನೆ ಭವನವಾಸಿಗೆ ವಾನವ್ಯಂತರ ಜ್ಯೋತಿಷ್ಯ ಕಲ್ಪವಾಸಿ ಭೇದಭಿನ್ನತ್ವದಿಂ: **ಶಾಂತಿಪು,** ೧೨. ೬)

**ವಾನವ್ಯಂತರಿಗ** – ವಾನಬ್ಯಂತರ (ಶಂಖನಾದದಿಂ ಭವನವಾಸಿಗರುಂ ಭೇರೀರವದಿಂ ವಾನವ್ಯಂತರಿಗರುಂ ಸಿಂಹವಿಸ್ವನದಿಂ ಜ್ಯೋತಿಷ್ಕರುಂ ಘಂಟಾಟಂಕಾರದಿಂ ಕಲ್ಪಾಮರರುಮಱಿದು: **ಅಜಿತಪು,** ೪. ೭ ವ)

**ವಾರ್ತೆ** – ಅಸಿ ಮಷಿ ಕೃಷಿ ವಾಣಿಜ್ಯ ಶಿಲ್ಪಕಾರ್ಯಗಳಿಂದ ಶುದ್ಧವೃತ್ತಿಗಳಿಂದ ಸಂಪಾದಿಸುವುದು (ಅಸಿ ಮಷಿ ಕೃಷಿ ವಣಿಗ್ವಿದ್ಯಾಶಿಲ್ಪಕರ್ಮಂಗಳಿಂ ಶುದ್ಧವೃತ್ತಿಯಿಂದೆ ಅರ್ಥೋರ್ಪಾರ್ಜನಂಗೆಯ್ವ ವಾರ್ತೆಯುಂ: **ಆದಿಪು,** ೧೫. ೧೩ ವ)

**ವಾಲುಕಪ್ರಭೆ** – ಏಳು ನರಕಗಳಲ್ಲಿ ಒಂದು (ಅಲ್ಲಿಂದತ್ತಲ್ ಏಕರಜ್ಜುಪ್ರಮಾಣಾಂತರದೊಳ್ ಮೇಘೆಯೆಂಬ ಪೆಸರ ವಾಲುಕಪ್ರಭೆಯೆಂಬ ಮೂಱನೆಯ ನರಕಮಿರ್ದುದು: **ಅಜಿತಪು,** ೧೧. ೬ ವ)

**ವಾಳುಕಾಪ್ರಭೆ** – ವಾಲುಕಪ್ರಭೆ (ಅಲ್ಲಿಂ ಕೆಳಗೇಕರಜ್ವಂತರದೊಳಷ್ಟವಿಂಶತಿಸಹಸ್ರ ಯೋಜನಬಾಹುಲ್ಯದಿಂ ವಾಳುಕಾಪ್ರಭೆಯೆಂಬ ಮೂಱನೆಯ ನರಕಂ: **ಸುಕುಮಾಚ,** ೧೧. ೪೧ ವ)

**ವಿಕಥೆ** – ಧರ್ಮವಿಮುಖಿಯಾದ ಕಥೆ (ಧರ್ಮಶಾಸ್ತ್ರಕ್ಕಜಿವುಳ್ಳಂ ವಿಕಥೆಯೊಳ್ ಮನಂ ನಿಜಿಸುಗುಮೇ: **ಪಂಪರಾ,** ೩. ೬)

**ವಿಕ್ರಿಯರ್ಧಿ** – ತಪಸ್ಸಿನ ಫಲವಾದ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು (ಪತ್ತುಸಾಸಿರ್ವರ್ ವಿಕ್ರಿಯರ್ಧಿಪ್ರಾಪ್ತರುಂ ಅಯ್ಸಾಸಿರದ ನಾನೂರ್ವರ್ ಅವಧಿಜ್ಞಾನಿಗಳುಂ: **ಚಾವುಂಪು,** ೨೬೦, ಸಾ.೧೦)

**ವಿಕ್ರಿಯಾಋದ್ಧಿ** – ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು, ಅಣಿಮಾ ಮುಂತಾದ ಹನ್ನೊಂದು ಬಗೆಯ ವಿದ್ಯೆಗಳು ಲಭ್ಯ (ಅಣಿಮ ಮಹಿಮ ಲಘಿಮ ಗರಿಮ ಪ್ರಾಪ್ತಿ ಪ್ರಾಕಾಮ್ಯಮೀಶತ್ವಂ ವಶಿತ್ವಂ ಅಪ್ರತಿಹಘಾತಮಂತರ್ಧಾನಂ ಕಾಮರೂಪಿತ್ವಮುಮೆಂಬ ಬಹುಭಂಗೀಸಂಗತಮಪ್ಪ ವಿಕ್ರಿಯಾಋದ್ಧಿಯೊಳಂ; **ಚಂದ್ರಪ್ರಪು,** ೧೪. ೩೦ ವ)

**ವಿಕ್ರಿಯಾಬಲ** – ಮಾಯಾಶಕ್ತಿ (ಅಂತು ವಿಕ್ರಿಯಾಬಲದೆ ಗೀರ್ವಾಣವಾರಣಂ ವಿಗುರ್ವಿಸೆ: **ಅಜಿತಪು,** ೪. ೨೩ ವ)

**ವಿಕ್ರಿಯಾಶಕ್ತಿ** – ವಿಕ್ರಿಯಾಬಲ (ವಾಹನಾಮರವಿಕ್ರಿಯಾಶಕ್ತಿಸಂಯುಜನಿತ ವಾಜಿಸಾಮಜಾದ್ಯನೇಕಯಾನಂಗಳನೇಜಿ ಪೋಗಿ: **ಚಂದ್ರಪ್ರಪು,** ೪. ೭೬ ವ)

**ವಿಕ್ರಿಯೆ** – ಶರೀರವನ್ನು ಜಡ–ಸೂಕ್ಷ್ಮ ಮೊದಲಾಗಿ ಮಾಡಲು ಸಾಧ್ಯವಾದ ಶಕ್ತಿ (ಅಧಿಪಂ ಸುಮುಖದಿಂ ಬೆಸಸಿದೊಡಲ್ಲದೊಲ್ಲೆವೆನೆ ವಿಕ್ರಿಯೆಯಿಂದಂ ಬೆಸಸುವಂತೆ ಮಾಡಿ: **ಆದಿಪು,** ೯. ೧೧೨)

**ವಿಕ್ಷೇಪಣೆ** – ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು (ಧರ್ಮಕಥೆಯೆಂಬುದು ಆಕ್ಷೇಪಣಿಯುಂ ವಿಕ್ಷೇಪಣಿಯುಂ ಸಂವೇದಿನಿಯುಂ ನಿರ್ವೇದಿನಿಯುಂ ಎಂದು ಚತುರ್ವಿಧಮಕ್ಕುಂ ... ನಿಜಮತ ನಿರೂಪಣದೊಳ್ ಪರಮತದೂಷಣಂಗೆಯ್ವುದುಂ ಮೇಣ್ ಪರಮತಕಥನದೊಳ್ ನಿಜಮತ ಪ್ರಕಾಶನಂ ಗೆಯ್ವುದು ವಿಕ್ಷೇಪಣಿಯುಮೆಂಬುದು, **ಚಾವುಂಡಜಯ,** ಪು. ೩೨೬) ನೋಡಿ **'ಧರ್ಮಕಥೆ'**

**ವಿಗ್ರಹ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು ಗುಣ, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ; ಎರಡು ಸೈನ್ಯಗಳ ನಡುವೆ ರಾಜಿ ಮಾಡಿಸಲು ಸಾಧ್ಯವಾಗದೆ ಕಾದುವುದೇ ವಿಗ್ರಹ (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಟ್ಪುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೇಟ್ಪುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹದ್ವಯಾವಸ್ಥಾನಂ ದ್ವೈಧೀಭಾವನಕ್ಕುಂ: **ಚಾವುಂಡಜಯ,** ಪು, ೨೫೭)

**ವಿಜಯಜಾತಿ** – ಪಾರಿವ್ರಾಜ್ಯ ಲಕ್ಷಣಗಳನ್ನು ತಿಳಿಸುವ ಜಾತಿ ಎಂಬ ಸೂತ್ರಪದದ ದಿವ್ಯಜಾತಿ ವಿಜಯಜಾತಿ ಪರಮಜಾತಿ ಅನುಪಮಜಾತಿ ಎಂಬ ನಾಲ್ಕು

ವಿಭಾಗಗಳಲ್ಲಿ ಒಂದು, ಚಕ್ರವರ್ತಿತ್ವವನ್ನು ಸಿದ್ಧಿಸುವಂಥದು (ಅಲ್ಲಿ ದಿವ್ಯಜಾತಿಯಿನಿಂದ್ರತ್ವಮುಂ ಅಹಮಿಂದ್ರತ್ವಮುಂ ... ವಿಜಯಜಾತಿಯಿಂದಂ ಚಕ್ರವರ್ತಿತ್ವಮುಂ ... ಪಡೆಯಲಕ್ಕುಂ: **ಚಾವುಂಡಜಯ,** ಪು. ೧೯೪)

**ವಿಜಯಪರ್ವತ** – ಭರತ ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಂದಾದ ಗಜರತ್ನದ ಹೆಸರು (ಕಾಮರೂಪಿಯುಂ ಕಾಮಚಾರಿಯುಮಪ್ಪ ವಿಜಯಪರ್ವತಂ ಎಂಬ ಯಾಗಹಸ್ತಿರತ್ನಮುಂ: **ಆದಿಪು,** ೧೧. ೩ ವ)

**ವಿಜಯಾರ್ಧ** – ಪೂರ್ವಪಶ್ಚಿಮಾಗಿ ಹಬ್ಬಿರುವ ಒಂದು ಪರ್ವತ (ಇದು ವಿಜಯಾರ್ಧಂ ಎನ್ನ ಪೆಸರುಂ ವಿಜಯಾರ್ಧಂ ಅಲಂಘ್ಯಮೆಂದುಮಿಂತಿದು ಪೆಱಗಿರ್ಗಾನು ಮಿನ್ನೆಗಂ ಅಲಂಘ್ಯನೆಂ: **ಆದಿಪು,** ೧೩. ೧೫)

**ವಿದೇಹ** – ಜಂಬೂದ್ವೀಪದ ಏಳು ಜನಪದಗಳಲ್ಲಿ, ಈ ಕ್ಷೇತ್ರದ ದಕ್ಷಿಣಕ್ಕೆ ಹಿಮವತ್ಪರ್ವತವೂ ಉತ್ತರಕ್ಕೆ ಮಹಾಹಿಮವತ್ಪರ್ವತವೂ ಪೂರ್ವಪಶ್ಚಿಮ ಸಮುದ್ರಗಳೂ ಇರುತ್ತವೆ; ಇದು ಒಂದು ಜಘನ್ಯಭೋಗಭೂಮಿ (ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತ್ಯೈರಾವತಗಳೆಂಬೇೞು ಜನಪದಂಗಳಿಂದಂ: **ಆದಿಪು,** ೧. ೪೮ ವ)

**ವಿದ್ಯಾಚ್ಛೇದಂಗೆಯ್** – ವಿಶೇಷ ಶಕ್ತಿಯನ್ನು ನಾಶಪಡಿಸು (ರತ್ನಜಟಿ ... ಮೂದಲಿಸಿ ಮುಟ್ಟೆವರ್ಪುದುಮಾ ದಾನವನರ್ಕಜಟಿಯ ನಣ್ಪಿಂಗವನೊಳ್ಕಾದದೆ ಕರುಣಿಸಿ ವಿದ್ಯಾಚ್ಛೇದಂಗೆಯ್ದಂ ನಿರಂಕುಶಂ ದಶಕಂಠಂ: **ಪಂಪರಾ,** ೯. ೧೪೬)

**ವಿದ್ಯಾಚ್ಛೇದಿನಿ** – ಒಂದು ವಿದ್ಯೆ, (ಅವರೊಳೊರ್ವಂ ವಿದ್ಯಾಚ್ಛೇದಿನಿಯೆಂಬ ವಿದ್ಯೆಯಿನಾ ವೈತಾಳಿಯಂ ಪ್ರಕಟಂ ಮಾೞ್ಪುದುಂ: **ಚಾವುಂಡಜಯ,** ಪು. ೧೫೭)

**ವಿದ್ಯಾತ್ರಯಾಧೀಶ** – ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ತಿಳಿದವನು (ಶಾಬ್ದನೇತೃತೆ ... ಏಂ ಚೋದ್ಯಮೆ ವರ್ಧಮಾನಮುನಿಯೊಳ್ ವಿದ್ಯಾತ್ರಯಾ ಧೀಶನೊಳ್: **ಚಂದ್ರಪ್ರಪು,** ೧. ૩೧)

**ವಿದ್ಯಾಧರ** – ಭೋಗಭೂಮಿಯಲ್ಲಿ ವಾಸಿಸುವ ಪ್ರಜ್ಞಪ್ತಿ ಮುಂತಾದ ಅನೇಕ ವಿದ್ಯೆಗಳನ್ನು ಬಲ್ಲ ಒಂದು ವರ್ಗದ ಜನ (ಆ ಮಹಾಬಳಂ ಬಾಲಕಾಲದಿಂ ತಗುಳ್ದಭ್ಯಸ್ತಸಮಸ್ತ ವಿದ್ಯಾಧರವಿದ್ಯಾಪಾರಗನುಂ: **ಆದಿಪು,** ೧. ೭೩ ವ)

**ವಿದ್ಯಾಧರಕರಣ** – ವಿದ್ಯಾಧರರು ಆಕಾಶಕ್ಕೆ ನೆಗೆಯಲು ಅವಲಂಬಿಸುತ್ತಿದ್ದ ಹಸ್ತಪಾದಗಳ ಒಂದು ಭಂಗಿ: (ತೊನ್ನಂ ಪೋಪಾಗಳ[ಳಿ]ಜುವಳ್ಳಮುಂ ಕಂಡದಂ ವಿದ್ಯಾಧರಕರಣದಿಂ ಲಂಘಿಸಿ ಪೋಪುದುಂ: **ವಡ್ಡಾರಾ,** ಪು. ೧೨೪. ಸಾ. ೧)

**ವಿದ್ಯಾಧರಚಕ್ರವರ್ತಿ** – ವಿದ್ಯಾಧರರ ಚಕ್ರವರ್ತಿ, ಖೇಚರೇಂದ್ರ (ವಿದ್ಯಾಧರಚಕ್ರವರ್ತಿ ಧರಣೀಕಂಪಂಗಂ ಪ್ರಭಾಕರೀದೇವಿಗಂ ಮಗಳೆನಾಂ, ಸುಖಾವತಿಯೆನೆಂಬೆಂ: **ಚಾವುಂಡಜಯ,** ಪು. ೭೮)

**ವಿದ್ಯಾಧರಿ** – ದೇವತಾಸ್ತ್ರೀ (ಆಕೆಯ ರೂಪಂ ನೋಡಿ ಮೆಚ್ಚಿ ವಿದ್ಯಾಧರಿಯ ದೇವಗಣಿಕೆಯ ರೂಪನೆ ಪೋಲ್ವೆ ಎಂದು ಪೊಗೞ್ದು: **ವಡ್ಡಾರಾ,** ಪು. ೧೬, ಸಾ.೧೮)

**ವಿದ್ಯಾಪ್ರಾಕಾರ** – ವಿಶೇಷ ಶಕ್ತಿಯಿಂದ ನಿರ್ಮಿಸಿದ ಪೌಳಿ (ಅಂತು ನಿರ್ಮಿಸಿದ ವಿದ್ಯಾಪ್ರಾಕಾರಂಗಳ ಬಹಿರಂತಃಪ್ರದೇಶಗಳೊಳ್ ಪಲಬರ್ ವಿದ್ಯಾಧರರಂ ಕಾಪುವೇೞ್ದುದುಂ: **ಪಂಪರಾ,** ೧೪. ೩೫ ವ)

**ವಿದ್ಯಾಮಂತ್ರ** – ಯಾವುದಾದರೂ ವಿದ್ಯೆಗೆ ಸಂಬಂಧಿಸಿದ ಪವಿತ್ರವೂ ಅರ್ಥಸಹಿತವೂ ಆದ ವಾಕ್ಯ (ಆ ವಿದ್ಯಾಮಂತ್ರಂಗಳನೆನಗೆ ಪೇೞಿಂದಭಯಕುಮಾರಂ ಬೆಸಗೊಂಡು: **ವಡ್ಡಾರಾ,** ಪು. ೧೫೮, ಸಾ. ೨೨)

**ವಿದ್ಯಾಮದ** – ಅಷ್ಟಮದಗಳಲ್ಲಿ ಒಂದು (ವಿದ್ಯಾಮದಮುಳ್ಳಂ ಗೂಗೆಯಾಗಿಯುಂ ತಪೋಮದಮುಳ್ಳಂ ನಾಯಾಗಿಯುಂ ಶ್ರೀಮದಮುಳ್ಳಂ ಮೊಸಳೆಯಾಗಿಯುಂ ... ಪುಟ್ಟಿ ಪೇಜಿನ ಮೇಲೆ ಕರಡೆಯೆಂಬಂತೆ ಪಾಪಮಂ ನೆರಪಿ ನರಕದೊಳ್ ಪುಟ್ಟಿ ಪಲಕಾಲಂ ಸೈರಿಸಲ್ಬಾರದ ಮಹಾದುಃಖಕ್ಕೆ ಭಾಜನರಪ್ಪರ್: **ಧರ್ಮಾಮೃ,** ೬. ೧೩೨ ವ)

**ವಿದ್ಯುತ್ಕುಮಾರಿ** – ಜಿನಜನನಿಗೆ ಮಣಿದರ್ಪಣ ಹಿಡಿಯಲು ನಿಯೋಜಿತರಾದ ದೇವಿ (ಪರ್ವತದ ಪೂರ್ವದಿಗ್ಭಾಗದೊಳ್ ನೆಲಸಿದ ವಿಮಳ ನಿತ್ಯಾವಳೋಕ ಸ್ವಯಂಪ್ರಭ ನಿತ್ಯೋದ್ಯೋತಂಗಳೆಂಬ ನಾಲ್ಕುಂ ಕೂಟಂಗಳರಸಿಯರಪ್ಪ ಚಿತ್ರೆ ಕನಕಚಿತ್ರೆ ತ್ರಿಶಿರೆ ಸೂತ್ರಾಮಣಿಯೆಂಬ ನಾಲ್ವರು ವಿದ್ಯುತ್ಕುಮಾರಿಯರಂ: **ಆದಿಪು,** ೭. ३ ವ)

**ವಿದ್ಯುತ್ಕುಮಾರೀ ಪುರಂಧ್ರಿ** – ಜಿನಜನನಿಯ ಗರ್ಭಶೋಧನ ಸಂದರ್ಭದಲ್ಲಿ ವನಿತಾಗೂಢ ವ್ಯಾಪಾರಕ್ಕೆಂದು ನಿಯೋಜಿತರಾದ ನಾಲ್ವರು ದೇವತೆಯರು (ರತ್ನಕೂಟ ರತ್ನಪ್ರಭ ಸರ್ವರತ್ನ ರತ್ನೋಚ್ಚಯಂಗಳೆಂಬ ಕೃತಕದ್ವಿಕೃತ ವಿಕಟಕೂಟಂಗಳೊಳ್ ಕೊಂಡಾಟದಿಂದಿರ್ಪ ವಿಜಯೆ ವೈಜಯಂತೆ ಜಯಂತೆ ಅಪರಾಜಿತೆಯೆಂಬ ವಿದ್ಯುತ್ಕುಮಾರೀ ಪುರಂಧ್ರಿಯರಂ: **ಆದಿಪು,** ೭. ३ ವ)

**ವಿದ್ಯುತ್ಪ್ರಭ** – ಒಂದು ವಿಮಾನದ ಹೆಸರು (ಧೀವರನುಂ ವಿದ್ಯುತ್ಪಭವಿಮಾನದೊಳ್ ಶ್ರುತಪ್ರಭಾಕರನೆಂಬ ದೇವನಾದಂ: **ನೇಮಿನಾಪು,** ೪. ೮ ವ)

**ವಿಧಿ** – ಕರ್ಮಗಳನ್ನು ನಾಶಪಡಿಸುವ ವಿಧಾನ (ಮತ್ತಿನುೞಿದ ಕರ್ಮಂಗಳಂ ಸ್ಥಿತಿ ಅನುಭಾಗ ಕಾಂಡ ಘಾತಪ್ರದೇಶ ಗುಣಶ್ರೇಣಿ ನಿರ್ಜರಾದಿ ವಿಧಿಯಿನನುಕ್ರಮಂ ಕಿಡಿಸುತ್ತುಂ: **ಆದಿಪು,** ೧೦. ೧೪ ವ)

**ವಿಧಿದಾನ** – ಒಂದು ಗರ್ಭಾನ್ವಯ ಕ್ರಿಯೆ, ತನ್ನನ್ನು ಪೂಜಿಸಿದ ದೇವತೆಗಳನ್ನು ಸನ್ಮಾನಿಸುವುದು (ವಿಧಿದಾನ ಸುಖೋದಯ ಇಂದ್ರತ್ಯಾಗಾವತಾರ ... ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವಿಧಿದಾನಕ್ರಿಯೆ** – ಸುರಲೋಕಸುಖವನ್ನು ಅನುಭವಿಸುವುದು (ಪರಿವಾರದೇವರ್ಕಳೆ ವಿಧಿಪೂರ್ವಕಂ ವಿಮಾನಾದಿಗಳಂ ಕುಡುವುದು ವಿಧಿದಾನಕ್ರಿಯೆ: **ಚಾವುಂಡಜಯ,** ಪು. ೧೮೫)

**ವಿನಯ** – ಪೂಜ್ಯಪುರುಷರನ್ನು ಆದರಿಸುವುದು (ಪ್ರಾಯಶ್ಚಿತ್ತಂ ವಿನಯಂ ವೈಯಾಪೃತ್ಯಂ ಜಿನಂಗೆ ಕೂಡದು ದೋಷಾಪಾಯತಿಯಿಂ ಧ್ಯಾನಂ ಸ್ವಾಧ್ಯಾಯವ್ಯುತ್ಸರ್ಗಮುಂಟು ಸಂದೆಯಮುಂಟೇ: **ಅಜಿತಪು,** ೧೨. ೩೧)

**ವಿನಯಶುದ್ಧಿ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾ ಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ವಿನಯಸಂಪನ್ನತೆ** – ದರ್ಶನವಿಶುದ್ಧತೆ ಷೋಡಶಭಾವನೆಗಳಲ್ಲಿ ಒಂದು, ಗುರು ಮೊದಲಾದವರಲ್ಲಿ ಯೋಗ್ಯವಾದ ರೀತಿಯಲ್ಲಿ ತೋರುವ ಆದರ ಸತ್ಕಾರ (ವಿನಯಸಂಪನ್ನತೆಯೆಂಬುದು ಮೋಕ್ಷಸಾಧನಮಪ್ಪ ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳೊಳಮವಕ್ಕಾಧಾರಮಪ್ಪ ಗುಣಪ್ರಭೃತಿಗಳೊಳ್ ಯಥಾಯೋಗ್ಯ ಸಂಸ್ಕಾರಂಗೆಯ್ವುದು: **ಚಾವುಂಡಜಯ,** ಪು ೨೦೭)

**ವಿಪರ್ಯಯ** – ಮಿಥ್ಯಾಜ್ಞಾನ (ಸಂಶಯ ವಿಪರ್ಯಯ ಸಾವದ್ಯಾನವದ್ಯದ್ಯವಸಾಯ ಸ್ವಭಾವರಹಿತಮಾಗಿ ಜೀವಾದಿಪದಾರ್ಥಯಾಥಾತ್ಮ್ಯಾವಗಂ ಸಮ್ಯಜ್ಞಾನಂ: **ಆದಿಪು,** ೧೦. ೬೩ ವ)

**ವಿಪಾಕವಿಚಯ** – ಒಂದು ಬಗೆಯ ಧರ್ಮಧ್ಯಾನ, ಕರ್ಮಫಲದ ಚಿಂತನೆ (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

ಮನಃಪರ್ಯಯ ಜ್ಞಾನದ ಒಂದು ಬಗೆ, ಇತರರ ಮನಸ್ಸನ್ನು ಅರಿಯುವುದು (ವಿಪುಲಮತಿ ಸಕಲವಿದ್ಯಾನಿಪುಣಂ ಗಣಧರನಿರೂಪಿತ ಕ್ರಮದಿಂ ದೈತ್ಯಪ್ರತಿ ಪ್ರಪಂಚಮಂ ಶ್ರವಣಪಥಾತಿಥಿ ಮಾಡಲಾಗಳುದ್ಯತನಾದಂ: **ಪಂಪರಾ,** ೧೦. ೬೬)

**ವಿಪುಲಾದ್ರಿ** – ಮಹಾವೀರನ ಉಪದೇಶದ ಸ್ಥಳ, ಮೇರು (ಶ್ರೀಮದಘಾರಿ ವೀರಜಿನಸನ್ನಿಧಿಯೊಳ್ ವಿಪುಲಾದ್ರಿಯೊಳ್ ಜಿನಸ್ವಾಮಿ ಮತೋಕ್ತಿಯಿಂ ಮಗಧನಾಯಕನಂ ತಿಳಿವಂತು ... ತಿಳಿಯೆ ಪೇೞ್ದಿದನೂರ್ಜಿತಮಾಗೆ ಪೇೞ್ವೆಂ: **ಸುಕುಮಾಚ,** ೧. ೬೪)ು

**ವಿಪುಳಫಲ** – [ದಾನದಿಂದ] ಕೊಡುವವನು ಪಡೆಯುವ ಫಲ (ಕುಡುವೊಂ ಕುಡುವುದು ಪಾತ್ರಂ ಕುಡೆ ಪಡೆವುದತಿವಿಪುಳಫಲಮೆನಲ್ ನಾಲ್ಕು ತೆಱಂ ಗಡ ದಾನಂ: **ಆದಿಪು,** ೧೦. ೯)

**ವಿಪ್ರೋಷಧಿ** – ಸಾಧುವಿನ ಸ್ಪರ್ಶ ಮಲಮೂತ್ರಗಳಿಗೆ ರೋಗನಿವಾರಕ ಸಾಮರ್ಥ್ಯ ವುಂಟಾಗುವ ಒಂದು ಔಷಧರ್ಧಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ವಿಪ್ರವರ್ಣ** – ಬ್ರಾಹ್ಮಣವರ್ಣ, ಭರತನು ಸೃಷ್ಟಿಸಿದ ನಾಲ್ಕನೆಯ ವರ್ಣ (ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಮಿನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಜೆಪಲೆಂದು: **ಆದಿಪು,** ೮. ೭೨ ವ)

**ವಿಭಂಗಜ್ಞಾನ** – ಮಿಥ್ಯಾಜ್ಞಾನ, ಇದರಲ್ಲಿ ಮೂರು ವಿಧ: ಕುಮತಿ, ಕುಶ್ರುತ ಕುಅವಧಿ (ಅರವಿಂದಂ ಕುರುವಿಂದನಂ ಕರೆದು ಉತ್ಪನ್ನವಿಭಂಗಜ್ಞಾನದಿಂ ಮೃಗಂಗಳಿರ್ದೆಡೆ ಯನಜೆದು: **ಆದಿಪು,** ೨. ೧೪ ವ)

**ವಿಮಾನ** – ಮೇಲುಲೋಕದ ಪುಣ್ಯಜೀವಿಗಳ ಒಂದು ವಾಸಸ್ಥಾನ (ಪಂಚದಶಾಧಿಕತ್ರಿಶತ ವಿಮಾನಸ್ವಾಮಿಯುಂ: **ಕರ್ಣನೇಮಿ,** ೨. ೩೨ ವ)

**ವಿಲೋಪ** – ಅಸ್ತೇಯ ವಿರೋಧಿಕ್ರಿಯೆ, ಅನ್ಯರ ಸ್ವತ್ತನ್ನು ಹಾಳುಮಾಡುವುದು (ಹೀನಾಧಿಕ ವಿನಿಮಾನಸ್ತೇನಾಹೃತದಾನ ಸದೃಶ ಮಿಶ್ರ ವಿಲೋಪ ಸ್ತೇನ ಪ್ರಯೋಗಮೆಂದಿವು ತಾನಸ್ತೇಯವ್ರತಕೃತ್ರಿಮಮಕ್ಕುಂ: **ಸುಕುಮಾಚ,** ೬. ೧೫)

**ವಿವಾಹಕ್ರಿಯೆ** – ಮದುವೆಯಾಗಿ ಸಂತಾನಕ್ಕಾಗಿ ನಡೆಸುವ ಕಾಮಕ್ರಿಯೆ (ಪಾಣಿಗ್ರಹಣಾ ನಂತರಂ ... ಮನೆಗೆ ಬಂದು ಕಂಕಣಮಂ ಬಿಡಿಸಿ ಶಯನತಳದೊಳ್ ಕಾಲೋಚಿತಮಾಗಿ ಋತುಕಾಲದೊಳ್ ಸಂತಾನಾರ್ಥದಿಂ ಕಾಮಸೇವೆಗೆಯ್ವುದು ವಿವಾಹಕ್ರಿಯೆ: **ಚಾವುಂಡಜಯ,** ಪು. ೧೮೩)

**ವಿವಿಕ್ತಾವಾಸ** – ಸ್ತ್ರೀ ಪಶು ನಪುಂಸಕರಾದಿಯಾಗಿ ಯಾರೂ ಇರದ ಕಡೆ ಜೈನಮುನಿಯ ಏಕಾಂತವಾಸ (ಉಜ್ಜುಗಯ್ದನೆಯ ತಪಂ ಸಾಧುಗುಣಾಗ್ರಣಿಗೆಸೆದುದು ಆ ವಿವಿಕ್ತಾವಾಸಂ: **ಚಂದ್ರಪ್ರಪು,** ೧೧. ೧೨)

**ವಿಸ್ತಾರರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ವಿಸ್ತಾರರುಚಯೆಂಬುದು ದ್ವಾದಶಾಂಗಚತುರ್ದಶಪೂರ್ವಗೋಚರ ಜೀವಾದಿ ವಸ್ತುಗಳೊಳ್‌ನಯಪ್ರಮಾಣ ನಯನಿರೂಪಣೋಪಲಬ್ಧ ಶ್ರದ್ಧಾನಂ: **ಚಾವುಂಡಜಯ,** ಪು. ೩೩೭)

**ವಿಹರಣ** – ಒಂದು ಗರ್ಭಾನ್ವಯಕ್ರಿಯೆ, ಧರ್ಮಚಕ್ರವನ್ನು ಹಿಂಬಾಲಿಸುತ್ತ ವಿಹರಿಸುವುದು (ಜಿನೇಂದ್ರನ ವಿಹರಣಪೂರ್ವರಂಗಮೇಂ ಒಪ್ಪಿದುದೋ: **ಶಾಂತಿಪು,** ೧೨. ೧೭); {ಇದಕ್ಕೆ 'ವಿಹಾರ' ಎಂದೂ ಹೇಳುತ್ತಾರೆ}, ವಿಹರಣಕಾಲ – ಧರ್ಮೋಪದೇಶನಿಮಿತ್ತವಾಗಿ ವಿಹಾರಕ್ರಿಯೆಯನ್ನು ಕೈಗೊಳ್ಳುವ ಸಮಯ

(ವಿಹರಣಕಾಲಮಿನ್ನೆನಗೆ ಬಂದುದೆಂದು ಜಿನಂ ಜನಸ್ತುತಂ ವಿಹರಿಸಲು ದ್ಯಮಂಗೆಯಲೊಡಂ: **ಶಾಂತಿಪು,** ೧೨. ೧೬)

**ವಿಹರಣಕ್ರಮ** – ಧರ್ಮೋಪದೇಶಕ್ಕಾಗಿ ವಿಹಾರ ಕೈಗೊಳ್ಳುವುದು (ಗ್ರಾಮ ನಗರ ... ಸಂವಾಹಗಳೊಳ್ ವಿಹಾರಿಸುತ್ತುಂ ವಿಹರಣಕ್ರಮದಿಂ ವತ್ಸವಿಷಯದ ಕೌಶಂಬೀ ನಗರಕ್ಕೆ ವಂದು: **ಸುಕುಮಾಚ,** ೪. ೨೦ ವ)

**ವಿಹರಣವಿಧಿ** – ವಿಹರಣಕ್ರಮ (ಕೃತಸಕಳಮೇದಿನೀವಿಹರಣನೊಂದು ತಿಂಗಳ್ ವಿಹರಣವಿಧಿಯಂ ಮಾಣ್ದು ಬಂದು: **ಆದಿಪು,** ೮. ೨೮ ವ)

**ವಿಹಾಯೋಗತಿ** – ಆಕಾಶಗಮನ ಸಾಮರ್ಥ್ಯ (ಅಗುರು ಲಘುಚತುಷ್ಕ ವಿಹಾಯೋಗತಿ ದ್ವಿಕಸ್ಥಿರಾಸ್ಥಿರ ... ನೀಚೈರ್ಗೋತ್ರಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೪೯ ವ)

**ವಿಹಾರ** – ಒಂದು ಗರ್ಭಾನ್ವಯಕ್ರಿಯೆ, ಧರ್ಮಚಕ್ರವನ್ನು ಹಿಂಬಾಲಿಸುತ್ತ ವಿಹರಿಸುವುದು (ವಿಹಾರ ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ); ಇದಕ್ಕೆ 'ವಿಹರಣ' ಎಂದೂ ಕರೆಯುತ್ತಾರೆ

**ವಿಹಾರಕ್ರಿಯೆ** – ಧರ್ಮಕ್ಷೇತ್ರಗಳಲ್ಲಿ ವಿಹರಿಸುವುದು (ಧರ್ಮಚಕ್ರಮಂ ಮುಂದಿಟ್ಟು ಧರ್ಮಕ್ಷೇತ್ರಂಗಳೊಳ್ ವಿಹಾರಿಸುವುದು ತತ್ ವಿಹಾರಕ್ರಿಯೆ: **ಚಾವುಂಡಜಯ,** ಪು ೧೮೭)

**ವೀತರಾಗ** – ರಾಗದ್ವೇಷವಿಲ್ಲದವನು, ಅರ್ಹಂತ (ಕರಿ ಮಹಿಷ ಮೇಷಮಲ್ಲಸ್ವರೂಪದಿಂ ತಮಗೆ ತಾವೆ ಪೋಱೆ ಸುರರ್ಕಳ್ ಪರಮನ ಮನಕ್ಕೆ ಆವೊಂದುಂ ಬರಲಾಱವೆ ವೀತರಾಗನಪ್ಪುದಱಿಂದಂ: **ಅಜಿತಪು,** ೫. ೮೧)

**ವೀತರಾಗಛದ್ಮಸ್ಥಗುಣಸ್ಥಾನ** – ಜ್ಞಾನಾವರಣ ಮತ್ತು ದರ್ಶನಾವರಣಗಳು ಛದ್ಮ, ಅದರಲ್ಲಿರುವವರು ಛದ್ಮಸ್ಥ; ೪ ರಿಂದ ೧೦ ಗುಣಸ್ಥಾನವರೆಗಿನವರು ಸರಾಗಛದ್ಮಸ್ಥರು, ೧೦ ರಿಂದ ೧೨ ರವರೆಗಿನವರು ವೀತರಾಗಛದ್ಮಸ್ಥರು (ವೀತರಾಗಛದ್ಮಸ್ಥಗುಣಸ್ಥಾನಂ ಏಕತ್ವವಿತರ್ಕವಿಚಾರಾಭಿಧಾನ ಪರಿಣತಂ ಅಪರಿಮಿತಪ್ರದೇಶನಿರ್ಜರಾದಿ ಕ್ರಿಯಾಕಳಾಫಂ: **ಆದಿಪು,** ೧೦. ೧೪ ವ)

**ವೀರಶಯ್ಯಾ[ಯ್ಯೆ]** – ಸಲ್ಲೇಖನ ವ್ರತಧಾರಿಗಳು ಮಲಗುವ ಜಾಗ (ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ ಎಂದಾ ಮಹಾನುಭಾವನ ಪೇೞ್ದ ಮಾೞ್ಕೆಯೊಳಿರ್ಪತ್ತೆರಡು ದಿವಸಂಬರಂ ವೀರಶಯ್ಯಾತಳಗತನಾಗಿರೆ: **ಆದಿಪು,** ೨. ೫೮ ವ)

**ವೀರಸಂಸ್ತರಾರೂಢ** – ಸಲ್ಲೇಖನ ವ್ರತಧಾರಿಯಾಗಿ ಮಲಗಿದವನು (ಜಿನೇಂದ್ರಾರ್ಚನಾಪುರಸ್ಸರಂ ವಾಚನಾಗ್ರಹಣ ಸಮೇತಂ ಆರಾಧನೆಯಿನರ್ಚಿಸಿ ವೀರಸಂಸ್ತರಾರೂಢನಾದಾಗಳ್: **ಆದಿಪು** ನರಸಿಂ, ೨. ೫೦ ವ)

**ವೀರ್ಯ** – 'ಅಷ್ಟಗುಣ'ಗಳಲ್ಲಿ ಒಂದು, ಸಿದ್ಧಿ (ಬಳಿಯಂ ಕ್ಷಾಯಿಕ ಸಮ್ಯಕ್ತ್ವಾನಂತಜ್ಞಾನ ದರ್ಶನವೀರ್ಯ ಸೂಕ್ಷ್ಮಾವಗಾಹ ಅಗುರುಲಘುತಾ ವ್ಯಾಬಾಧಂಗಳೆಂಬ ಗುಣಮೆಂಟು ಬಂದು ತನ್ನೊಳ್ ಪೆಣೆದಿರೆ: **ಆದಿಪು,** ೧೬. ೪೯ ವ)

**ವೀರ್ಯಾಂತರಾಯ** – ಅಂತರಾಯ ಕರ್ಮಗಳಲ್ಲಿ ಒಂದು, ಒಂದು ವಿಘ್ನ (ಚಕ್ಷುರಕ್ಷುರವಧಿ ಕೇವಲದರ್ಶನಾವರಣ ಚತುಷ್ಕಮುಮಂ ದಾನಲಾಭ ಭೋಗೋಪಭೋಗ ವೀರ್ಯಾಂತರಾಯಪಂಚಕಮುಮಂ ಒರ್ಮೊದಲೆ ಕಿಡಿಸಿ: **ಆದಿಪು,** ೧೦. ೧೪ ವ)

**ವೃತ್ತಿಪರಿಸಂಖ್ಯಾನ** – ಆರು ಬಗೆಯ ಬಾಹ್ಯತಪಸ್ಸುಗಳಲ್ಲಿ ಒಂದು, ಸಿಕ್ಕಿದರೆ ಮಾತ್ರ ಆಹಾರ ಸೇವಿಸುವುದು (ವೃತ್ತಿಪರಿಸಂಖ್ಯಾನಂ ಸೊಗಯಿಪ ರಸವರ್ಗಂ ಮಾಣ್ಬ ರಸಪರಿತ್ಯಾಗಂ ... ಎಂಬ ಅಯ್ದುಂ ತಪಮಂ ಆ ಮುನಿ ತಾಳ್ದಿದಂ: **ಅನಂತಪು,** ೪. ೧೬)

**ವೃತ್ತಿಲಾಭ** – ನಲವತ್ತೆಂಟು ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು, ಮೊದಲ ದಿನ ಉಪವಾಸವಿದ್ದು ಎರಡನೆಯ ದಿನ ಜಿನೇಶ್ವರನ ಸನ್ನಿಧಿಯಲ್ಲಿ ಪೂಜಾನಂತರ ಗುರುವು ಜಿನದೀಕ್ಷೆ ಕೊಟ್ಟ ನಂತರ ಮನೆಗೆ ಹೋಗಿ ಮಾಡುವ ಪಾರಣೆ (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯ ಉಪಯೋಗತ್ವಮೆಂಬ ಎಂಟುಂಬೆರಸು ... ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ: **ಆದಿಪು** ೧೫.. ೧೬ ವ)

**ವೃಷಧ್ವಜ** – ಆದಿ ತೀರ್ಥಂಕರ (ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ ... ಸಮಸ್ತ ವಿದ್ಯಾಪತಿ ನಾಭಿನಂದನನಂ ಉಪಾಶ್ರಿತ ಭವ್ಯಜನಾಭಿನಂದನಂ: **ಆದಿಪು,** ೧. ೪೦)

**ವೃಷನಾಥ** – ಆದಿತೀರ್ಥಂಕರ (ಹಿಮಶಿಖರಿಸಮವಿಗ್ರಹಸನಾಥಂ ಕುಮುದ ದಲಧವಲರುಚಿ ರುಚಿರವೃಷನಾಥನಂ : **ಆದಿಪು,** ೭. ೨೭ ರಗಳೆ)

**ವೃಷಭನಾಥ** – ಆದಿ ತೀರ್ಥಂಕರ (ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ ... ಸಮಸ್ತ ವಿದ್ಯಾಪತಿ ನಾಭಿನಂದನನಂ ಉಪಾಶ್ರಿತ ಭವ್ಯಜನಾಭಿನಂದನಂ: **ಆದಿಪು,** ೧. ೪೦)

**ವೃಷಭಯೋಗೀಂದ್ರ** – ಆದಿ ತೀರ್ಥಂಕರ (ಅನ್ನೆಗಮಿತ್ತ ವೃಷಭಯೋಗೀಂದ್ರನುಂ ಸಕಳ ಸಾವದ್ಯಾತಿದೂರಮಪ್ಪ ಜಿನಕಲ್ಪಿತಮೆಂಬ ಆಚರಣಮಂ ಕೈಕೊಂಡು: **ಆದಿಪು,** ೧೦. ೧೩ ವ)

**ವೃಷಭಾಚಲ** – ಚಕ್ರವರ್ತಿಗಳು ತಮ್ಮ ವಿಜಯಪ್ರಶಸ್ತಿಯನ್ನು ಕೆತ್ತಿಸುವ ಪರ್ವತ (ಇತ್ತ ಉತ್ತರಭರತಮನಾಳುತ್ತಿರ್ದರನೇಕ ಚಕ್ರವರ್ತಿಗಳ್ ಪೆಸರ್ ಸುತ್ತಿ ಬರೆದಿರೆ ನಿಬಂಧದ ಹೊತ್ತಗೆಯೆಂಬಂತಿರಿರ್ದ ವೃಷಭಾಚಲಮಂ ಕಂಡು: **ಶಾಂತಿಪು,** ೧೧. ೬೧ ಮತ್ತು ೬೧ ವ)

**ವೃಷಭೇಂದ್ರ** – ಬಿಳಿಯ ಎತ್ತು (ರಜತಗಿರಿರುಂದ್ರನಂ ಜಿತಶರಚ್ಚಂದ್ರನಂ ನಿಜವದನವನಜಮಂ ಪುಗುವ ವೃಷಭೇಂದ್ರನಂ ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ: **ಆದಿಪು,** ೭. ೨೭ ರಗಳೆ)

**ವೃಷಭೇಶ್ವರ** – ಆದಿತೀರ್ಥಂಕರ (ಮುನ್ನಂ ವೃಷಭೇಶ್ವರಂ ವಜ್ರಜಂಘನಾದ ಭವದೊಳಾ ಮಹಾತ್ಮಂಗೆ ತಂಗೆಯಾದ ಸುಂದರಿಯೆ ಕತಿಪಯಭವಪರಿಭ್ರಮಣದಿಂ ಬಂದು ... ಸುನಂದೆಗಂದು ನಂದನೆಯಾದಳ್: **ಆದಿಪು,** ೮. ೫೩ ವ)

**ವೃಷಮಾರ್ಗ** – ಧರ್ಮಮಾರ್ಗ (ದುರ್ವಾರಸಂಸಾರವಿಚ್ಛೇದ ಉಪಾಯನಿಯುಕ್ತ ಸೂಕ್ತಿವೃಷಮಾರ್ಗಾಗ್ರೇಸರಂ ... ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ: **ಆದಿಪು,** ೧. ೧)

**ವೃಷಮುಖ** – ಒಬ್ಬ ಯಕ್ಷ (ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನಂ ಇಂದುಕುಂದಸುಂದರತರ ವರ್ಣಂ ಈ ವೃಷಭವಾಹನಕಥಾರಚನೋಕ್ತಿಯಲ್ಲಿ ಮಾಟ್ಕಿರದೆ ಎಮಗಾಗಳುಂ ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ: **ಆದಿಪು,** ೧. ೮)

**ವೃಷವಾಹನ** – ವೃಷಭವಾಹನ (ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನಂ ಇಂದುಕುಂದಸುಂದರತರ ವರ್ಣಂ ಈ ವೃಷಭವಾಹನಕಥಾ ರಚನೋಕ್ತಿಯಲ್ಲಿ ಮಾಟ್ಕಿರದೆ ಎಮಗಾಗಳುಂ ವೃಷಭಯಕ್ಷನವಿಘ್ನಮನಃ ಪ್ರವೃತ್ತಿಯಂ: **ಆದಿಪು,** ೧. ೮)

**ವೇದ** – ದ್ವಾದಂಶಾಗಗಳುಳ್ಳ ಶಾಸ್ತ್ರ (ಮೊದಲ ವೇದವೆಂಬುದು ಸಪ್ತಪರಮಸ್ಥಾನಮನೀವ ದ್ವಾದಶಾಮಗಂ; ಉಟಿದ ವೇದಂ ಪಾಪಸೂತ್ರಮೆಂದಜಿಗೆ; **ಚಾವುಂಡಜಯ,** ಪು. ೧೮೭)

ವೇದಕ – ಸಮ್ಯಕ್ತ್ವದ ಒಂದು ಪ್ರಭೇದ (ಮೊದಲೊಳ್ ಉದಯಿಸಿದುದು ಉಪಶಮಂ ಬಟಿಕಾದುದಲ್ತೆ ವೇದಕಂ: **ಪಾರ್ಶ್ವನಾಪು,** ೫. ೪೭)

ವೇದನೀಯ – ಸುಖದುಃಖಕಾರಕ ಕರ್ಮ (ನಿಜದ್ವಿಚರಸಮಯದೊಳ್ ಅನ್ಯತರ ವೇದನೀಯ ದೇವಗತಿ ... ನೀಚೈರ್ಗೋತ್ರಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷದಿಂ ಕಿಡಿಸಿ: **ಆದಿಪು,** ೧೬. ೪೯ ವ); ಇದರಲ್ಲಿ ಎರಡು ಬಗೆ: ಸಾತ (ಸುಖ) ಮತ್ತು ಅಸಾತ (ದುಃಖ) ಉಂಟುಮಾಡುವಂಥವು (ಸಾತಾಸಾತಸಂವಿಭಾಗದಿನೆರ್ತಜಿನಪ್ಪ ವೇದನೀಯಮುಮಂ: **ಸುಕುಮಾಚ,** ೩. ೩೯ ವ)

**ವೈಕುರ್ವಣ** – ರೂಪಾಂತರ ವಿದ್ಯೆ (ಪೆಂಡವಾಸಂ ... ರೋದೋನ್ನಾದದಿಂದಂ ಮಾಟ್ಪಿಂತು ವೈಕುರ್ವಣ ಪರಿಣತಿಯಂ ಬೀಜಿದಂ: **ಪಂಪರಾ,** ೧೬. ೪೮)

**ವೈಕ್ರಿಯಕ** – ಜೀವರುಗಳ ಒಂದು ಶರೀರಭೇದ, ತಪಶ್ಚರ್ಯೆಯ ಪ್ರಭಾವದಿಂದ ಲಭಿಸುವ ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ,

ಈಶಿತ್ವ, ವಶಿತ್ವ, ಅಪ್ರತಿಘಾತ, ಅಂತರ್ಧಾನ, ಕಾಮರೂಪ ಮುಂತಾದ ಸಾಮರ್ಥ್ಯಗಳಿಂದ ಸ್ಥೂಲಶರೀರದಲ್ಲಿ ಬದಲಾವಣೆ ಮಾಡುವ ಸೂಕ್ಷ್ಮಶರೀರ (ತತ್ ಭೋಗಾವನೀಭಾಗದೊಳ್ ತನುಗಳ್ ವೈಕ್ರಿಯಕಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂಜನಿತೈಶ್ವರ್ಯದಿನಿಂತು ಬಂದು ನೆಲಸಿತ್ತು ಈಶಾನಕಲ್ಪಾಗ್ರದೊಳ್: **ಆದಿಪು** ನರಸಿಂ. ೫. ೭೦)

**ವೈಕ್ರಿಯುಕಶರೀರ** – ವೈಕ್ರಿಯುಕ (ಅವಂದಿರ ವೈಕ್ರಿಯುಕಶರೀರಂಗಳ್ ಪಾದರಸದಮಾರ್ಗದಿಂ ಪತ್ತುತ್ತುಮಿರ್ಕುಂ: **ಸುಕುಮಾಚ,** ೧೧. ೪೭ ವ)

**ವೈಕ್ರೀಯಕ** – ವೈಕ್ರಿಯಕ (ಸಕಳೋರ್ವೀಪತಿ ನೀಂ ಬಗೆದು ಕೇಳನುಕ್ರಮದಿನಯ್ದು ಭೇದದಿನೌದಾರಿಕವೈಕ್ರೀಯಕಮಾಹಾರಕ ತೈಜಸಕಾರ್ಮಣಂಗಳಿವು ತನುವೆನಿಕುಂ: **ಸುಕುಮಾಚ,** ೮. ೧೦)

**ವೈಜಯಂತೀದ್ವಾರ** – ವಿಜಯಾರ್ಧ ಪರ್ವತದ ದಕ್ಷಿಣ ದ್ವಾರ (ಮುಂಗುಡಿಯ ಬಂದ ಚಕ್ರವರ್ತಿ ವೈಜಯಂತೀದ್ವಾರಾಭಿಮುಖನಾಗೆ ಬೀಡಂ ಬಿಟ್ಟು ಓಲಂಗಂಗೊಟ್ಟಿರೆ: **ಶಾಂತಿಪು,** ೧೧. ೬ ವ)

**ವೈಜಯಂತೀವಿಮಾನ** – ಲೋಕಾಕಾಶದ ತುದಿಯ ಪುಣ್ಯವಂತರ ವಾಸಸ್ಥಾನ (ಷೋಡಶಭವಿಷ್ಯತ್ತೀರ್ಥಕರ ನಾಮಕರ್ಮಮಂ ಕಟ್ಟಿ ವೈಜಯಂತೀ ವಿಮಾನದೊಳ್ ಪುಟ್ಟಿ: **ಪಂಪರಾ,** ೧೬. ೭೩ ವ)

**ವೈಡೂರ್ಯ** – ಒಂದು ಪರ್ವತದ ಹೆಸರು (ತದವನೀಧರ ದಿಙ್ನಿಲಯಂಗಳಪ್ಪ ವೈಡೂರ್ಯ ರುಚಕ ಮಣಿಪ್ರಭ ರುಚಿಕೋತ್ತರಂಗಳೆಂಬ ವಿಕಟಕೂಟಾಧೀಶೆಯರೆ ... ಮಹತ್ತರಿಯರಾಗಲುಂ: **ಆದಿಪು,** ೭. ೩ ವ)

**ವೈಡೂರ್ಯದಂಡ** – ವೈಡೂರ್ಯಮಣಿಯನ್ನು ಹುದುಗಿಸಿದ ದಂಡ (ವೈಡೂರ್ಯದಂಡಮುಕ್ತಾಮಣಿಜಾಳಾಳಂಕೃತ ರತ್ನಶಲಾಕಾಶತಕಾಂಚನ ಕುಂಭಬಿಂಬ ರಜತಚ್ಛದಚ್ಛತ್ರವಿಚಿತ್ರ ಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ: **ಆದಿಪು,** ೧. ೪೯ ವ)

**ವೈತರಣಿ** – ನರಕದಲ್ಲಿರುವುದೆಂದು ನಂಬಲಾದ ಒಂದು ನದಿ, ಅತ್ಯಾಸೆಯವರು ಇದಕ್ಕೆ ಹೋಗುತ್ತಾರೆ (ತೀವ್ರತೃಷ್ಣೆಯ ಮನುಜರ್ ವೈತರಣಿಯೊಳಗೆ ಪುಗುವರವಶ್ಯಂ: **ಆಚವರ್ಧ,** ೧೧. ೯)

**ವೈಯಾಪೃತ್ಯ** – ಶಿಕ್ಷಾವ್ರತ: ಜಿನಮುನಿಗೆ ಆಹಾರ ನೀಡುವುದು, ಮುನಿಸೇವೆ ಮತ್ತು ರೋಗಿಮುನಿಗಳ ಸೇವೆ (ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನ ಕಾಯೋತ್ಸರ್ಗಂಗಳಂ ನಿಟ್ಟೆವಡಿಸಿ: **ಶಾಂತಿಪು,** ೯. ೧೦೮ ವ); ಷೋಡಶಭಾವನೆಗಳಲ್ಲಿ ಒಂದು, ಗುಣವಂತರಿಗೆ ದುಃಖವುಂಟಾದರೆ ಅದನ್ನು ನಿವಾರಿಸುವ ಅಹಿಂಸಾರೂಪದ ಪ್ರಯತ್ನ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ,

ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ - ಎಂಬ ಷೋಡಶಭಾವನೆಗೊಳ್; **ಚಾವುಂಡಜಯ**, ಪು ೨೦೬)

**ವೈಯಾಪೃತ್ಯಂಗೆಯ್** - ಸೇವೆಮಾಡು, ಉಪಚರಿಸು (ವ್ಯಾಧಿಯ ಪ್ರಬಲತ್ವಮಂ ಕಂಡು ವೈಯಾಪೃತ್ಯಂಗೆಯ್ವುದರ್ಕಾದಮಾನುಮಟ್ಟಿಯೊಡೆಯನಾಗಿ ಪೊಡೆವಟ್ಟು: **ವಡ್ಡಾರಾ**, ಪು. ೧೭೧, ಪು. ೧೭)

**ವೈಶಾಖಸ್ಥಾನ** - ನಾಟ್ಯದ ಒಂದು ಭಂಗಿ, ಲೋಕದ ಆಕಾರ ಇಂತಹುದು (ಸ್ಫುಟವೈಶಾಖಸ್ಥಾನಂ ಕಟಿತಟವಿನ್ಯಸ್ತ ಹಸ್ತಯುಗನಾಗಿ ಮಹಾಲಟಹಂಬೆರಸಿ ರ್ದೊಪ್ಪುವ ನಟನಾಕೃತಿ ತಾನೆ ಲೋಕದೊಂದಾಕಾರಂ: **ಆದಿಪು**, ೧. ೪೫)

**ವೈಶ್ರವಣ** - ಕುಬೇರ (ಆ ದೇವರ ದೇವಂ ... ಉದಯಿಸಲಿರ್ದುದಂ ಸೌಧರ್ಮೇಂದ್ರಂ ಅವಧಿಬೋಧದಿಂದ ಅಱಿದು ... ವೈಶ್ರವಣಂ ರತ್ನವೃಷ್ಟಿಯಂ ಕಱೆಯುತ್ತಿರೆಂದು ನೇಮಿಸಿದಾಗಳ್: **ಶಾಂತೀಶ್ವಪು**, ೧೩. ೨೦೪ ವ)

**ವ್ಯಂಜನ** - ಅಷ್ಟಾಂಗಮಹಾನಿಮಿತ್ತಗಳಲ್ಲಿ ಒಂದು (ವ್ಯಂಜನಮೆಂಬುದುಂ ಶಿರೋಮುಖಗ್ರೀವಾದಿಗಳಂ ತಿಲಕ ಮಸ್ತಕ ಲಕ್ಷ್ಮ ವ್ರಣಾದಿವೀಕ್ಷಣದಿಂ ತ್ರಿಕಾಲ ಲಾಭಾಲಾಭಾದ್ಯಾವೇದನಂ: **ಚಾವುಂಡಜಯ**, ಪು. ೧೫೪)

**ವ್ಯಂತರ** - ಜ್ಯೋತಿಷೀ ವಿಮಾನವಾಸೀ ಭವನಪತಿ ಮತ್ತು ವ್ಯಂತರವೆಂಬ ನಾಲ್ಕು ಬಗೆಯ ದೇವತೆಗಳಲ್ಲಿಒಂದು ಗುಂಪು, ಮಹಾಮೇರುಪರ್ವತದ ತುದಿಯಿಂದ ಭವನಲೋಕದವರೆಗೆ ಇರುವ ದೇವತೆಗಳು (ಮರ್ತ್ಯವಿದ್ಯಾಧರರಾಜವ್ಯಂತ ರಾಧೀಶ್ವರ ಕರಸರಸಿಜಂಗಳಂ ... ಮುಗಿಯಿಸೆ: **ಆದಿಪು**, ೬. ೪೬)

**ವ್ಯಂತರದೇವ** - ಕಿನ್ನರ, ಕಿಂಪುರುಷ, ಮಹೋರಗ, ಗಂಧರ್ವ, ಯಕ್ಷ, ರಾಕ್ಷಸ, ಭೂತ ಮತ್ತು ಪಿಶಾಚ ಎಂಬ ಬೇರೆ ಬೇರೆ ದೇಶಗಳಲ್ಲಿರುವ ದೇವತೆಗಳು (ರಾಜ್ಯಪರಿಭ್ರಷ್ಟನಾಗಿ ತಾಪಸ ತಪಮಂ ಕೈಕೊಂಡು ನೆಗಟ್ಟು ಪ್ರತಿಸೂರ್ಯನೆಂಬ ವ್ಯಂತರದೇವನಾಗಿ ಪುಟ್ಟಿದೊಂ: **ವಡ್ಡಾರಾ**, ಪು ೪೧, ಸಾ ೧೩)

**ವ್ಯವಹಾರ** - ಸಪ್ತನಯಗಳಲ್ಲಿ ಒಂದು, ವಸ್ತುವಿನ ಪ್ರತ್ಯೇಕಭೇದವನ್ನು ಅನುಲಕ್ಷಿಸುವುದು (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದಸಮಭಿರೂಢೈವಂಭೂತಾದಿ ನಯವಿಭೇದದಿಂ: **ಸುಕುಮಾಚ**, ೩. ೩೯ ವ)

**ವ್ಯವಹಾರಕಾಲ** - ಕಾಲದ ಒಂದು ಬಗೆ: ಮುಖ್ಯಕಾಲದಿಂದ ಪರಿವರ್ತನೆಗೊಂಡ ಕ್ರಿಯೆಯುಳ್ಳದ್ದು, ಸಮಯ, ಆವಲಿಕಾ ಉಚ್ಛ್ವಾಸ, ಸ್ತೋಕ, ನಿಮೇಷ, ನಾಡಿಕಾ, ಮುಹೂರ್ತ, ದಿವಸ, ಪಕ್ಷ, ಮಾಸ, ಋತು, ಅಯನ, ಸಂವತ್ಸರಗಳೇ ಮೊದಲಾದ ಏರಿಕೆಯ ಎಣಿಕೆಯಿಂದ ಕೂಡಿರುವುದು (ವ್ಯವಹಾರಕಾಲಮೆಂಬುದು ಮುಖ್ಯಕಾಲನಿರ್ವರ್ತಿತ ಕ್ರಿಯಾರೂಪಂ: **ಆದಿಪು**, ೬. ೪೮ ವ)

**ವ್ಯವಹಾರನಯ** - ಗುಣಧರ್ಮಕೃತ ವ್ಯಕ್ತಿತ್ವಭೇದಗಳ ಮೇಲೆ ದೃಷ್ಟಿಯನ್ನು ಬೀರಿ

ವಿಶ್ವದ ನಿರೀಕ್ಷಣ ಮಾಡುವುದು, ಸಂಗ್ರಹನಯಕ್ಕೆ ವಿರುದ್ಧವಾದುದು, ಸಾಮಾನ್ಯವಸ್ತುವಿನ ಭಾವವನ್ನುಲಕ್ಷಿಸಿ ವೈಶಿಷ್ಟ್ಯವನ್ನು ಅನುಲಕ್ಷಿಸುವುದು (ವ್ಯವಹಾರನಯಾಶ್ರಿತ ಶುದ್ಧವನಿಶ್ಚಯವಿಶಿಷ್ಟ ರತ್ನತ್ರಯಮೆಂಬಿವು ಮುಕ್ತಗತಿಗೆ ಕಾರಣಮಪ್ಪುವು ವಿಮಳಧ್ಯಾನಮಂತರಕ್ಕೆ ನಿಮಿತ್ತಂ; **ಪಾರ್ಶ್ವನಾಪು,** ೧೬. ೧೨೪)

**ವ್ಯಾಮಿಶ್ರಕಥೆ** – ಧರ್ಮಕಥೆಗಳಲ್ಲಿನ ಒಂದು ವಿಧ; ನಾನಾವಿಧವಾದ ಪುಣ್ಯದ ಫಲಗಳನ್ನು ವಿವರಿಸುವುದು (ಅರ್ಥಕಥೆಯೆಂದುಂ ಕಾಮಕಥೆಯೆಂದುಂ ಧರ್ಮಕಥೆಯೆಂದುಂ ವ್ಯಾಮಿಶ್ರಕಥೆಯೆಂದುಂ ಚತುರ್ವಿಧಮಕ್ಕುಂ ... ವ್ಯಾಮಿಶ್ರಕಥೆಯೆಂಬುದು ನಾನಾವಿಧ ಪುಣ್ಯಫಲಮುಮಂ ಪೇಳ್ವುದು, **ಚಾವುಂಡಜಯ,** ಪು. ೩೨೬)

**ವ್ಯುತ್ಸರ್ಗ** – ಆರು ಬಗೆಯ ಅಭ್ಯಂತರತಪಗಳಲ್ಲಿ ಒಂದು, ಬಾಹ್ಯಾಭ್ಯಂತರ ಪರಿಗ್ರಹವನ್ನು ತೊರೆಯುವುದು (ದೊರೆಯಲ್ಲದ ಬಾಹ್ಯಾಭ್ಯಂತರೋಪಧಿಯನುಳಿದನಾರತಂ ವ್ಯುತ್ಸರ್ಗೋತ್ತರತಪದೊಳತಿವಿಶುದ್ಧಾಂತರಂಗನೆನಿಸಿದನಮಾನುಷ ಮುನಿತಿಲಕಂ: **ಸುಕುಮಾಚ,** ೪. ೧೯)

**ವ್ಯುಷ್ಟಿ** – ಒಂದು ಗರ್ಭಾನ್ವಯಕ್ರಿಯೆ, ಮೊದಲ ವರ್ಷದ ಹುಟ್ಟುಹಬ್ಬ (ವ್ಯುಷ್ಟಿ ಕೇಶಾವಾಪ ಲಿಪಿಸಂಖ್ಯಾನ .. .. ವಿಹಾರಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವ್ಯುಷ್ಟಿಕ್ರಿಯೆ** – ಮಗುವಿಗೆ ಒಂದು ವರ್ಷವಾದಾಗ ನಡೆಸುವ ಹುಟ್ಟುಹಬ್ಬದ ಆಚರಣೆ (ಒಂದು ವರುಷಂ ನೆಱೆದಂದು ಮುನ್ನಿನಂತೆ ದಾನಪೂಜಾಪೂರ್ವಕಂ ಬಂಧುಗಳಂ ಬರಿಸಿ ವರುಷವರ್ಧನಂ ಮಾಡುವುದು ವ್ಯುಷ್ಟಿಕ್ರಿಯೆ: **ಚಾವುಂಡಜಯ,** ಪು. ೧೮೧)

**ವ್ರತಚರ್ಯಾಕ್ರಿಯೆ** – ವಿವಿಧ ಶಾಸ್ತ್ರಗಳ ಅಧ್ಯಯನ (ಉಪಾಸಕಾಧ್ಯಯನಮುಂ ಅಧ್ಯಾತ್ಮಗ್ರಂಥಮುಂ ಶಬ್ದವಿದ್ಯೆಯುಂ ಅರ್ಥಶಾಸ್ತ್ರಂಗಳುಮನೋದಿ ತನ್ನ ಪಟುತ್ವಮುಂ ಸಂಸ್ಕಾರಮುಮಂ ಪ್ರಕಟಿಸಲೆಂದು ಜೋಯಿಸಮುಂ ಛಂದಮುಂ ಶಕುನಶಾಸ್ತ್ರಮುಂ ಸಂಖ್ಯಾನಮುಮಂ ಕಲ್ವುದು ವ್ರತಚರ್ಯಾಕ್ರಿಯೆ: **ಚಾವುಂಡಜಯ,** ಪು. ೧೮೨)

**ವ್ರತಚರ್ಯೆ** – ಒಂದು ಗರ್ಭಾನ್ವಯಕ್ರಿಯೆ, ಹಿಂಸಾಚಾರ ವರ್ಜಿಸಿ ಅಧ್ಯಯನವನ್ನು ಕೈಗೊಳ್ಳುವುದು (ಲಿಪಿಸಂಖ್ಯಾನ ಸಂಗ್ರಹೋಪನಯನ ಬ್ರಹ್ಮಚರ್ಯವ್ರತಾವರಣ ... ವಿಹಾರಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವ್ರತಾವರಣ** – ಒಂದು ಗರ್ಭಾನ್ವಯಕ್ರಿಯೆ, ಬ್ರಹ್ಮಚರ್ಯವ್ರತತ್ಯಾಗ (ಲಿಪಿಸಂಖ್ಯಾನ ಸಂಗ್ರಹೋಪನಯನ ಬ್ರಹ್ಮಚರ್ಯವ್ರತಾವರಣ ... ವಿಹಾರಯೋಗತ್ಯಾಗಾಗ್ರ

ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವ್ರತಾವತರಣಕ್ರಿಯೆ** – ಬ್ರಹ್ಮಚರ್ಯದಲ್ಲಿದ್ದಾಗ ಮೂಗು ಕಿವಿ ಕಣ್ಣು ಎಂಬ ಭೋಗೇಂದ್ರಿಯಗಳಿಂದ ಗಂಧ ರೂಪ ಶಬ್ದಗಳ ಅನುಭವವನ್ನು ಮಾತ್ರ ಮಾಡತಕ್ಕದ್ದು, ಗೃಹಸ್ಥಾಶ್ರಮಕ್ಕೆ ಬಂದ ಮೇಲೆ ಕಾಮಬ್ರಹ್ಮವ್ರತ ಅಂದರೆ ರಸ ಸ್ಪರ್ಶ ಇವುಗಳನ್ನು ಅನುಭವಿಸತಕ್ಕದ್ದು (ಭೋಗಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನುತ್ತರಕ್ರಿಯೆಯರ್ಪಿನೆಗಂ ನಡಯಿಸುವುದು ವ್ರತಾವತರಣಕ್ರಿಯೆ: **ಚಾವುಂಡಜಯ,** ಪು. ೧೮೨)

**ವ್ರತಿಕ** – ಶ್ರಾವಕನ ಹನ್ನೊಂದು ನೆಲೆಗಳಲ್ಲಿ ಎರಡನೆಯ ನೆಲೆಯುವನು (ವರಪಂಚಾಣುವ್ರತಮಂ ನಿರತಿಕ್ರಮಮಾಗೆ ತಾಳ್ದಿ ಪರಮದಯಾ ತತ್ಪರನೆನಿಸಿದ ಶಲ್ಯತ್ರಯವಿರಹಿತನೆರಡನೆಯ ನೆಲೆಯವಂ ವ್ರತಿಕಂ: **ಸುಕುಮಾಚ,** ೬. ೨೭); (ಮೂಲಗುಣಮೇಂಟಱೊಳಂ ಕೂಡಿ ಸಪ್ತಾಂತರಾಯಂಗಳಂ ಪಿಂಗಿಸಿ ಪಂಚಾಣುವ್ರತದೊಳೊಳ್ಳಿದನೆನಿಸಿ ಗುಣತ್ರಯದೊಳಂ ನೆರೆದು ಶಿಕ್ಷಾವ್ರತ ಚತುಷ್ಟಯದೊಳಮೆಸಗಿ ಧರ್ಮಾಶಾಲ್ಯಂಕುರಕ್ಕೆಡೆಯೆನಿಪ ಅಱುವತ್ತತಿಚಾರಮಂ ಪಿಂಗಿಸಿ ನೆಗೞ್ವಾತನೆರಡನೆಯ ವ್ರತಿಕನೆಂಬ ಶ್ರಾವಕನಕ್ಕುಂ: **ಧರ್ಮಾಮೃತ,** ೫. ೯೦ ವ)

## ಶ

**ಶಂಖನಿಧಿ** – ಕುಬೇರನ ನವನಿಧಿಗಳಲ್ಲಿ ಒಂದು (ಧೃತರತ್ನಾರ್ಘ್ಯಂ ಬಂದಂ ಪತಿಗಿದಿರಂ ಶಂಖನಿಧಿಯೆ ಬರ್ಪಂತಾಗಳ್: **ಆದಿಪು,** ೧೩. ೧೨)

**ಶಕ್ತಿ** – ನಯಶಾಸ್ತ್ರದ ಒಂದು ವಿಭಾಗ, ಇದರಲ್ಲಿ ಉತ್ಸಾಹಶಕ್ತಿ, ಮಂತ್ರಶಕ್ತಿ ಮತ್ತು ಪ್ರಭುಶಕ್ತಿ ಎಂದು ಮೂರು ಬಗೆ (ಶಕ್ತಿಯೆಂಬುದುತ್ಸಾಹ ಮಂತ್ರಿ ಪ್ರಭುವಿಕಲ್ಪದಿಂ ತ್ರಿವಿಧಮಕ್ಕುಂ; ಅಲ್ಲಿ ವಿಕ್ರಮಬಳಮುತ್ಸಾಹಶಕ್ತಿ, ವಿವಿಧ ವಸ್ತುವಿಚಾರಣಾ ಸಾಮರ್ಥ್ಯಂ ಮಂತ್ರಶಕ್ತಿ, ಕೋಶದಂಡ ಸ್ವೀಕರಣಂ ಪ್ರಭುಶಕ್ತಿಯಕ್ಕುಂ: **ಚಾವುಂಡಜಯ,** ಪು. ೨೫೬)

**ಶಕ್ತಿತಸ್ತ್ಯಾಗ** – ದರ್ಶನವಿಶುದ್ಧತೆ ಷೋಡಶಭಾವನೆಗಳಲ್ಲಿ ಒಂದು, ಸತ್ಪಾತ್ರರಿಗೆ ನೀಡುವ ಯಥಾಶಕ್ತಿಯ ಆಹಾರಾದಿ ದಾನರೂಪದ ತ್ಯಾಗ (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಶಕ್ರನೃತ್ಯ** – ಜಿನನ ಜನ್ಮಾಭಿಷೇಕಕಾಲದಲ್ಲಿ ಸೌಧರ್ಮೇಂದ್ರನು ಮಾಡುವ ಆನಂದನೃತ್ಯ (ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ: **ಆದಿಪು,** ೭. ೧೨೫)

**ಶತಾರ** – ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬); ಅರವತ್ತಮೂರು ಇಂದ್ರಕ[ವಿಮಾನ]ಗಳಲ್ಲಿ ಒಂದು (ದಿನಮೆಂತಂತೆ ಶತಾರಮಗ್ರಿಮ ಸಹಸ್ರಾರಂ ಸಹಸ್ರಾಮಪ್ರವಿಲಕ್ಷ್ಯಂ ದಿನಪೋಪಮನವಳಯಂ ಜಾಜ್ವಲ್ಯಮಾನಂ: **ಶಾಂತಿಪು,** ೧೦. ೧೧೫)

**ಶಬ್ದ** – ಸಪ್ತನಯಗಳಲ್ಲಿ ಒಂದು, ಶಬ್ದದಿಂದ ಉಂಟಾಗುವ ಅರ್ಥವನ್ನು ಗ್ರಹಿಸುವುದು (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದ ಸಮಭಿರೂಢೈವಂಭೂತಾದಿ ನಯವಿಭೇದದಿಂ: **ಸುಕುಮಾಚ,** ೩. ೩೯ ವ)

**ಶಬ್ದಪ್ರವೀಚಾರ** – ಪ್ರವೀಚಾರವೆಂದರೆ ಮೈಥುನದ ಉಪಸೇವನೆ; ಕಾಯಪ್ರವೀಚಾರ, ಸ್ಪರ್ಶಪ್ರವೀಚಾರ, ರೂಪಪ್ರವೀಚಾರ, ಶಬ್ದಪ್ರವೀಚಾರ, ಮನಃಪ್ರವೀಚಾರಗಳೆಂಬ ಐದು ಬಗೆಯ ಪ್ರವೀಚಾರಗಳಲ್ಲಿ ಒಂದು, ಕೇಳುವಿಕೆಯಿಂದಲೇ ಇಂದ್ರಿಯಸುಖವನ್ನು ಹೊಂದುವುದು (ವೃಂದಾರಕರೆಲ್ಲಂ ಹಸ್ತಚತುಷ್ಟ ಯೋತ್ಸೇಧರುಂ ಅಷ್ಟಾದಶರತ್ನಾಕರೋಪಮ ಆಯುಷ್ಯರುಂ ಶಬ್ದಪ್ರವೀಚಾರರುಂ ಅಪ್ಪರ್: **ಸುಕುಮಾಚ,** ೧೧. ೬೬ ವ)

**ಶಯನಾಶನಶುದ್ಧಿ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳಲ್ಲಿ ಒಂದು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಪಥಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ಶರೀರತ್ರಿಗುಣಬಹುಳತೆ** – ಪೂರ್ವಶರೀರವನ್ನು ಬಿಡದೆ ತೈಜಸ, ಕಾರ್ಮಣ ಶರೀರಗಳನ್ನು ಹಿಗ್ಗಿಸುವುದು (ಅಂತರ್ಮುಹೂರ್ತಕಾಲದಿಂ ಶರೀರತ್ರಿಗುಣಬಹುಳತೆಯಿಂ ಚತುರ್ದಶರಜ್ಜ್ವಾಯಾಮಾತ್ರತ್ರಿಗುಣಪ್ರಮಾಣಾತ್ಮಪ್ರದೇಶ ವಿಸರ್ಪಣದಿಂ: **ಆದಿಪು,** ೧೬. ೪೯ ವ)

**ಶರೀರಪೂಜಾ[ಜೆ]** – ಸತ್ತವರ ದೇಹಕ್ಕೆ ಮಾಡುವ ಪೂಜೆ (ಖದಿ ಸತ್ತ ನೆಗಟ್ತೆಯ ಖೇಚರರರ್ಗೆಲ್ಲಂ ಶರೀರಪೂಜಾಪೂರ್ವಕಂ ಸಂಸ್ಕಾರವಿಧಿಯಂ ನಿರ್ವರ್ತಿಸಿ: **ಶಾಂತಿಪು,** ೫. ೬೪ ವ)

**ಶರೀರಪ್ರತ್ಯಾಖ್ಯಾನ** – ದೇಹದ ಬಗೆಗಿನ ತಿರಸ್ಕಾರ (ಜಾತಿಸ್ಮರರುಮಾಗಿ ಪರಸ್ಪರವೈರಮಂ ಬಿಸುಟ್ಟು ಆಹಾರಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನವಿಧಿಯಿಂದಂ ಅಸುವಂ ವಿಸರ್ಜಿಸಿ: **ಶಾಂತಿಪು,** ೯. ೭೧ ವ)

**ಶರೀರಶೋಭೆ** – [ಜೈನ] ಶವಕ್ಕೆ ಮಾಡುವ ಅಲಂಕಾರ (ಹಾಹಾಕ್ರಂದನಧ್ವನಿಗಳ್ ಅಂತಃಪುರಕ್ಕಂ ಪುರಕ್ಕಂ ನೆಗೞೆ ಮತಿವರಾದಿಗಳ್ ತದ್ದಂಪತಿಗಳ್ಗೆ ಶರೀರಶೋಭೆಯಂ ಮಾಡಿ: **ಆದಿಪು,** ೫. ೨೭ ವ)

**ಶರ್ಕರಾಪ್ರಭೆ** – ಏಳು ನರಕಗಳಲ್ಲಿ ಎರಡನೆಯದು (ಆಡಿದ ಕಾಡೊಳ್ ಜವನೆೞ್ಚಱಿದನೆನೆ ಕೊಂದು ತಿಂದು ಕೈಯುಂ ಕಾಲುಂ ಮೂಡಿದುವು ಪಾತಕಕ್ಕೆನೆ ಕಾಡೊಡೆಯಂ ಕಟಿದು ಶರ್ಕರಾಪ್ರಭೆಗಿೞಿದಂ: **ಪಂಪರಾ,** ೬. ೬೪)

**ಶಲಾಕಾಪುರುಷ** – ಅರವತ್ತು ಮೂವರು ಶ್ರೇಷ್ಠಪುರುಷರು: ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ಹನ್ನೆರಡು ಮಂದಿ ಚಕ್ರವರ್ತಿಗಳು, ಒಂಬತ್ತು ಮಂದಿ ಬಲದೇವರು, ಒಂಬತ್ತು ಮಂದಿ ವಾಸುದೇವರು, ಒಂಬತ್ತು ಮಂದಿ ಪ್ರತಿವಾಸುದೇವರು (ಅಭ್ಯುದಯನಿಶ್ರೇಯಸಸುಖನಿಮಿತ್ತಂಗಳುಂ ಉದಿತೋದಿತನುಂ ಶಲಾಕಾಪುರುಷನುಂ ಚಕ್ರವರ್ತಿಯುಂ ಮನ್ಮಥನುಂ ತೀರ್ಥಂಕರ ಪರಮದೇವನುಂ ಅಪ್ಪ: **ಶಾಂತಿಪು,** ೯. ೨೦೮ ವ); ನೋಡಿ, **'ತ್ರಿಷಷ್ಠಿಶಲಾಕಾಪುರುಷರು'**

**ಶಲ್ಯ** – ಮುಳ್ಳಿನಂತೆ ನೋವನ್ನುಂಟುಮಾಡುವ ಮೋಹ: ಮಿಥ್ಯಾ ಮಾಯಾ ನಿದಾನ ಎಂದು ಇದರಲ್ಲಿ ಮೂರು ಬಗೆ (ಶಲ್ಯಂಗಳಿರ್ದೊಡಂ ವೈಕಲ್ಯಕ್ಕೆಡೆಗುಡದೆ ಧೃತಿಯನವಳಂಬಿಸಿ ನಿಃಶಲ್ಯನೆನಿಸಿದ ವಾತ್ಸಲ್ಯಪರಂ ಪರಮತತ್ತ್ವಮಂ ಭಾವಿಸಿದಂ: **ಪಾರ್ಶ್ವನಾಪು,** ೧೨. ೮೯)

**ಶಲ್ಯತ್ರಯ** – ವ್ರತಸ್ಥನನ್ನು ಬಾಧಿಸುವ ಮಾಯಾ, ಮಿಥ್ಯಾ, ನಿದಾನ ಎಂಬ ಮೂರು ಬಗೆಯ ತೊಂದರೆಗಳು (ಶಲ್ಯತ್ರಯತ್ರಿಗಾರವರಹಿತನುಂ ... ದಶಧರ್ಮ ಸಂಯುತನುಂ: **ಕರ್ಣನೇಮಿ,** ೨. ೬೧ ವ)

**ಶಲ್ಯವಿದೂರ** – ಶಲ್ಯತ್ರಯಗಳನ್ನು ನಿವಾರಿಸಿಕೊಂಡವನು (ಶಲ್ಯವಿದೂರ ಬಂಕರಸನಂಕದ ಮಾಚೆಯತಂದೆ ... ಬರೆದಪಂ ಬುಧಮಾಧವನೀ ಪ್ರಬಂಧಮಂ: **ಪುಷ್ಪದಂಪು,** ೧೪. ೫೭)

**ಶಾಂತಿ** – ಇಪ್ಪತ್ತನಾಲ್ಕು ಮಂದಿ ತೀರ್ಥಂಕರರಲ್ಲಿ ಹದಿನಾರನೆಯವನು (ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮ ಚಕ್ರನಿಯುಕ್ತಂ ಭರತೋರ್ವಿಗಿಂತು ಸಲೆ ನೋಂತು ಶಾಂತಿತೀರ್ಥೇಶ್ವರಂ: **ಶಾಂತಿಪು,** ೧. ೧೬)

**ಶಾಂತಿಕಕ್ರಿಯೆ** – ಶಾಂತಿಕ (ಭಗವದರ್ಹದಭಿಷೇಕ ಮುನಿಪೂಜನ ಸತ್ಪಾಶತ್ರದಾನ ಪ್ರಣಯಪ್ರೀಣನ ಮಾಹಾರವಿತರಣ ಗೋದೋಹಪ್ಲವಾವನೀತಳ ಸಂತರ್ಪಣಾದಿ ಶಾಂತಿಕಕ್ರಿಯೆಗಳಂ ನೆಗೞ್ದು: **ಆದಿಪು,** ೧೫. ೪೮ ವ)

**ಶಾಂತಿಕಪೌಷ್ಟಿಕಕ್ರಿಯೆ** – ಅನಿಷ್ಟಪರಿಹಾರಕ್ಕಾಗಿ ಮಾಡುವ ಜಪ ತಪ ಹೋಮ ಮುಂತಾದ ವಿಧಿ (ಅಂತು ದರ್ಭಶಯನತಳಗತನಾಗಿರ್ದು ಪಂಚಪರಮೇಷ್ಠಿಗಳ್ಗೆ ಪೂಜೆಯಂ ಪುರೋಹಿತಂ ಮಾಡಿ ಶಾಂತಿಕಪೌಷ್ಟಿಕಕ್ರಿಯೆಯಂ ನಿರ್ವರ್ತಿಸಿ: **ಆದಿಪು,** ೧೨. ೭೪ ವ)

**ಶಾಂತಿಕರ್ಮ** – ಶಾಂತಿಕ (ಸಕಳಮಹೀವಳಯಕ್ಕೆ ಶಾಂತಿಕರ್ಮಂ ವಲಮೆನಿಸಲ್ ಜಾತಕರ್ಮಮೇಂ ನೆಱೆದತ್ತೋ: **ಆದಿಪು,** ೧೧. ೫)

**ಶಾರ್ಙ್ಗಚಾಪ** – ಮಧುರಾನಗರದ ಚೈತ್ಯಾಲಯದಲ್ಲಿ ಹುಟ್ಟಿದ ಧನುಸ್ಸು; ಇದನ್ನು ಕೃಷ್ಣನು ವಶಮಾಡಿಕೊಳ್ಳುತ್ತಾನೆ (ಹರಿಯದೊಂದು ಪುಣ್ಯೋದಯದಿಂ ಶುಚಿನಾಗಶಯ್ಯೆಯುಂ ಶಾರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ: **ನೇಮಿನಾಪು,** ೮. ೨೬)

**ಶಾರ್ಙ್ಗಧರ** – ವಾಸುದೇವ (ಅಂತು ಅಶ್ವಗ್ರೀವಂ ... ಚಕ್ರಮಂ ಕೊಂಡಿಡೆ ಶಾರ್ಙ್ಗಧರಂ ಕಡೆಗೊಂಡೊಂ ಕುಡುವಂತೆ ಮಗುಟ್ದಿದಂ ತಚ್ಚಂಡಾರಿಶಿವಂ ಸಿಂಧುರದುಂಡಿಗೆ ಧರೆಗೆನಿಸಿ ಮುಂದೆ ಬಿಟ್ಟುದು ಹರಿಯಾ: **ಶಾಂತಿಪು,** ೫. ೬೩)

**ಶಾಶ್ವತಪದ** – ಮೋಕ್ಷ (ಶ್ರೀಮತ್ ಸಮಂತಭದ್ರಸ್ವಾಮಿಗಳ ಜಗತ್ ಪ್ರಸಿದ್ಧ ಕವಿಪರಮೇಷ್ಠಿಸ್ವಾಮಿಗಳ ಪೂಜ್ಯಪಾದಸ್ವಾಮಿಗಳ ಪದಂಗಳ್ ಈಗೆ ಶಾಶ್ವತಪದಮಂ: **ಆದಿಪು,** ೧. ೧೧)

**ಶಾಶ್ವತಾಸ್ಪದ** – ಮೋಕ್ಷ (ನಿಂದಂ ಕೊಳಲ್ ಶಾಶ್ವತಾಸ್ಪದಮಂ ಯೋಗನಿಯೋಗ ನಿಶ್ಚಳಮನಂ ಸಂದಾಧಿಭಟ್ಟಾರಕಂ: **ಆದಿಪು,** ೯. ೧೨೩)

**ಶಾಸನದೀಪಕ** – ಧರ್ಮವನ್ನು ಬೆಳಗುವವನು (ಆಸನ್ನಭವ್ಯರ್ ಅರ್ಹಚ್ಛಾಸನದೊಳ್ ಭಕ್ತರೆಂದೊಡಿಂ ಪ್ರತ್ಯಕ್ಷೋದ್ಭಾಸಿಯನೀಕ್ಷಿಸಿ ಜಿನನಂ ಶಾಸನದೀಪಕನ ಭಕ್ತಿ ಕಿಱಿದಾದಪುದೇ: **ಶಾಂತಿಪು,** ೧೨, ೩೯)

**ಶಾಸನದೇವತೆ** – ಜೈನ ದೇವತೆ (ಶಾಸನದೇವತೆಗೆಂದೊಡೆ ವೀಸದ ಪುಷ್ಪಮನೀಯರ್ ಅಱಿಗುಲಿವೆಂಡಿರ್: **ಸಮಯಪ,** ೫. ೯೯)

**ಶಾಸನದೇವಿ** – ತೀರ್ಥಂಕರರ ಯಕ್ಷಿ (ಜಿನವೃಂದಾರಕರಿಪ್ಪತ್ತು ನಾಲ್ವರ್ ಆ ತೀರ್ಥನಾಥಸಮುದಾಯದ ಶಾಸನದೇವಿಯರ್ಕಳ್ ಇರ್ಪತ್ತುನಾಲ್ವರೀಗೆ ಯಕ್ಷರ್ ಅಕ್ಷಯಸುಖಮಂ: **ಅಜಿತಪು,** ೧. ೫)

**ಶಾಸ್ತ್ರದಾನ** – ಆಹಾರ ಅಭಯ ಔಷಧ ಮತ್ತು ಶಾಸ್ತ್ರವೆಂಬ ನಾಲ್ಕು ಬಗೆಯ ದಾನಗಳಲ್ಲಿ ಒಂದು, ಜೈನಗ್ರಂಥಗಳನ್ನು ಶ್ರಾವಕರಿಗೆ ನೀಡುವುದು (ಈ ಪೊೞಲೊಳ್ ತಪಮುಂ ಉಭಯದಾನಮುಂ ಶಾಸ್ತ್ರದಾನಮುಂ ಮುನ್ನಂ ಆದಿದೇವನಿನ್ ಪ್ರವರ್ತಿತಮಾಗೆ: **ಚಾವುಂಪು,** ಪು. ೪೩೪. ಸಾ. ೨೦); (ಪರಮಾಗಮದಿಂದಲ್ಲದೆ ಪರತ್ರೆಯಂ ಪಡೆವುಪಾಯಮಿಲ್ಲದಱಿಂದಂ ವರಶಾಸ್ತ್ರದಾನಂ ಮಾಡುವುದು ಶಾಸ್ತ್ರದಾನಮನಟೆಪಿಂ: **ಧರ್ಮಾಮೃತ,** ೪. ೩೩)

**ಶಿಕ್ಷಾವ್ರತ** – ಶ್ರಾವಕರು ಪಾಲಿಸಬೇಕಾದ ಸಾಮಯಿಕ, ಪ್ರೋಷಧ, ಅತಿಥಿಸಂಗ್ರಹ, ಸಲ್ಲೇಖನ ಎಂಬ ನಾಲ್ಕು ವ್ರತಗಳು (ಭಟಾರರ ಪಕ್ಕದೆ ಆಂ ಅಣುವ್ರತ ಗುಣವ್ರತ ಶಿಕ್ಷಾವ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುಮಂ: **ವಡ್ಡಾರಾ,** ಪು ೧೨೭, ಸಾ ೨೨) ಶಿಕ್ಷಾವ್ರತಗಳು ನಾಲ್ಕು ಬಗೆ (ಸಾಮಾಯಿಕ

ಪ್ರೋಷಧೋಪವಾಸಮುಂ ಉಪಭೋಗ ಪರಿಭೋಗಾತಿಥಿ ಸಂವಿಭಾಗಮುಂ ಪಶ್ಚಿಮಸಲ್ಲೇಖನಮುಮೆಂಬ ನಾಲ್ಕು ಶಿಕ್ಷಾವ್ರತಮುಮನ್: **ವಡ್ಡಾರಾ,** ಪು. ೧೬೦, ಸಾ. ೨೫); (ತೀವ್ರೋಪವಾಸಮುಂ ದಾನವ್ರತಮುಂ ನಿಖಿಲ ಸಮತೆಯುಂ ಸನ್ಯಾಸವ್ರಜನಮುಮೆಂಬಿವು ಶಿಕ್ಷಾವ್ರತಮಿದು ನಾಲ್ಕು ತೆಜಿನನೂನಾಗಮದೊಳ್; **ಶಾಂತಿಪು,** ೧. ೯೦)

**ಶೀಲವ್ರತ** – ಮುನಿಗಳ ವ್ರತಾಚರಣೆ (ದರ್ಶನವಿಶುದ್ಧನಾಗಿಯುಂ ಶಿಲವ್ರತಭಾವನಾ ರಹಿತಂ ಅಸಂಯುತಂ ಜಘನ್ಯಪಾತ್ರಂ: **ಆದಿಪು,** ೧೦. ೯ ವ)

**ಶೀಲವ್ರತಾನತಿಚಾರ** – ಷೋಡಶಭಾವನೆಗಳಲ್ಲಿ ಒಂದು, ಮನವಚನಕಾಯಗಳಲ್ಲಿ ನಿರವದ್ಯವಾದ ನಡವಳಿಕೆ (ಶೀಲವ್ರತಾನತಿಚಾರಮೆಂಬುದು ಚಾರಿತ್ರಕಲ್ಪಮಪ್ಪ ಹಿಂಸಾದಿ ವ್ರತಂಗಳೊಳ್ ತತ್ಪರಿಪಾಲನಮಪ್ಪ ಕ್ರೋಧಾದಿ ಪರಿವರ್ಜನಶೀಲಂ ಗಳೊಳ್ ಮನವಚನಕಾಯಂಗಳೊಳ್ ನಿರವದ್ಯಮಪ್ಪ ನೆಗಟ್ತೆ: **ಚಾವುಂಡಜಯ,** ಪು. ೨೦೭)

**ಶೀಲಸಪ್ತಕ** – ಮೂರು ಗುಣವ್ರತಗಳು [ದಿಗ್ವ್ರತ, ದೇಶವ್ರತ, ದಂಡವಿರತಿವ್ರತ] ಹಾಗೂ ನಾಲ್ಕು ಶಿಕ್ಷಾವ್ರತಗಳು [ಸಾಮಾಯಿಕ, ಪ್ರೋಷಧೋಪವಾಸ, ಉಪಭೋಗ ಪರಿಭೋಗಾತಿಥಿಸಂಗ್ರಹ, ಪಶ್ಚಿಮ ಸಲ್ಲೇಖನ] (ಪಂಚಾಣುವ್ರತಂಗಳ ಕೂಟಮನುಳ್ಳ ದುಃಖಭಾಜನಮಲ್ಲದ ಶೀಲಸಪ್ತಕದೊಳ್ಕೂಡಿದಂ: **ಧರ್ಮಾಮೃ,** ೫. ೮೮ ವ)

**ಶೀಳಸಂಪನ್ನ** – ಶೀಲವ್ರತವನ್ನಾಚರಿಸುವವನು (ವಿಶದಯಶೋನಿಳಯಂ ವಿಮಳಶೀಳಸಂಪನ್ನಂ ಉಚಿತ ಭೈಕ್ಷಾನೀಕಂ ನಿಶಿತಮತಿಯುಕ್ತಂ ಏಕಾದಶಸ್ಥಂ ಉದ್ದಿಷ್ಟದೇಶವಿರತಂ ಪೆಸರಿಂ: **ಸುಕುಮಾಚ,** ೬. ೩೬)

**ಶುಕ್ರ** – ಹದಿನಾರು ಕಲ್ಪಗಳಲ್ಲಿ ಒಂಬತ್ತನೆಯದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಶುಕ್ಲಧ್ಯಾನ** – ಪರಿಶುದ್ಧವಾದ ಆತ್ಮಜ್ಞಾನ: ಪೃಥಕ್ತ್ವವಿತರ್ಕವಿಚಾರ, ಏಕತ್ವವಿತರ್ಕವಿಚಾರ, ಸೂಕ್ಷ್ಮಕ್ರಿಯಾ ಪ್ರತಿಪಾತಿ, ವ್ಯುಪರತ ಕ್ರಿಯಾನಿವೃತ್ತಿ ಎಂಬ ನಾಲ್ಕು ಬಗೆಯ ಶುಕ್ಲಧ್ಯಾನಗಳು (ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಜಾನಿಸಿ ಸಕಳ ಕರ್ಮಂಗಳಂ ಕಿಡಿಸಿ ಅಂತರ್ಗತ ಕೇವಲಿಯಾಗಿ ಮೋಕ್ಷಕ್ಕೆ ವೋದರ್: **ವಡ್ಡಾರಾ,** ಪು ೭೨, ಸಾ ೧೯); ಇದರಲ್ಲಿ ಎರಡು ಬಗೆ (ಶುಕ್ಲಧ್ಯಾನಮುಂ ಶುಕ್ಲ ಪರಮಶುಕ್ಲಂ ಎಂದೆರಡು ತೆಜಿನಕ್ಕುಂ: **ಅಜಿತಪು,** ೮. ೨೮ ವ)

**ಶುಕ್ಲಲೇಶ್ಯಾ** – ಕರ್ಮಸಂಬಂಧವಾದ ಬಣ್ಣಗಳಲ್ಲಿ ಒಂದು; ಅತಿನಿದ್ದೆಯ ಸಂಕೇತವಾದ ಬಿಳಿ; ಆರು ಲೇಶ್ಯೆಗಳಲ್ಲಿ ಒಂದು, ಶುಭಭಾವ (ಶುಭಭಾವಶುಕ್ಲಲೇಶ್ಯಾನುಭಾವದಿಂ ಧವಳಪುಂಡರೀಕ ನಿಕಾಶಪ್ರಭೆ ದೊರೆಕೊಂಡುದು ಪರಿಣಾಮಭೇದಮೇಂ ಚಿತ್ರವಿಧಮೊ ತನುಭೃದ್ಗಣದಾ: **ಆದಿಪು,** ೬. ೪೨)

**ಶುದ್ಧ್ಯಷ್ಟಕ** – ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ಶುಭಧ್ಯಾನ** – ಮಂಗಳಕರವಾದ ಆಲೋಚನೆ (ಚತುರ್ಮುಖ ಪ್ರತಿಮಾಯೋಗದೊಳ್ ನಿಂದು ಶುಭಧ್ಯಾನಮನಪ್ಪುಕೆಯ್ದು ಮಹರ್ಷಿಯರಂ ಕಂಡೆಯ್ದೆವರ್ಪುದುಂ: **ಪಂಪರಾ,** ೮. ೪೬ ವ);

**ಶುಭಯೋಗ** – ಶುಭಧ್ಯಾನ (ಶುಭಯೋಗಭಾಗಿ ಯೋಗಪ್ರಭು ವಧೆಯಿಂದಾದ ಪಾಪದಿಂ ದುಃಖದಪ್ರಭವಾಟಪಿಯೆನಿಪ ತಮಃಪ್ರಭೆಯೊಳ್ ಜನಿಯಿಸಿ: **ಪಾರ್ಶ್ವನಾಪು,** ೧೩. ೭೬)

**ಶೂದ್ರ** – ಆದಿದೇವನು ವಿಭಾಗಿಸಿದ ಮೂರು ವರ್ಣಗಳಲ್ಲಿ ಮೂರನೆಯದು, ಕರ್ಮಕವರ್ಗ (ಮತ್ತಂ ಸ್ಪೃಶ್ಯಾಸ್ಪೃಶ್ಯಕಾರುಗಳುಮೆಂದಿರ್ತೆಱದ ಶೂದ್ರಸಂತತಿಗೆ ಶುಶ್ರೂಷಾನಿಯೋಗಂಗಳುಮಂ: **ಆದಿಪು,** ೮. ೬೪ ವ)

**ಶೂದ್ರಾನ್ವಯ** – ಶೂದ್ರವರ್ಣ (ಶೂದ್ರಾನ್ವಯಕ್ಕೆ ಬ್ರಾಹ್ಮಣಾದಿ ವರ್ಣತ್ರಯಕ್ಕಂ ಶುಶ್ರೂಷಾದ್ಯನೇಕ ಕರ್ಮಕರಣ ಉಪಜೀವನಮುಮಂ ನಿಜೆಪಿ: **ಆದಿಪು,** ೮. ೭೩)

**ಶೂನ್ಯವಾದ** – ಬೌದ್ಧಮತ ದರ್ಶನ, ನಿರೀಶ್ವರವಾದ (ಶೂನ್ಯವಾದ ಪ್ರಕಾಶನಪರಂ ಆವುದಂತರ್ಬಹೀರೂಪದಿಂ ವಿಶದದರ್ಶನಾವಗಮ್ಯಂ ಅದೆಲ್ಲಂ ಅಸತ್ಯಾವಭಾಸಿ: **ಆದಿಪು,** ೨. ೯ ವ)

**ಶೂನ್ಯವಾದಿ** – ನಾಸ್ತಿಕವಾದದ ಪ್ರತಿಪಾದಕ (ಇರ್ವರುಂ ಮಿಥ್ಯಾಜ್ಞಾನಿಗಳ್ ಶೂನ್ಯವಾದಿಗಳ್: **ಚಾವುಂಪು,** ಪು. ೧೭೬, ಸಾ. ೧೦)

**ಶೋಕ** – ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು, ದುಃಖವನ್ನು ಉಂಟುಮಾಡುವಂಥದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್ಕರ್ಮದೊಡನೆ ಹಾಸ್ಯರತ್ಯರತಿಶೋಕ ಭಯಜುಗುಪ್ಸಾಭಿಧಾನ ನೋಕಷಾಯಷಟ್ಕಮುಮಂ ಘಾತಿಸಿಳ **ಆದಿಪು,** ೧೦. ೧೪ ವ)

**ಶೌಚ** – ಹತ್ತು ಕುಲಧರ್ಮಗಳಲ್ಲಿ ಒಂದು, ಲೋಭವನ್ನು ತೊರೆಯುವುದು (ಎಂಬಿನಮುತ್ತಮಕ್ಷಮಾ ಮಾರ್ದವಾರ್ಜವ ಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ಶ್ರಾವಕ** – ಜೈನ ಗೃಹಸ್ಥ; ಶ್ರಾವಕ ಎಂದರೆ ನಿಷ್ಠಾವಂತ ಜೈನ ಗೃಹಸ್ಥ; ಅವನು ಅನುಸರಿಸಬೇಕಾದ ಹನ್ನೆರಡು ವ್ರತಗಳೆಂದರೆ – ಐದು ಪಂಚಾಣುವ್ರತಗಳು

[ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯೆ ಮತ್ತು ಅಪರಿಗ್ರಹ), ಮೂರು ಗುಣವ್ರತಗಳು (ದಿಗ್ವಿರತಿ, ದೇಶವಿರತಿ ಮತ್ತು ಅನರ್ಥದಂಡವಿರತಿ) ಹಾಗೂ ನಾಲ್ಕು ಶಿಕ್ಷಾವ್ರತಗಳು (ಸಾಮಯಿಕ, ಪ್ರೋಷಧ, ಅತಿಥಿಸಂಗ್ರಹ ಮತ್ತು ಸಲ್ಲೇಖನ] (ಶ್ರಾವಕನಲ್ಲದೊಡಂ ಪುಣ್ಯಾವಹಮೆಂದೊಂದು ಪರ್ವದೊಳ್ ಮಿಂದುಣ್ಬಂ: **ಸಮಯಪ,** ೬. ೮೯)

**ಶ್ರಾವಕತನ** – ಐದು ಅಣುವ್ರತಗಳು, ಮೂರು ಗುಣವ್ರತಗಳು ಮತ್ತು ನಾಲ್ಕು ಶಿಕ್ಷಾವ್ರತಗಳನ್ನು ಪಾಲಿಸುವಿಕೆ (ಶ್ರಾವಕತನದಿಂದಂ ಇಂತುಟಾಗಲೆವೇಟ್ಟುಂ: **ಸಮಯಪ,** ೧೩. ೧೧)

**ಶ್ರಾವಕಧರ್ಮ** – ಜೈನಧರ್ಮ (ವ್ರತಂದಾಳ್ದಿ ಸಮ್ಮದದಿಂದಂ ಶ್ರಾವಕಧರ್ಮಮಂ ಗುಣಮಹಾರತ್ನಾಪಣಂ ಗೋಪಣಂ: **ಕರ್ಣನೇಮಿ,** ೧. ೩೬): ಜೈನಗೃಹಸ್ಥನ ನಾಲ್ಕು ಕರ್ತವ್ಯಗಳು (ದಾನಂ ಪೂಜೆ ಶೀಲಂ ಉಪವಾಸಮೆಂಬೀ ನಾಲ್ಕುಂ ತೆಱದ ಶ್ರಾವಕಧರ್ಮಂ: **ಜೀವಸಂ,** ೧೨, ೨ ವ)

**ಶ್ರಾವಕಮಾನಿ** – ಶ್ರಾವಕನೆಂದು ಗೌರವಪಡೆದವನು (ಶ್ರಾವಕಮಾನಿಗಳನನೇಕ ವಿಧದಿನುಪಜೀವಿಪರಜ್ಞಾನಿಗಳ ಬುದ್ಧಿಪೌರುಷಹೀನಮಜೀವಿಕೃತಂ ಬೃಹಸ್ಪತಿಮತದೊಳ್: **ಶಾಂತಿಪು,** ೮. ೧೩೧)

**ಶ್ರಾವಕವ್ರತ** – ಶ್ರಾವಕನು ನೆರವೇರಿಸಬೇಕಾದ ವ್ರತಗಳು (ಸಮ್ಯಗ್ದರ್ಶನಸಮೇತಂ ಸಕಳ ಶ್ರಾವಕವ್ರತಂಗಳಂ ಕೆಯ್ಕೊಂಡು ಮನೆಗೆ ವಂದು: **ಶಾಂತಿಪು,** ೯. ೮೩ವ)

**ಶ್ರಾವಕಾಗ್ರಣಿ** – ಶ್ರೇಷ್ಠ ಜೈನಗೃಹಸ್ಥ (ಕ್ರಿಯಾಮಂತ್ರಂಗಳಿಂದಂ ಆತ್ಮಸಮಾನ ಶ್ರಾವಕಾಗ್ರಣಿಗಳ್ಗೆ ಕನ್ಯಾ ಭೂಮಿ ಸುವರ್ಣ ಹಸ್ತಿ ಅಶ್ವ ರಥ ರತ್ನಾದಿಗಳಂ ಕುಡುವ ಸಮದತ್ತಿಯುಂ: **ಆದಿಪು,** ೧೫. ೧೩ ವ)

**ಶ್ರಾವಕಾಚಾರ** – ಶ್ರಾವಕತನ (ಇಂತೀ ಸಮೀಚೀನ ಶ್ರಾವಕಾಚಾರಂಗಳಂ ನಿರತಿಚಾರಮಾಗೆ ತಾಳ್ದಿದ ದೇಶವಿರತಂಗೆ ಇಚ್ಛೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪಂ ಎಂದು ಆರ್ಯಕರ್ಮಂ ಆಱು ತೆಱನಕ್ಕುಂ: **ಸುಕುಮಾಚ,** ೬. ೨೫ ವ)

**ಶ್ರಾವಕಿ** – ಜೈನ ಗೃಹಸ್ಥೆ (ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ಶೀಲದೊಳ್ ದೇವಕಿ ತಾನೆ: **ಅಜಿತಪು,** ೧. ೫೩)

**ಶ್ರಾವಿಕಾ** – ಶ್ರಾವಕಿ, ಗೃಹಸ್ಥಧರ್ಮಗಳನ್ನು ಪಾಲಿಸುವವಳು (ಮುನಿನಾಥರ್ ಕಲ್ಪಕಾಂತಾಜನತತಿ ಗಣಿನೀಶ್ರಾವಿಕಾಸಂಕುಳಂ ಭಕ್ತಿನಮಜ್ಜ್ಯೋತಿಷ್ಕದೇವೀಪ್ರತತಿ: **ಆದಿಪು,** ೧೦. ೩೬)

**ಶ್ರೀ** – ಜಿನಜನನಿಯನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಆರು ಮಂದಿ ದೇವತೆಗಳಲ್ಲಿ ಒಬ್ಬಳು (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

**ಶ್ರೀನಿಲಯ** – ಸೌಧರ್ಮಕಲ್ಪದ ವಿಮಾನ (ಶ್ರೀವಧೂಚಂಚನತ್ಕಾಂಚನಲೀಲಾಮಂದಿರ ಶ್ರೀನಿಲಯಪೃಥುಲವಕ್ಷಸ್ಥಲಂ ತೀರ್ಥನಾಥಂ: **ಅಜಿತಪು,** ೫. ೯೪)

**ಶ್ರೀನಿಳಯ** – ಶ್ರೀನಿಲಯ (ಸೌಧರ್ಮಕಲ್ಪದ ಶ್ರೀನಿಳಯವಿಮಾನದೊಳ್ ಶ್ರೀಧರದೇವನೆಂಬ ದೇವನಾದಂ: **ನೇಮಿನಾಪು,** ೪. ೮ ವ)

**ಶ್ರೀಪಂಚಮಿ** – ಒಂದು ವ್ರತ (ಯೌವನಂ ನೆಱೆವಿನಂ ಒಂದು ದೆವಸಂ ಶ್ರೀಪಂಚಮಿಯೊಳ್ ಉಪವಾಸನಿರತೆಯಾಗಿ: **ಶಾಂತಿಪು,** ೫. ೧೮ ವ)

**ಶ್ರೀಪತಿ** – ವೃಷಭಸ್ವಾಮಿ (ಶ್ರೀಪತಿ ಸುರದಾರಕರೊಡನಾಪೊತ್ತುಂ ನೆರೆದು ರತ್ನಧೂಳೀಪಟಲವ್ಯಾಪಿತತನು ಮೃದುಮುಗ್ಧಾಳಾಪಂ ಬಳೆದಂ: **ಆದಿಪು,** ೮. ೧)

**ಶ್ರೀಪದ** – ಮೋಕ್ಷ (ಜಿನಂ ಸತ್ಯವಾದಿ ಕಥಾನಾಯಕನಾಗೆ ತಚ್ಚರಿತಮಂ ಪೇೞ್ದಂಗೆ ಕೈಸಾರ್ಗುಂ ಐಹಿಕಂ ಆಮುಷ್ಮಿಕಂ ಆನುಷಂಗಿಕಂ ಎನಲ್ ನಿಶ್ರೇಯಸಶ್ರೀಪದಂ: **ಮಲ್ಲಿನಾಪು,** ೧. ೪೮)

**ಶ್ರೀಪ್ರಭ** – ಆ ಹೆಸರಿನ ವಿಮಾನ (ಇದು ದೇವೇಂದ್ರನಿವಾಸಂ ಎನ್ನ ನೆಲೆಯುಂ ಶ್ರೀ ಶ್ರೀಪ್ರಭಂ ಮುಂದೆ ನಿಂದಿದು ದೇವವ್ರಜಂ: **ಆದಿಪು,** ೨. ೬೭)

**ಶ್ರೀಪ್ರಭವಿಮಾನ** – ಹದಿನಾರುಕಲ್ಪಗಳಲ್ಲಿ ಒಂದು (ವಜ್ರಜಂಘಾರ್ಯರ್ಗಂ ಸುರತಸುಖನಿವಾಸದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬ ದೇವನಾದಂ;; **ಆದಿಪು,** ೫. ೭೦ ವ)

**ಶ್ರುತಕೇವಲಿ** – ಪರೋಕ್ಷಜ್ಞಾನವಾದ ಶ್ರುತಜ್ಞಾನವನ್ನು ಪ್ರತ್ಯಕ್ಷಜ್ಞಾನವಾದ ಆತ್ಮಾನುಭವವನ್ನು ಪಡೆದವನು (ಶ್ರುತಕೇವಲಿ ವಿಷ್ಣುವ್ರತಿಪತಿಚರಣಂ ನಂದಿ ಪರಮಮುನಿಪದಂ ಪರಾಜಿತ ಪಾದಂ ಗೋವರ್ಧನಯತಿ ಕ್ರಮಂ ಭದ್ರಬಾಹು ಚರಣಂ ಶರಣಂ: **ಪಂಪರಾ,** ೧. ೮)

**ಶ್ರುತಕೇವಳಿ** – ಶ್ರುತಕೇವಲಿ, (ಚತುರ್ದಶಪೂರ್ವಧಾರಿಗಳಪ್ಪ ಶ್ರುತಕೇವಳಿಗಳ್ ನಾಲ್ಕನೆಯವರ್ ಗೋವರ್ಧನರೆಂಬ ಭಟ್ಟಾರರುಜ್ಜಯಂತಮಂ ವಂದಿಸಲೆಂದು ವಿಹಾರಿಸುತ್ತುಂ: **ವಡ್ಡಾರಾ,** ಪು. ೭೩, ಸಾ. ೨೬)

**ಶ್ರುತಕೀರ್ತಿ** – ಒಬ್ಬ ಜೈನಮುನಿಯ ಹೆಸರು (ಆರ್ಯನುತಗೃಧ್ರಪಿಂಛಾಚಾರ್ಯ ಜಟಾಚಾರ್ಯ ವಿಶ್ರುತಶ್ರುತಕೀರ್ತ್ಯಾಚಾರ್ಯ ಪುರಸ್ಸರಮಪ್ಪಾಚಾರ್ಯ ಪರಂಪರೆಯೆ ಕುಡುಗೆ ಭವ್ಯೋತ್ಸವಮಂ: **ಆದಿಪು,** ೧. ೧೨)

**ಶ್ರುತಜ್ಞಾನ** – ಓದಿ ಕೇಳಿ ಪಡೆಯುವ ಜ್ಞಾನ (ನೋಂಪಿಯ ವಿಶ್ರುತಶ್ರುತಜ್ಞಾನಮುಮಂ ಯಥೋಚಿತವಿಧಿಯಿಂ ನೋಂತು ಮದೀಯ ಆಯುಷ್ಯಾವಸಾನದೊಳ್ ಈಶಾನಕಲ್ಪದೊಳ್: **ಆದಿಪು,** ೩. ೪೦ ವ); ಅಜ್ಞಾನತ್ರಿತಯಗಳಲ್ಲಿ ಒಂದು (ಮತ್ಯಜ್ಞಾನಂ ಶ್ರುತಜ್ಞಾನಂ ವಿಭಂಗಜ್ಞಾನಮುಮೆಂಬ ಅಜ್ಞಾನತ್ರಿತಯಮುಂ: **ಸುಕುಮಾಚ,** ೮. ೪ ವ)

**ಶ್ರುತಜ್ಞಾನಾವರಣೀಯ** – ಶ್ರುತಜ್ಞಾನವನ್ನು ಆವರಿಸುವ ಕರ್ಮ, ಶ್ರುತಜ್ಞಾನವನ್ನು ಉಂಟುಮಾಡುವ ಕರ್ಮ (ಮತಿಜ್ಞಾನಾವರಣೀಯಂ ಶ್ರುತಜ್ಞಾನಾವರಣೀಯಂ ಅವಧಿಜ್ಞಾನಾವರಣೀಯಂ ಮನಃಪರ್ಯಯಜ್ಞಾನಾವರಣೀಯಂ ಚಕ್ಷುದರ್ಶನಾವರಣೀಯಮಚಕ್ಷುದರ್ಶನಾವರಣಿಯಮವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ... ನವವಿಧಭೇದಮಪ್ಪ ದರ್ಶನಾವರಣೀಯ ಮುಮಂ: **ಸುಕುಮಾಚ,** ೩. ೩೯ ವ)

**ಶ್ರುತಸ್ಕಂಧ** – ತೀರ್ಥಂಕರರ ಉಪದೇಶದಿಂದ ಗಣಧರರು ಬರೆದ ದ್ವಾದಶಾಂಗ ಸೂತ್ರಗಳು: ಇದರಲ್ಲಿ ನಾಲ್ಕು ವಿಭಾಗ: ತ್ರಿಷಷ್ಟಿಶಲಾಕಾಪುರುಷರ ಚರಿತ್ರೆ ಗಳನ್ನೊಳಗೊಂಡ ಮೊದಲ ವಿಭಾಗ [ಪ್ರಥಮಾನುಯೋಗ], ಮೂರುಲೋಕಗಳ ಪ್ರಮಾಣ ಮೊದಲಾದ ವಿವರಗಳಿರುವ ಎರಡನೆಯ ವಿಭಾಗ [ಕರಣಾನುಯೋಗ], ಜೈನಮುನಿಗಳೂ ಶ್ರಾವಕರೂ ಅನುಸರಿಸಬೇಕಾದ ಆಚಾರಗಳ ವಿವರವಿರುವ ಮೂರನೆಯ ವಿಭಾಗ [ಚರಣಾನುಯೋಗ] ಮತ್ತು ಜೀವಾದಿದ್ರವ್ಯಗಳ ವಿವರಣೆಯಿರುವ ನಾಲ್ಕನೆಯ ವಿಭಾಗ [ದ್ರವ್ಯಾನುಯೋಗ] (ಅನುಯೋಗಕುಸುಮ ಪಾದಪಂ ಅನೇಕನಯಲತಿಕ ಮಂಗಳಫಲಮಹೀಜಂ ಸದ್ವನಜವನಮೆಮಗೆ ವಿಶ್ರಮವನಮಕೃತಿವಿಶ್ರುತ ಶ್ರುತಸ್ಕಂಧವನಂ: **ಆದಿಪು,** ೧. ೧೦)

**ಶ್ರೇಢಿ** – ದೇಶಗಳ ಸರಣಿ (ವಿಜಯಾರ್ಧದ ದಕ್ಷಿಣ ಶ್ರೇಢಿಯ ಗಾಂಧಾರ ವಿಷಯದ ಸುಸೀಮಾನಗರಮನಾಳ್ವ: **ಚಾವುಂಪು,** ಪು. ೨೧೩, ಸಾ. ೬)

**ಶ್ರೇಢೀಬದ್ಧ** – ನರಕಬಿಲಗಳಲ್ಲಿ ಒಂದು ಬಗೆ (ಆ ಬಿಲಂಗಳುಂ ಇಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಂಗಳೆಂದು ಮೂಱು ತೆಱನಕ್ಕುಂ: **ಆದಿಪು,** ೫. ೮೩ ವ)

**ಶ್ರೇಣಿಬದ್ಧ** – ಶ್ರೇಢಿಬದ್ಧ (ಆ ನರಕಬಿಲಂಗೆಲ್ಲಮೆಣ್ಬತ್ತುನಾಲ್ಕುಲಕ್ಷ ಪರಿಪ್ರಮಾಣ ಮಾಗಿಯುಮಿಂದ್ರಕಶ್ರೇಣಿಬದ್ಧ ಪ್ರಕೀರ್ಣಕಗಳೆಂದು ಮೂಱುತೆಱನಕ್ಕುಂ: **ಸುಕುಮಾಚ,** ೧೧. ೪೧ ವ)

**ಶ್ರೇಯಾಂಸ** – ಹನ್ನೊಂದನೆಯ ತೀರ್ಥಂಕರ (ವರದಾನೋತ್ತಮನಾದಂ ಆದಿಯುಗದೊಳ್ ಶ್ರೇಯಾಂಸಂ ಈ ಕಾಲದೊಳ್ ನೀನೆ ದಾನಿಯೆ ವಲಂ ಶ್ರೀದಾನಚಿಂತಾಮಣೀ: **ಅಜಿತಪು,** ೧೨. ೭); ಆದಿದೇವನಿಗೆ ಆಹಾರದಾನವಿತ್ತು ಅಕ್ಷಯತೃತೀಯೆಯ ಉದಯಕ್ಕೆ ಕಾರಣನಾದವನು (ಶ್ರೇಯಾಂಸಂ ನಿಜಾಗ್ರಜನಪ್ಪ ಸೋಮಪ್ರಭಂ ಬೆರಸು ಕನಕಕಳಶದೊಳ್ ತೀವಿದಮೃತರಸಸಮಾನ ಧವಳೇಕ್ಷುರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ತಾನೀಕೃತವಿಶಾಲ ಪಾಣಿಪಾತ್ರದೊಳೆಱೆವುದುಂ: **ಆದಿಪು,** ೧೦. ೧ ವ)

**ಶ್ರೇಯೋಗೃಹ** – ಶ್ರೇಯಾಂಸನ ಮನೆ ಮತ್ತು ಶ್ರೇಯಸ್ಸಿನ ಆಗರ (ಪೆರ್ಚಿದ ತನ್ನುತ್ತಮಭಕ್ತಿಯಿಂ ನಿಲಿಪುದುಂ ಶ್ರೇಯೋಗೃಹದ್ವಾರದೊಳ್ ನಿಧಿ ನಿಲ್ವಂತಿರೆ ನಿಂದಂ ಊರ್ಜಿತಗುಣಂ: **ಆದಿಪು,** ೯. ೧೩೩)

**ಶ್ರೋತೃ** – ಹತ್ತು ಗುಣಗಳುಳ್ಳ ಕೇಳುಗ (ಶ್ರೋತೃ ದಶಗುಣಾಧಿಷ್ಠಾನನುಮಕ್ಕುಂ, ಅವಾವುವೆಂದೊಡೆ ಕ್ಷಣವಂತನುಂ ಅನನ್ಯಮನಸ್ಕನುಂ ಅನುಕೂಲಿತನುಂ ಅನಾಲಸ್ಯನುಂ ಶ್ರದ್ಧಾಳುವುಂ ಅವಿಕಾರಿಯುಂ ಲಬ್ಧಿಬಧಿರಸಮನುಂ ಕಳಹಂಸಮನುಂ ಪ್ರವಕ್ತನುಂ ಮಧ್ಯಸ್ಥನುಂ: **ಚಾವುಂಡಜಯ,** ಪು.. ೭)

**ಶ್ವೇತಾಂಬರ** – ಬಿಳಿ ಬಟ್ಟೆಯುಡುವ ಮುನಿಗಳಿಂದ ಕೂಡಿದ ಜೈನಪಂಥ (ಆಂ ಶ್ವೇತಾಂಬರರಂ ಕಂಡು ನೀವಾರೆತ್ತಣಿಂ ಬಂದಿರಿಲ್ಲಿ ಭೇರಿಯಂ ಪೊಯ್ದು ಸಿಂಹಾಸನದೊಳೇಕೆ ಕುಳ್ಳಿರ್ದಿರಿ: **ಧರ್ಮಪ,** ೯. ೪ ವ)

# ಷ

**ಷಂಡಕವೇದ** – ಒಂದು ಬಗೆಯ ನೋಕಷಾಯ (ದೇವರೊಳಾಗಿರ್ಕುಂ ಪುಂಸ್ತ್ರೀವೇದಂ ನಿರಯಜನಿತ ಸಮ್ಮೂರ್ಛಿತರೊಳ್ ಭಾವಿಸೆ ಷಂಡಕವೇದಂ ತಾವುಟಿದವರೊಳ್ ತ್ರಿವೇದಮಂ ಪರಿಭವಿಕುಂ: **ಸುಕುಮಾಚ,** ೮. ೧೩)

**ಷಟ್ಕರ್ಮ** – ನ್ಯಾಯಮಾರ್ಗದ ಸಂಪಾದನೆಗಾಗಿ ಕೈಗೊಳ್ಳಬಹುದಾದ ಆರು ಬಗೆಯ ವೃತ್ತಿಗಳು (ಅಸಿಮಸಿಕೃಷಿವಾಣಿಜ್ಯಶಿಲ್ಪಪಶುಪಾಲ್ಯಮೆಂಬ ಷಟ್ಕರ್ಮಂಗಳೊಳ್ ನ್ಯಾಯದಿನರ್ಥೋಪಾರ್ಜನಂಗೆಯ್ವುದು: **ಸುಕುಮಾಚ,** ೬, ೨೫ ವ)

**ಷಟ್ಕಷಾಯ** – ಹಾಸ್ಯ, ರತಿ, ಶೋಕ, ಭಯ, ಅರತಿ, ಜುಗುಪ್ಸೆ ಎಂಬ ಆರು ದೋಷಗಳು (ಚಿರಂತನ ಷಟ್ಕರ್ಮಂಬೆರಸು ಹಾಸ್ಯ ರತಿ ಶೋಕ ಭಯ ಜುಗುಪ್ಸಾ ಭಿಧಾವ ಷಟ್ಕಷಾಯಮುಮಂ ಕಿಡಿಸಿ: **ಶಾಂತಿಪು,** ೧೧. ೧೧೧ವ)

**ಷಟ್ಖಂಡ** – ಆರು ಭೂಭಾಗಗಳು, ಹಿಮವತ್ಪರ್ವತದ ದಕ್ಷಿಣದಲ್ಲಿ ಲವಣಸಮುದ್ರದ ವರೆಗೂ ವ್ಯಾಪಿಸಿರುವುದು ಭರತಕ್ಷೇತ್ರ, ಇದರ ನಡುವೆ ವಿಜಯಾರ್ಧಪರ್ವತದ ಪೂರ್ವಪಶ್ಚಿಮವಾಗಿ ಹಬ್ಬಿ ಈ ಕ್ಷೇತ್ರವನ್ನು ಉತ್ತರ ಭರತ, ದಕ್ಷಿಣ ಭರತ ಎಂದು ಎರಡಾಗಿ ಒಡೆಯುತ್ತದೆ. ಹಿಮವತ್ಪರ್ವತದಲ್ಲಿ ಹುಟ್ಟಿದ ಮಹಾಸಿಂಧು ಮಹಾಗಂಗಾ ಎಂಬೆರಡು ನದಿಗಳು ಉತ್ತರದಿಂದ ದಕ್ಷಿಣಕ್ಕೆ ಹರಿದು ಲವಣ ಸಮುದ್ರವನ್ನು ಸೇರುತ್ತವೆ, ವಿಜಯಾರ್ಧಪರ್ವತ ಮತ್ತು ಗಂಗಾಸಿಂಧೂ ನದಿಗಳಿಂದ ಭರತಕ್ಷೇತ್ರ ಆರು ಖಂಡಗಳಾಗಿ ಭಾಗವಾಗಿದೆ. ಉತ್ತರ ಭರತಕ್ಷೇತ್ರದ ಮೂರು ಖಂಡಗಳ ನಡುವೆ ಆರ್ಯಖಂಡವಿವೆ, ಈ ಎರಡೂ ಕ್ಷೇತ್ರದ ಖಂಡಗಳು ಕೂಡಿ ಷಟ್ಖಂಡವೆನಿಸಿವೆ (ಮಹಿಭರತಂ ಷಟ್ಖಂಡಾವಹಂ: **ಸುಕುಮಾಚ,** ೧. ೬೮)

**ಷಟ್ತರ್ಕ** – ಬೌದ್ಧ ನೈಯಾಯಿಕ ಸಾಂಖ್ಯ ಜೈನ ವೈಶೇಷಿಕ ಜೈಮಿನೀಯ ಎಂಬ ಆರು ಬಗೆಯ ತರ್ಕ (ನಿಪುಣಂ ಷಟ್ತರ್ಕದೊಳ್ ವ್ಯಾಕರಣದೊಳಧಿಕಂ ಛಂದದೊಳ್ ತಾನಭಿಜ್ಞಂ: **ಧರ್ಮಬಾಹು,** ೧. ೪೬)

**ಷಟ್ತ್ರಿಂಶದ್ಗುಣ** – ಮುನಿಗಳಲ್ಲಿರಬೇಕಾದ ಮೂವತ್ತಾರು ಮೂಲೋತ್ತರಗುಣಗಳು, ದ್ವಾದಶ ತಪಸ್ಸುಗಳು, ದಶಧರ್ಮಗಳು, ಪಂಚಾಚಾರಗಳು, ತ್ರಿಗುಪ್ತಿಗಳು; ಅವುಗಳನ್ನು ಪಡೆದವನು (ನುತ ಷಟ್ತ್ರಿಂಶಸದ್ಗುಣಂಗಳ್ ನೆಱೆಯೆ ನಿರುತಂ ... ನಿಜೆಸುಗೆ ಸದ್ಧರ್ಮದೊಳ್: **ಕರ್ಣನೇಮಿ,** ೧. ೩)

**ಷಡಂತರಂಗತಪ** – ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನಗಳೆಂಬ ಆರು ಅಂತರಂಗದ ತಪಸ್ಸುಗಳು (ಅನಶನ ಅವಮೋದರ್ಯಾದಿ ಷಡ್ವಿಧಬಾಹ್ಯತಪಮುಂ ಪ್ರಾಯಶ್ಚಿತ್ತವಿನಯಾದಿ ಷಡಂತರಂಗತಪಮುಂ ... ತಮ್ಮೊಳುಂ ಸಚ್ಛನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಷಡಾಯತನ ಸೇವೆ** – ಆರು ಬಗೆಯ ಮಿಥ್ಯಾವಸ್ತುಗಳ ಪೂಜೆ (ಮಿಥ್ಯಾದೈವಂ ಮಿಥ್ಯಾಲಯಂ ಮಿಥ್ಯಾತಪಂ ಮಿಥ್ಯಾತಪಸ್ವಿ ಮಿಥ್ಯಾಜ್ಞಾನಿ ಮಿಥ್ಯಾವ್ರತಮೆಂಬೀ ಷಡಾಯತನ ಸೇವೆಯಂ ಗೆಂಟು ಮಾಡುವುದುಂ: **ಧರ್ಮಾಮೃತ,** ೫.೮೩ ವ)

**ಷಡಾವಶ್ಯಕ** – ಮುನಿಗಳು ಪ್ರತಿದಿನ ಆಚರಿಸಬೇಕಾದ ಸಾಮಯಿಕ, ತೀರ್ಥಂಕರಸ್ತವ, ಪಂಚಪರಮೇಷ್ಠಿ ವಂದನ, ಪ್ರತಿಕ್ರಮಣ, ಪ್ರತ್ಯಾಖ್ಯಾನ, ಕಾಯೋತ್ಸರ್ಗ ಎಂಬ ಆರು ಕ್ರಿಯೆಗಳು (ವಿರುದ್ಧಪಂಚಾಸ್ರವನುಂ ಷಡಾವಶ್ಯಕಸಂಯುತನುಂ ಅಪಗತಸಪ್ತಭಯನುಂ ಅಷ್ಟಮದವ್ಯಪೇತನುಂ ... ಚತುರಶೀಲ ಲಕ್ಷಗುಣಭೂಷಣ ನಕ್ಕುಂ: **ಚಾವುಂಡಜಯ,** ಪು. ೬)

**ಷಡಾವಶ್ಯತೆ** – ಷಡಾವಶ್ಯಕ (ಹಿತಸಾಧುಸಮಾಧಿ ವ್ಯಾವೃತಿ ಗುರುವಂದಿತ ಜಿನಪ್ರವಚನ ಷಡಾವಶ್ಯತೆಯೆನಿಸಿ ನೆಗಟ್ದು: **ಶಾಂತಿಪು,** ೯. ೧೧೬)

**ಷಡ್ಜೀವನಿಕಾಯ** – ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ ಅಸೈನೀ, ಪಂಚೇಂದ್ರಿಯ ಸೈನೀ ಎಂಬ ಆರು ಬಗೆಯ ಜೀವಿಗಳು (ಷಡ್ಜೀವನಿಕಾಯ ಜೀವಿದಯೆಯುಂ ... ಪಂಚೇಂದ್ರಿಯ ವಿಷಯವಿಚ್ಛಿತ್ತಿಯುಂ ತನ್ನೊಳುಂ ಸಚ್ಛನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಷಡ್ದ್ರವ್ಯ** – ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಆರು ದ್ರವ್ಯಗಳು; ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಎಂಬಿವು (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಜಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯)

**ಷಡ್ವಿಧ ಜೀವನಿಕಾಯ** – ಆರು ಬಗೆಯ ಜೀವಗಳು (ಪೃಥ್ವೀಕಾಯಕಮಪ್ಪುಕಾಯಕ ತೇಜಸ್ಕಾಯಕ ವಾಯುಕಾಯಕ ವನಸ್ಪತಿಕಾಯಕ ತ್ರಸಕಾಯಕಮೆಂಬ ಷಡ್ವಿಧ ಜೀವನಿಕಾಯಮನೋವುತ್ತುಂ: **ಅಜಿತಪು,** ೭. ೮ ವ)

**ಷಷ್ಠೋಪವಾಸ** – ಆರು ದಿನಗಳ ಕಾಲ ಮಾಡುವ ಉಪವಾಸವ್ರತ (ಇಂತು ಪರಮೇಶ್ವರನತಿಲಲಿತಕಪಿಶ ಕಿಸಲಯಂಗಳಿಂ ವಿದ್ರುಮಮಿರ್ಪಂತಿರ್ದು ಸಪ್ತವರ್ಣದ್ರುಮದ ಮೊದಲೊಳು ಷಷ್ಠೋಪವಾಸದಿಂ: **ಅಜಿತಪು,** ೬. ೧೨೩ ವ)

**ಷಷ್ಠೋಪವಾಸಿ** – ಆರು ದಿನಗಳ ಕಾಲ ಉಪವಾಸವ್ರತ ಮಾಡುವವನು (ಆ ಮುನೀಶ್ವರಂ ಷಷ್ಠೋಪವಾಸಿ ನಿಯಮನಿಯಮಿತನಾಗಿರ್ಪುದುಂ: **ಮಲ್ಲಿನಾಪು,** ೧೬. ೧೯೧

**ಷೋಡಶಕರ್ಮಪ್ರಕೃತಿ** – ಹದಿನಾರು ಕರ್ಮಪ್ರಕೃತಿಗಳು (ನಿದ್ರಾನಿದ್ರಾ ಪ್ರಚಳಾಪ್ರಚಳ ಸ್ತ್ಯಾನಗೃದ್ಧಿನರಕಗತಿತತ್ಪ್ರಾಯೋಗ್ಯಾನುಪೂರ್ವೀ ತಿರ್ಯಗ್ಗತಿ ತತ್ಪ್ರಾಯೋಗ್ಯನು ಪೂರ್ವ್ಯೇಂದ್ರಿಯಜಾತ್ಯಾತಪೋದ್ಯೋತ ಸ್ಥಾವರಸಾಧಾರಣ ಸೂಕ್ಷ್ಮದಾನಗಳೆಂಬ ಷೋಡಶಕರ್ಮಪ್ರಕೃತಿಗೆ ವಿಳಯಂ ಮಾಡಿ: **ಶಾಂತಿಪು,** ೧೧. ೧೧೧ ವ)

**ಷೋಡಶಕಲ್ಪ** – ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು (ಷೋಡಶಕಲ್ಪದೊಳ್ ... ಇಂದ್ರನಾದನಾ ಯೋಗೀಂದ್ರಂ: **ಆಚವರ್ಧ,** ೧೩. ೨೭)

**ಷೋಡಶತೀರ್ಥಕರಭಾವನೆ** – ತೀರ್ಥಂಕರನಾಗಲು ಕಾರಣವಾಗುವ ಹದಿನಾರು ಮನೋವೃತ್ತಿಗಳು (ಪರಮಜಿನಪತಿ ಪರಿಭಾಷಿತಮಪ್ಪ ಸಕಳಶ್ರಾವಕವ್ರತಂಗಳಂ ಷೋಡಶ ತೀರ್ಥಕರಭಾವನೆಗಳಂ ಚತುಸ್ತ್ರಿಂಶತ್ ಅತಿಶಯಂಗಳುಮಂ ಅಷ್ಟಮಹಾ ಪ್ರಾತಿಹಾರ್ಯಂಗಳುಮಂ: **ಆದಿಪು,** ३. ೪೦ ವ), ನೋಡಿ, **'ಷೋಡಶಭಾವನೆ'**

**ಷೋಡಶಪ್ರಕೃತಿ** – ಹದಿನಾರು ಕರ್ಮಪ್ರಕೃತಿಗಳು: ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿ ಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ (ನಿಜಗುಣಸ್ಥಾನಪ್ರಥಮಾದಿ ನವಭಾಗೆಗಳೊಳತಿರೂಢ ಷೋಡಶಪ್ರಕೃತ್ಯಾದಿಗಳಂ ನಿರ್ಭೇದಿಸಿದನ್: **ಪಾರ್ಶ್ವನಾಪು,** ೧೫. ೧೪೬ ವ)

**ಷೋಡಶಭಾವನೆ** – ತೀರ್ಥಂಕರನಾಗಲು ಕಾರಣವಾಗುವ ದರ್ಶನವಿಶುದ್ಧಿ, ವಿನಯಸಂಪನ್ನತೆ, ಅನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಉಪಾಧ್ಯಾಯಭಕ್ತಿ, ಪ್ರವಚನಭಕ್ತಿ, ಅವಶ್ಯಕಾಪರಿಹಾರಿಣಿ, ಮಾರ್ಗಪ್ರಭಾವನೆ, ಪ್ರವಚನವತ್ಸಲತ್ವ – ಎಂಬ ಹದಿನಾರು ಮನೋವೃತ್ತಿಗಳು (ತ್ರೈಲೋಕ್ಯಕ್ಷೋಭ ಕಾರಣ ತೀರ್ಥಕರಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ: **ಆದಿಪು,** ೬. ೩೩ ವ)

**ಷೋಡಶಸ್ವಪ್ನ** – ಗರ್ಭಧಾರಣೆಯ ಕಾಲದಲ್ಲಿ ಜಿನಮಾತೆಯು ಕನಸಿನಲ್ಲಿ ಕಾಣುವ ಐರಾವತ, ಬಿಳಿಯ ಹೋರಿ, ಸಿಂಹ, ಲಕ್ಷ್ಮಿ, ಹೂಹಾರ, ಚಂದ್ರ, ಬಾಲಸೂರ್ಯ, ಎರಡೆಳೆಯ ಮೀನು, ಜೋಡಿ ರತ್ನಕುಂಭ, ತಾವರೆಕೊಳ, ಸಮುದ್ರ, ಸಿಂಹಾಸನ, ದೇವವಿಮಾನ, ಫಣಿಗೇಹ, ರತ್ನಸಮೂಹ, ಉಜ್ವಲಜ್ವಾಲೆ (ಬೆಳಗಪ್ಪ ಜಾವದಾಗಳ್ ಉದ್ದಾಮ ಸಾಮಜವೃಷಾದಿ ಷೋಡಶ ಶುಭಸ್ವಪ್ನಂಗಳಂ ಕಂಡು: **ಕರ್ಣನೇಮಿ,** ೮. ೯೯ ವ)

# ಸ

**ಸಂಕಲ್ಪಹಿಂಸೆ** – ಹಿಂಸೆಗೆ ಮಾನಸಿಕ ಒಪ್ಪಿಗೆ (ಸಂಕಲ್ಪಹಿಂಸೆಯೊಂದಱೊಳಾಂ ಕಂಡೆಂ ಭವದ ದುಃಖಮುಂಡೆಂ: **ಯಶೋಧಚ,** ೪. ೭೦)

**ಸಂಕ್ಲಿಷ್ಟಾಸುರೋದೀರಿತ** – ಐದು ಬಗೆಯ ದುಃಖಗಳಲ್ಲಿ ಒಂದು, ರಾಕ್ಷಸರಿಂದ ಉಂಟಾಗುವ ಭಯ (ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಗಳೆಂಬ ಪಂಚಪ್ರಕಾರ ದುಃಖಂಗಳಂ: **ಸುಕುಮಾಚ,** ೧೧. ೪೭ ವ)

**ಸಂಕ್ಷೇಪರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಸಂಕ್ಷೇಪರುಚಿಯೆಂಬುದು ಜೀವಾದಿ ಪದಾರ್ಥದ ಸಂಕ್ಷೇಪಸಂಬೋಧನದೊಳಪ್ಪ ಶ್ರದ್ಧಾನಂ: **ಚಾವುಂಡಜಯ,** ಪು. ೩೩೭)

**ಸಂಗಾಣಿ** – ಸಪ್ತಪದಾರ್ಥಗಳ ಸ್ವರೂಪ ನಿರೂಪಣ ಗ್ರಂಥ (ಪ್ರತ್ಯಕ್ಷಂ ಅನುಮಾನಂ ಆಗಮಂ ಎಂಬ ಮೂಱು ತೆಱದೊಳ್ ಆಗಮಸಿದ್ಧಮಪ್ಪ ಸಂಗಾಣಿವಿಭಾಗಂಗಳ್ ಪ್ರತ್ಯಕ್ಷಮಾದೊಡೆ: **ಹರಿವಂಶ,** ೨. ೫೪ ವ)

**ಸಂಗ್ರಹ** – ಸಪ್ತನಯಗಳಲ್ಲಿ ಒಂದು, ಎಲ್ಲ ಪರ್ಯಾಯ ಮತ್ತು ವಿಶೇಷಗಳನ್ನು ಅವಿರೋಧವಾಗಿ ಗ್ರಹಿಸುವುದು (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದಸಮಭಿರೂಢೈವಂಭೂತಾದಿ ನಯವಿಭೇದದಿಂ: **ಸುಕುಮಾಚ,** ೩. ೩೯ ವ)

**ಸಂಜ್ಞಾತತ್ವ** – ಏಳು ಬಗೆಯ ಅನ್ವಯಕ್ರಿಯೆಗಳಲ್ಲಿ ಒಂದು (ನಾಲ್ವತ್ತೆಂಟು ದೀಕ್ಷಾನ್ವಯ ಕ್ರಿಯೆಗಳುಮಂ ಸಂಜ್ಞಾತತ್ವಂ ಮೊದಲಾಗೇಟನ್ವಯ ಕ್ರಿಯೆಗಳುಮನಱಿಪಿ: **ಅಜಿತಪು,** ೧೨. ೧ ವ)

**ಸಂಜ್ಞಾನಪಂಚಕ** – ಮತಿ, ಶ್ರುತ, ಅವಧಿ, ಮನಃಪರ್ಯಾಯ, ಕೇವಲ ಎಂಬ ಐದು ಬಗೆಯ ಜ್ಞಾನಗಳು (ಅಭಿಭೋಧಕಜ್ಞಾನಮುಂ ... ಶ್ರುತಜ್ಞಾನಮುಂ ... ಸರ್ವಾವಧಿಜ್ಞಾನಮುಂ ... ಮನಃಪರ್ಯಯಜ್ಞಾನಮುಂ ... ಕೇವಲಜ್ಞಾನಮುಂ ಎಂಬೀ ಸಂಜ್ಞಾನಪಂಚಕಮುಂ: **ಸುಕುಮಾಚ,** ೮. ೪ ವ)

**ಸಂತಾನರೂಪ** – ಅನುಭವಕ್ಕೆ ಬಾರದ ಕ್ಷಣಗಳ ಸಮೂಹ (ವಿಪ್ರಲಬ್ಧವೃದ್ಧಿಗೆ ಸಂತಾನರೂಪದಿಂ ಪುಟ್ಟುತ್ತಿರ್ದ ವಿಜ್ಞಾನಲಕ್ಷಣಂಗಳ್ ಆತ್ಮಾಭಿಧಾನಮಂ ಪುಟ್ಟಿಸುಗುಂ: **ಆದಿಪು,** ೨. ೯ ವ)

**ಸಂತಾನಾಂತರ** – ಒಂದಾದ ನಂತರ ಮತ್ತೊಂದು ಹುಟ್ಟುವುದರಲ್ಲಿರುವ ಭೇದ (?) (ಅನುಮಾನದಿಂ ಸಂತಾನಾಂತರಮಂ ಸಾಧಿಸುವೆನೆಂಬೆಯಪ್ಪೊಡೆ ಬಹಿರರ್ಥ ಸಿದ್ಧಿಯಕ್ಕುಂ: **ಆದಿಪು,** ೨. ೧೦ ವ)

**ಸಂಧಿ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು ಗುಣ, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ; ಸಂಧಿ ಎಂದರೆ ಯುದ್ಧಸಿದ್ಧವಾದ ಎರಡು ಸೈನ್ಯಗಳ ನಡುವೆ ಹಿತಾಭಿಪ್ರಾಯವುಂಟು ಮಾಡಿ ಒಂದುಗೂಡಿಸುವುದು (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಬ್ಪುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೇಬ್ಪುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹದ್ವಯಾವಸ್ಥಾನಂ ದ್ವೈಧೀಭಾವನಕ್ಕುಂ: **ಚಾವುಂಡಜಯ,** ಪು, ೨೫೭)

**ಸಂನ್ಯಸನ** – ಕಷಾಯಗಳು ಹಾಗೂ ಆಚಾರವನ್ನು ಕಡಿಮೆಮಾಡಿ ಪಂಚಪರಮೇಷ್ಠಿ ಧ್ಯಾನದಲ್ಲಿ ತತ್ಪರನಾಗಿ ಪ್ರಾಣತ್ಯಾಗಮಾಡುವ ಒಂದು ಬಗೆಯ ನೇಮ (ಈ ಪ್ರದೇಶಮೊಳ್ಳಿತ್ತು ಸಮನಿಸಿತ್ತು ನೋಂತುಂ ಪಸಿದುಮಂತ್ಯದೊಳ್ ಸಂನ್ಯಸನದಿಂ ಪರತ್ರೆಯಂ ಸಾಧಿಸುವೆನೆಂದು ಪರಮಾಗಮ ಭಾವನೆಯಿಂದಿರ್ಪನ್ನೆಗಂ: **ಪಂಪರಾ,** ೧೫. ೭೯ ವ)

**ಸಂನ್ಯಸನವಿಧಿ** – ಸಂನ್ಯಸನವ್ರತ (ವಸುಧರೀಕಂತಿಯರುಂ ಸಮಾಧಿಗೂಡೆ ಸಂನ್ಯಸನ ವಿಧಿಯಿಂ ಅಸುವಂ ವಿಸರ್ಜಿಸಿ: **ಕರ್ಣನೇಮಿ,** ೧೪. ೧೫ ವ)

**ಸಂಭಿನ್ನವಿದ್ಯೆ** – ಒಂದು ಬಗೆಯ ವಿದ್ಯೆ (ಪವಮಾನಸುತಂ ಸಂಭಿನ್ನವಿದ್ಯೆಯಿಂ ಮಾಡಿ ಪೊಟಿಲಂ ಆಗಸದೊಳ್ ತನ್ನ ವರೂಥಿನಿಯೆಲ್ಲಮನಿರಿಸಿ: **ಪಂಪರಾ,** ೧೧. ೭೩)

**ಸಂಯಮ** – ಶ್ರಾವಕರ ಆರ್ಯಷಟ್ಕರ್ಮಗಳಲ್ಲಿ ಒಂದು, ವ್ರತ–ಸಮಿತಿಗಳ ಧಾರಣೆ ಮತ್ತು ಅನುಪಾಲನೆ, ಕಷಾಯ, ದಂಡ, ಇಂದ್ರಿಯನಿಗ್ರಹ, ತ್ಯಾಗ, ಜಯ ಇವು ಒಟ್ಟಾಗಿ ಸಂಯಮ, ಅಣುವ್ರತಪಾಲನೆ ಮುಂತಾದವುಗಳಿಂದ ಸಾಧಿಸುವ ಸಂಯಮ (ಪಂಚಾಣುವ್ರತಾದಿಪ್ರವರ್ತನಸ್ವಭಾವಸಂಯಮಮುಂ: **ಆದಿಪು,** ೧೫. ೧೩ ವ); ಹತ್ತು ಕುಲಧರ್ಮಗಳಲ್ಲಿ ಒಂದು, (ಎಂಬಿನಮುತ್ತಮಕ್ಷಮಾ ಮಾರ್ದವಾರ್ಜವ ಸತ್ಯಶೌಚ ಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯ ಪರ್ಯಾಯ ಪರ್ಯಾಪ್ತ ದಶಧರ್ಮ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ)

**ಸಂಯಮಮಂತ್ರ** – ಮಂತ್ರಗಳಲ್ಲಿನ ಐದು ಬಗೆಗಳಲ್ಲಿ ಒಂದು, ಸಕಲನಿವೃತ್ತಿಗೆ ಕಾರಣವಾಗುವುದು (ಕ್ರಿಯಾಮಂತ್ರಂ ಸಪ್ತಪರಮ ಸ್ಥಾನಾರ್ಹಂತ್ಯಮುಂ ಮಾಬ್ಕುಂ; ಅಗ್ನಿಹೋತ್ರಮಂತ್ರಂ ಸಿದ್ಧಸೇವೆಗೆ ಹೇತು; ಯಜ್ಞಮಂತ್ರ ಪರಮೇಷ್ಠಿಸೇವಗೆ ಹೇತು; ಸಂಯಮ ಮಂತ್ರ ಸಕಲ ನಿವೃತ್ತಿಗೆ ಹೇತು, ಕರ್ಣಜಾಪ್ಯಮಂತ್ರಂ ಶಿವಗತಿಗೆ ಕಾರಣಂ, ಇವಯ್ದು ನಿರವದ್ಯ ಮಂತ್ರಂಗಳ್: **ಚಾವುಂಡಜಯ,** ಪು. ೧೮೮)

**ಸಂರಕ್ಷಣಾನಂದ** – ನಾಲ್ಕು ಬಗೆಯ ರೌದ್ರಧ್ಯಾನದಲ್ಲಿ ನಾಲ್ಕನೆಯದು, ಆದಷ್ಟೂ ಪಡೆಯಬೇಕೆಂದು ತಾನು ಇದಕ್ಕೆ ಒಡೆಯ ಎಂಬ ಆಗ್ರಹದಿಂದ ಅದನ್ನು ಬಯಸುವವರಿಗೆ ಪೀಡೆಯನ್ನು ಮಾಡುವುದು (ಚೇತನಾಚೇತನಲಕ್ಷಣಮಪ್ಪ ಸ್ವಪರಿಗ್ರಹದೊಳಾನಿದರ್ಕೊಡೆಯನೇನಿನ್ನೊಡಮೆ ಎಂಬಾಗ್ರದಿಂ ಕೊಳ್ವರ್ಗೆ ಪೀಡೆಯಂ ಮಾಡಲೆಂದು ಕಾಪಿನೊಳಪ್ಪ ಸಂಕಲ್ಪಾಧ್ಯಸಾನಂ ಸಂರಕ್ಷಣಾನಂದ ಮೆಂಬ ಚತುರ್ಥ ರೌದ್ರಂ: **ಚಾವುಂಡಪು,** ಪು, ೩೮೫)

**ಸಂವತ್ಸರ** – ಎರಡು ಅಯನ ಅಥವಾ ಆರು ಋತುಗಳು ಅಥವಾ ಹನ್ನೆರಡು ಮಾಸಗಳ ಅವಧಿ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬. ೬೮ ವ)

**ಸಂವರೆ** – ಒಳಿತು ಕೆಟ್ಟುದೆಂಬ ಪರಿಣಾಮರೂಪವಾಗಿ ಬರುವ ಕರ್ಮಗಳಿಗೆ ಗುಪ್ತಿ ಮುಂತಾದುವುಗಳಿಂದ ತಡೆಯೊಡ್ಡುವುದು (ಶುಭಾಶುಭಪರಿಣಾಮ ಪ್ರಣಾಳಿಕೆಯಿಂ ಬರ್ಪ ಕರ್ಮವಮಂ ಬರಲೀಯುದೆ ಗುಪ್ತ್ಯಾದಿಗಳಿಂ ತಗುಳ್ವುದು ಸಂವರೆಯೆಂಬುದು: **ಆದಿಪು,** ೧೦. ೬೩ ವ)

**ಸಂವೇಗ** – ಷೋಡಶಭಾವನೆಗಳಲ್ಲಿ ಒಂದು, ಸಂಸಾರದುಃಖಕ್ಕೆ ನಿರಂತರವಾಗಿ ಭೀತಸ್ವರೂಪ ಹೊಂದಿರುವುದು (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಸಂವೇದನಿ** – ಆಕ್ಷೇಪಣಿ, ವಿಪೇಕ್ಷಣಿ, ಸಂವೇದನಿ, ನಿರ್ವೇದನಿ ಎಂಬ ನಾಲ್ಕು ಬಗೆಯ ತತ್ವನಿರೂಪಣೆಯ ಕತೆಗಳು: ಜೈನಧರ್ಮದ ಶ್ರೇಷ್ಠತೆಯನ್ನು ಸಾರುವ ಧರ್ಮಕಥೆ (ಜಿನಧರ್ಮಫಲ ವಿಭೂತಿಯಂ ಪೇೞ್ವುದು ಸಂವೇದನಿಯೆಂಬುದು: **ಚಾವುಂಡಜಯ,** ಪು. ೩೨೬)

**ಸಂಶಯ** – ಜೈನತತ್ವಗಳ ಬಗೆಗಿನ ಶಂಕೆ (ಸಂಶಯ ವಿಪರ್ಯಯ ಸಾವದ್ಯ ಅನವದ್ಯ ಅವಸಾಯು ಸ್ವಭಾವರಹಿತವಾಗಿ ಜೀವಾದಿಪದಾರ್ಥ ಯಥಾತ್ಮ್ಯಾವಗಮಂ ಸಮ್ಯಕ್‌ಜ್ಞಾನಂ: **ಆದಿಪು,** ೧೦. ೬೩ ವ)

**ಸಂಶ್ರಯ** – ನಯಶಾಸ್ತ್ರದ ಆರು ವಿಭಾಗಗಳಲ್ಲಿ ಒಂದು ಗುಣ, ಇದರಲ್ಲಿ ಸಂಧಿ ವಿಗ್ರಹ ಆಸನ ಯಾನ ಸಂಶ್ರಯ ಮತ್ತು ದ್ವೈಧೀಭಾವಗಳೆಂದು ಆರು ಬಗೆ: ಸ್ವಂತ ಬಲವಿಲ್ಲದೆ ಶತ್ರುವನ್ನು ಗೆಲ್ಲಬಲ್ಲವರನ್ನು ಆಶ್ರಯಿಸುವುದು ಸಂಶ್ರಯ (ಗುಣಮೆಂಬುದು ಸಂಧಿ ವಿಗ್ರಹಾಸನ ಯಾನ ಸಂಶ್ರಯ ದ್ವೈಧೀಭಾವಮೆಂದು

ಷಡ್ವಿಧಮಕ್ಕುಂ: ಅಲ್ಲಿ ಬಲಮೆರಡುಂ ವಿಗ್ರಹಾವಳಂಬಿಗಳಾಗಿರೆ ಪರಸ್ಪರ ಹಿತಾಭಿಪ್ರಾಯದಿನೊಂದು ಮಾಬ್ಬುದು ಸಂಧಿ, ತದ್ವಿಪರೀತಂ ವಿಗ್ರಹಂ, ಉಪೇಕ್ಷಿಸಿರ್ಪುದಾಸನಂ, ಮೇಲೇಬ್ಬುದು ಯಾನಂ, ಪರೋಪಗಮನಂ ಸಂಶ್ರಯಂ, ಸಂಧಿವಿಗ್ರಹದ್ವಯಾವಸ್ಥಾನಂ ದ್ವೈಧೀಭಾವನಕ್ಕುಂ: **ಚಾವುಂಡಜಯ,** ಪು, ೨೫೭)

**ಸಂಸಾರ** – ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ ಎಂಬ ಬಗೆಗಳು (ಆ ರೌದ್ರಹತಿಗೆ ತವೆ ಸಂಸಾರಂ ತತ್ಪುರದ ಪೊಱಗೆ ಪುಟ್ಟಿದುವು: **ಯಶೋಧಚ,** ೩. ೭೬)

**ಸಂಸಾರಕ್ಷಪಕ** – ಸಂಸಾರವನ್ನು ಪರಿತ್ಯಜಿಸಿದವನು (ಆಯುರವಸಾನದೊಳೆ ಸಂಸಾರಕ್ಷಪಕನಾಗಿ ಸಮಾಧಾನ ಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತಂ: **ಆದಿಪು,** ೨. ೧೯ ವ)

**ಸಂಸಾರಿಜೀವ** – ಜೀವತತ್ವದ ಸಂಸಾರಿ ಮುಕ್ತ ಎಂಬ ಎರಡು ಬಗೆಗಳಲ್ಲಿ ಒಂದು (ಸಂಸಾರಿಜೀವಂ ತ್ರಸ ಸ್ಥಾವರ ವಿಕಲ್ಪದಿಂ ಇರ್ತೆಱನಕ್ಕುಂ: **ಆದಿಪು.** ೧೦. ೬೩ ವ)

**ಸಂಸ್ಥಾನವಿಚಯ** – ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು, ಜೀವಾದಿತತ್ವಗಳೊಡಗೂಡಿದ ಲೋಕದ ಸ್ವರೂಪ, ರಚನೆ ಮತ್ತು ಅಲ್ಲಿನ ಜೀವಿಗಳ ಸ್ಥಿತಿ – ಇವುಗಳ ಚಿಂತನೆ, ಲೋಕಾಕಾರ ಚಿಂತನೆ (ಆಜ್ಞಾವಿಚಯಮಪಾಕವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕು ಧರ್ಮಧ್ಯಾನಂಗಳಂ ಧ್ಯಾನಿಸುತ್ತುಂ: **ವಡ್ಡಾರಾ,** ಪು. ೧೫೪, ಸಾ. ೯)

**ಸಂಹನನ** – ಭೋಗಭೂಮಿಜರ ಶರೀರವು ಮೊದಲನೆಯ ಸಂಹನನದ್ದು; ಅಂದರೆ ಅವರ ಶರೀರದೊಳಗಿನ ಎಲುಬು, ಸ್ನಾಯು, ಸಂದುಗಳು ವಜ್ರದಂತೆ ಗಟ್ಟಿಮುಟ್ಟಾಗುತ್ತವೆ (ಆತಂ ಕಾರಣಪುರುಷನಪ್ಪ ಕಾರಣದಿಂ ಸಹಜ ಘನಸಂಹನನನಾಗಿ ಸಾಮಾನ್ಯ ಶಿಶುವಿನಂತೆ ಕಲಲಚ್ಛಾಯನಾಗದೆ: **ನೇಮಿನಾಪು,** ೭. ೪೪ ವ)

**ಸಕಲಭಾಷಾತ್ಮಕ** – ತೀರ್ಥಂಕರನ ಮಾತುಗಳು ಮೂಲತಃ ಅರ್ಧಮಾಗಧಿಯಲ್ಲಿದ್ದರೂ ಸಂಸ್ಕೃತ ಹಾಗೂ ಇತರ ದೇಶಭಾಷೆಗಳ ಜನರಿಗೆ ಅವರವರ ಭಾಷೆಯಲ್ಲಿಯೇ ಕೇಳುವಂತೆ ಇರುವುದು (ದೇವಭಾಷಾದಿ ಸಕಲದೇಶಭಾಷಾತ್ಮಕಮಪ್ಪುದಱಿನರ್ಧ ಮಾಗಧಿಯೊಳ್ ನಿಲ್ಲದೆಯುಂ: **ಅನಂತಪು,** ೧೦, ೫೧ ವ)

**ಸಕಳಚಕ್ರವರ್ತಿ** – ಆರು ಖಂಡಗಳಿಗೆ ಅಧಿಪತಿಯಾದವನು (ಅಂತುರ್ವರಾಸ್ಯತಿಲಕನಪ್ಪ ಸಕಳಚಕ್ರವರ್ತಿ ಸಕಳಸಾಮ್ರಾಜ್ಯಶ್ರೀಯಂ ಪಿರಿದುಮಾಶ್ಚರ್ಯದಿಂದಂ: **ಶಾಂತಿಪು,** ೧೧. ೮೪ ವ)

**ಸಕಳದತ್ತಿ** – ದತ್ತಿ ಎಂಬುದು ಆರ್ಯಷಟ್ಕರ್ಮಗಳಲ್ಲಿ ಒಂದು; ಯೋಗ್ಯನಾದ ತನ್ನ ಮಗನಿಗೆ ಅಥವಾ ಅವನು ಇಲ್ಲದಿದ್ದರೆ ಯೋಗ್ಯನಾದ ಅಣ್ಣತಮ್ಮಂದಿರಲ್ಲಿ ಒಬ್ಬನಿಗೆ ತನ್ನ ವಂಶದ ಪರಂಪರೆ ಮತ್ತು ಧರ್ಮವು ನಡೆಯಬೇಕೆಂದು ತನ್ನ ಸರ್ವಸ್ವವನ್ನೂ ನೀಡುವುದು ಸಕಳದತ್ತಿ (ನಿಜಾನ್ವಯೋದ್ಧರಣ ಸಮರ್ಥನಪ್ಪ

ಅಗ್ರತನೂಭವಂಗೆ ಆತ್ಮೀಯ ಧರ್ಮ ಧನ ಬಂಧುಗಳಂ ಸಮರ್ಪಿಸಿ ಸಕಳದತ್ತಿಯುಂಬೆರಸು: **ಆದಿಪು,** ೧೫. ೧೩ ವ); (ತನ್ನ ಸಂತತಿಯಂ ನಿಜೆಸಲ್ವೇಡಿ ಮಗಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಧನಮನಪ್ಪಯಿಸಿ ಕುಡುವುದು ಅನ್ವಯದತ್ತಿಯುಮದು: **ಚಾವುಂಡಜಯ,** ಪು, ೧೭೯)

**ಸಕಾಮನಿರ್ಜರೆ** – ಕರ್ಮ ತಕ್ಕ ಕಾಲ ಬಂದಾಗ ಪರಿಪಕ್ವವಾಗಿ ಅನುಭವಿಸಿದ ಬಳಿಕ ತಾನಾಗಿಯೇ ಸಹಜವಾಗಿ ಕಳಚಿ ಬೀಳುತ್ತದೆ; ಹೀಗೆ ಕರ್ಮ ಸಹಜವಾಗಿ ಕಳಚಿಬೀಳುವುದು (ಮತ್ತೆ ಸಕಾಮನಿರ್ಜರೆಯೆಂದಕಾಮನಿರ್ಜರೆಯು ಮೆಂದುಮೆರಳ್ತೆಜಿನಕ್ಕುಂ: **ಧರ್ಮಬಾಹು,** ೧೬, ೨೯೫ ವ)

**ಸಚಿತ್ತವಿರತ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಐದನೆಯ ವರ್ಗಕ್ಕೆ ಸೇರಿದವನು (ಕುಸುಮಫಳ ಕಂದ ಮೂಲಪ್ರಸರಂಗಳನಗ್ನಿಪಕ್ವಮಲ್ಲದುವನಪೇಕ್ಷಿಸಿ ಕೊಳ್ಳದನಯ್ದನೆಯಂ ಪೆಸರಿಂದಾತಂ ಸಚಿತ್ತವಿರತನೆನಿಕ್ಕಂ: **ಸುಕುಮಾಚ,** ೬. ೩೦); (ಪೞಗಣವು ಸಹಿತಮೊಳ್ಪಂ ಮಱಯದೆ ದಯೆವೆರಸು ಪಸಿಯವಸ್ತುಗಳಂ ತಾಂ ಮಱದುಂ ಕೊಳಲೊಲ್ಲದವಂ ಪೞತೇಂ ಸಚ್ಚಿತ್ತನೆಂಬಯ್ದನೆಯಾತಂ: **ಧರ್ಮಾಮೃತ,** ೫. ೯೩)

**ಸಜ್ಜಾತಿ** – ಸತ್ಕುಲದಲ್ಲಿ ಹುಟ್ಟುವ ಪರಿಶುದ್ಧ ಜನ್ಮ (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ)

**ಸಜ್ಜಾತಿಕ್ರಿಯೆ** – ಸಜ್ಜಾತಿ (ವಿಶುದ್ಧಕುಳಜಾತಿಯೊಳಮುದಿತೋದಿತ ವಂಶದೊಳಂ ಪುಟ್ಟುವುದಂ ದೇಹಾದಿ ಸಾಮಗ್ರಿಯನುಳ್ಳುದು ಸಜ್ಜಾತಿಕ್ರಿಯೆ: **ಚಾವುಂಡಜಯ,** ಪು. ೧೯೧)

**ಸಜ್ಜಾತಿತ್ವ** – ಸಜ್ಜಾತಿ, ಏಳು ಪರಮಸ್ಥಾನಗಳಲ್ಲಿ ಒಂದು (ಸಜ್ಜಾತಿತ್ವಮೆಂಬುದು ದೀಕ್ಷಾಯಗ್ಯಮಪ್ಪನ್ವಯದೊಳಂ ವಿಶುದ್ಧಕುಳಜಾತಿಯೊಳಮುದಿತೋದಿತ ವಂಶದೊಳಂ ಪುಟ್ಟುವುದಂ; **ಚಾವುಂಡಜಯ,** ಪು. ೧೯೧)

**ಸತ್ಪ್ರಣೀತ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು, ದೋಷರಹಿತರಿಂದ ಪ್ರಣೀತವಾದುದು (ಸತ್ಪ್ರಣೀತಮೆಂಬುದು ಭಯರಾಗಾದಿ ದೋಷರಹಿತರಿಂ ಪ್ರಣೀತಮಪ್ಪ ಧರ್ಮಂ: **ಚಾವುಂಡಜಯ,** ಪು.. ೮)

**ಸತ್ಯ** – ಹತ್ತು ಕುಲಧರ್ಮಗಳಲ್ಲಿ ಒಂದು, ಸತ್ಯವನ್ನು ಪಾಲಿಸುವುದು (ಎಂಬಿನಮುತ್ತಮಕ್ಷಮಾ ಮಾರ್ದವಾರ್ಜವ ಸತ್ಯ ಶೌಚ ಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳುಮಂ ಕೈಕೊಂಡು: **ಆದಿಪು,** ೬. ೩೦ ವ); ಯೋಗಿಗೆ ಲಭಿಸುವ ಒಂಬತ್ತು ಬಗೆಯ ಸತ್ಯಗಳು (ನಾಮಸತ್ಯಂ ರೂಪಸತ್ಯಂ ಪ್ರತೀರಿಸತ್ಯಂ ಸಂಯೋಜನಸತ್ಯಂ ಜನಪದಸತ್ಯಂ ದೇವಸತ್ಯಂ ಭಾವಸತ್ಯಂ ಸಮಯಸತ್ಯಮುಮೆಂಬೊಂಬತ್ತು ಸತ್ಯದೊಳಂ: **ಅಜಿತಪು,** ೭. ೮ ವ)

**ಸದಾದಿ** – ಸ್ಯಾದ್ವಾದ, ಪದಾರ್ಥದ ಪೂರ್ಣಜ್ಞಾನವನ್ನು ತಿಳಿಯಲೋಸುಗ ಒಂದು ಗುಣವನ್ನು ಪ್ರಧಾನವಾಗಿರಿಸಿಕೊಂಡು ಇತರ ಗುಣಗಳನ್ನು ಗೌಣವಾಗಿಸಿ ಪರೀಕ್ಷಿಸುವುದು, ಅನಂತರ ಇನ್ನೊಂದು – ಹೀಗೆ ಭಾಗಶಃ ಪರೀಕ್ಷಿಸುತ್ತ ಅದನ್ನು ಸಮಗ್ರವಾಗಿ ತಿಳಿದುಕೊಳ್ಳುವುದು (ಪ್ರಮಾಣ ನಯ ನಿಕ್ಷೇಪ ಅನುಯೋಗ ಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವಂ: **ಆದಿಪು,** ೧೦. ೬೩ ವ)

**ಸದ್ಗೃಹತ್ವ** – ಏಳರಲ್ಲಿ ಒಂದು ಬಗೆಯ ಪರಮಸ್ಥಾನ, ಇಷ್ಟವಾದುದನ್ನು ತೊರೆದು ಆತ್ಮಶುದ್ಧಿಮಾಡಿಕೊಳ್ಳುವುದು (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮಂ: **ಆದಿಪು,** ೧೫. ೧೬ ವ)

**ಸದ್ಧರ್ಮ** – ಶ್ರೇಷ್ಠ ಧರ್ಮ (ದೋಷಪ್ರಕರರಹಿತನೆನಿಪಂ ಆಪ್ತಂ ತತ್ ಆನನ ಪ್ರೋದ್ಭೂತಂ ಸಿದ್ಧಾಂತಮಾರ್ಗಂ ತದುವಿರಚನೆ ಸದ್ಧರ್ಮಂ; **ಸುಕುಮಾಚ,** ೫. ೩೯)

**ಸದ್ಭವ್ಯ** – ಒಳ್ಳೆಯ ಧಾರ್ಮಿಕ ವ್ಯಕ್ತಿ (ಭಾಸುರ ಸುರನರ ಸದ್ಭವ್ಯಸೇವ್ಯಂ ... ರಕ್ಷಿಸ್ಸೆ ಶಾಂತೀಶನೆಮ್ಮಂ: **ಶಾಂತಿಪು,** ೧. ೧)

**ಸದ್ವೇದ್ಯ** – ಇಂದ್ರಿಯ ಸುಖವನ್ನು ಉಂಟುಮಾಡುವುದು (ಕ್ಷಮೆಯುಂ ... ಸದ್ವೇದ್ಯದಾಸ್ರವಂ ತಾನಕ್ಕುಂ: **ಸುಕುಮಾಚ,** ೮. ೧೭)

**ಸನತ್ಕುಮಾರ** – ಹದಿನಾರು ಸ್ವರ್ಗಗಳಲ್ಲಿ ಈ ಹೆಸರಿನದು ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬), ನೋಡಿ, **'ಸ್ವರ್ಗ'**

**ಸನ್ಯಸನ** – ಸಲ್ಲೇಖನ ವ್ರತ, ಆಹಾರ–ಪಾನೀಯಗಳನ್ನು ತೊರೆಯುವ ವ್ರತ (ನಾಮಲ್ಲಿ ಧೈರ್ಯಮನೆ ಮನದೊಳವಲಂಬಿಸಿ ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನ ಪೂರ್ವಕಂ ಸನ್ಯಸನದಿಂ ಮುಡಿಪಿ: **ಶಾಂತಿಪು,** ೪. ೯೭ ವ)

**ಸನ್ಯಸನವಿಧಿ** – ಸನ್ಯಸನದ ಮೂಲಕ ಪ್ರಾಣತ್ಯಾಗ ಮಾಡುವುದು (ಚಂದ್ರಸೇನಾಚಾರ್ಯರ ಶ್ರೀಪಾದಪದ್ಮಪಾರ್ಶ್ವದೊಳ್ ಸನ್ಯಸನವಿಧಿಯೊಳ್ ಪರಿತ್ಯಕ್ತಾಹಾರಶರೀರನೆಂ ಸಮಾಧಿವಡೆದು: **ಆದಿಪು,** ೩. ೫೦ ವ)

**ಸನ್ಯಾಸವ್ರಜನ** – ಒಂದು ಶಿಕ್ಷಾವ್ರತ, ಸನ್ಯಾಸದೀಕ್ಷೆಯನ್ನು ಪಡೆಯುವುದು (ತೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತಂ ಇದು ನಾಲ್ಕು ತೆಱಂ ಅನೂನಾಗಮದೊಳ್: **ಶಾಂತಿಪು,** ೧. ೯೦)

**ಸಪ್ತಗುಣ** – ಶ್ರದ್ಧೆ, ಶಕ್ತಿ, ಭಕ್ತಿ, ವಿಜ್ಞಾನ ಅಲುಬ್ಧಿತ, ಕ್ಷಮೆ, ತ್ಯಾಗಗಳೆಂಬ ಏಳು ಗುಣಗಳು (ಶ್ರದ್ಧಾದಿ ಸಪ್ತಗುಣಸಂಪನ್ನನುಂ ಪ್ರತಿಗ್ರಹಾದಿ ನವವಿಧಪುಣ್ಯ ಪುರಸ್ಸರನುಮಾಗಿ: **ಆದಿಪು,** ೧೦. ೧ ವ)

**ಸಪ್ತತತ್ವ** – ಜೀವ, ಅಜೀವ, ಬಂಧ, ಅಸ್ರವ, ಸಂವರ, ನಿರ್ಜರ, ಮೋಕ್ಷಗಳೆಂಬ ಏಳು ತತ್ವಗಳು (ಎಂಬ ಸಪ್ತತತ್ವಂಗಳುಮಂ ಈ ಏೞುಂ ತತ್ತ್ವಂ ಪುಣ್ಯಾಪಾಪಂ ಗಳೆಂಬ ಎರಡುಂ ಪದಾರ್ಥಂಗಳ್ವೆರಸು: **ಅನಂತಪು,** ೧೦. ೫೧ ವ)

**ಸಪ್ತತಿಕಳೆ** – ಏಳು ಬಗೆಯ ಕಲೆಗಳು (ಅಕ್ಷರ ಗಣಿತ ಗಾಂಧರ್ವ ಚಿತ್ರಕರ್ಮ ಪತ್ರಚ್ಛೇದಾದಿ ಸಪ್ತತಿಕಳೆಗಳೊಳಂ: **ಧರ್ಮಾಮೃತ,** ೮. ೬೪ ವ)

**ಸಪ್ತನಯ** – ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ ಎಂಬ ಏಳು ನಯಗಳು (ನೈಗಮ ಸಂಗ್ರಹಾದಿ ಸಪ್ತನಯ ಭಾವನೆಯುಂ...ತನ್ನೊಳುಂ ಸಚ್ಛಿನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಸಪ್ತಪರಮಸ್ಥಾನ** – ಸಜ್ಜಾತಿತ್ವ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಅರ್ಹಂತ್ಯ, ನಿರ್ವಾಣ ಎಂಬ ಮೋಕ್ಷಪದವಿಯ ಏಳು ಹಂತಗಳು (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ)

**ಸಪ್ತಪ್ರಕೃತಿ** – ಕಷಾಯಚತುಷ್ಕ ಮತ್ತು ತ್ರಿವಿಧ ದರ್ಶನಗಳು (ತ್ರಿಕರಣ ದ್ರವ್ಯಾಂಜನದಿಂ ಸಕಳ ಪ್ರತ್ಯಕ್ಷಹೇತು ಸಮನಿಸೆ ಸಪ್ತಪ್ರಕೃತಿಪಟಳ ಕ್ಷಯಂ ಕ್ಷಾಯಿಕ ಸಮ್ಯಗ್ದೃಷ್ಟಿವಿಭವಮಂ ವಿಭು ತಳೆದಂ: **ಮಲ್ಲಿನಾಪು,** ೧೪. ೫೮)

**ಸಪ್ತಭಂಗಿ** – ಯಾವುದರಲ್ಲೇ ಆಗಲಿ ಇರುವ ಪರಸ್ಪರ ವಿರೋಧವನ್ನು ವಿವರಿಸುವ ಏಳುಬಗೆಯ ತರ್ಕಕ್ರಮ (ಸ್ಯಾದಸ್ತಿ ಸ್ಯಾನ್ನಾಸ್ತಿ ಸ್ಯಾದತ್ತಿನಾಸ್ತಿ ಸ್ಯಾದವಕ್ತವ್ಯಂ ಸ್ಯಾದಸ್ತ್ಯವಕ್ತವ್ಯಂ ಸ್ಯಾನ್ನಾಸ್ತ್ಯವಕ್ತವ್ಯಂ ಸ್ಯಾದಸ್ತಿನಾಸ್ತ್ಯವಕ್ತವ್ಯಂ ಎಂಬ ಸಪ್ತಭಂಗಿಯಿಂ: **ಸುಕುಮಾಚ,** ೩. ೩೯ ವ)

**ಸಪ್ತಭಯ** – ಇಹಲೋಕ, ಪರಲೋಕ, ಮೃತ್ಯು, ವೇದನೆ, ಅಗುಪ್ತಿ, ಅರಕ್ಷೆ, ಅಕಸ್ಮಾತ್‌ಗಳ ಬಗೆಗಿನ ಭಯ (ಇಹಲೋಕದ ಪರಲೋಕದ ಮರಣದ ಕುತ್ತದ ಪರಜೆನಗಿಲ್ಲೆಂಬ ಮೆಯ್ಗೆ ಮಱೆಯಿಲ್ಲೆಂಬ ತೊಟ್ಟನಡಸುವ ಸಪ್ತಭಯಂಗಳ್ಗೆ ನಡುಗದುದಂ: **ಧರ್ಮಾಮೃ,** ೫. ೮೩ ವ)

**ಸಪ್ತರತ್ನ** – ಕತ್ತಿ ಶಂಖ ಚಕ್ರ ಬಿಲ್ಲು ಗದೆ ಶಕ್ತಿ ಮತ್ತು ದಂಡಗಳು (ಅಸಿ ಶಂಖ ಧನುಶ್ಚಕ್ರಗದಾಶಕ್ತಿದಂಡಮೆಂಬ ಸಪ್ತರತ್ನಂಗಳು ತ್ರಿಪೃಷ್ಠಂಗಾಗೆ: **ಚಾವುಂಡಜಯ** ಪು ೧೨೧, ಸಾ ೫)

**ಸಪ್ತರ್ಧಿ** – ಬುದ್ಧಿ, ತಪಸ್ಸು, ವಿಕ್ರಿಯೆ, ಔಷಧಿ, ಬಲ, ರಸ, ಅಕ್ಷೀಣ ಎಂಬ ಏಳು ಋದ್ಧಿಗಳು (ಪದಿನೆಂಟು ಭೇದದರ್ಧಿ ಘೋರಾದಿತಪೋಋದ್ಧಿಯಣಿಮಾದಿ ವಿಕ್ರಿಯಋದ್ಧಿ ಪುದಿದಂಗಮಳಮೆ ದಿವ್ಯೌಷಧರ್ಧಿ ಕೆಯ್ಯೊಳಿಕ್ಕಿದ ನೀರಸಂ

ಮೃದುರಸಯನಮಪ್ಪ ರಸರ್ಧಿಯಳ್ಕದ ಬಳರ್ಧಿಯುಂಡು ಮಿಕ್ಕನ್ನಮಿರ್ದಾಸ್ಪದ ಮುಂಟು ಕಟಕಕ್ಕಮೆನಿಸುವಕ್ಷೀಣರ್ಧಿಯಿಂತು ಸಪ್ತರ್ಧಿಯಂ ಮುನಿ ತಾಳ್ದಿದಂ: **ಅನಂತಪು,** ೪. ೬೦)

**ಸಪ್ತರ್ಧಿಜ್ಞಾನ** – ಏಳೂ ಬಗೆಯ ಋದ್ಧಿಗಳಿಂದ ಉಂಟಾದ ಜ್ಞಾನ (ಅಂತು ದೀಕ್ಷಾಗ್ರಹಣಾನಂತರಸಮಯ ಸಮುತ್ಪನ್ನಸಪ್ತರ್ಧಿಜ್ಞಾನಚತುಷ್ಟಯಂ ಪ್ರಥಮಗಣಧರನಾದಂ: **ಆದಿಪು,** ೧೦. ೪೮ ವ)

**ಸಪ್ತವಿಧ ಮಂತ್ರ** – ಏಳು ಬಗೆಯ ಸಾಧನ ಮಂತ್ರಗಳು (ಇಂತು ಪೀಠಿಕಾ ಜಾತಿ ನಿಸ್ತಾರಕ ಋಷಿ ಸುರೇಂದ್ರ ಪರಮರಾಜ ಪರಮೇಷ್ಠಿಸಂಬಂಧಿಯಪ್ಪ ಸಪ್ತವಿಧ ಮಂತ್ರಗಳನಾರಾಧನಾವಿಧಿ ಕ್ರಿಯೆಗಳಂ : **ಚಾವುಂಡಜಯ** ಪು. ೧೯ ಸಾ೨೭)

**ಸಪ್ತವ್ಯಸನ** – ದ್ಯೂತ, ವೇಶ್ಯಾಸೇವನೆ, ಪರಸ್ತ್ರೀಗಮನ, ಚೌರ್ಯಕರ್ಮ, ಮಾಂಸಭಕ್ಷಣೆ, ಮದ್ಯಪಾನ, ಬೇಟೆ (ಮಕ್ಕಳ್ ಸಪ್ತವ್ಯಸನಾಭಿಭೂತರಾಗಿ ಬಾಟಿಂ ಕೆಟ್ಟುದುಮಂ ಶಾಸ್ತ್ರಜ್ಞರುಂ ಬುದ್ಧಿಯೊಡೆಯರುಂ ಯೋಗ್ಯರುಂ ಅಪ್ಪಂತು ಮಾಡಿಂ ಎಂದು ಮಕ್ಕಳಂ ತನಗೊಪ್ಪಿಸಿಯಟ್ಟಿದುಮಂ ...ಬಾಜಿಸಿ ನೋಡಿ:**ವಡ್ಡಾರಾ,** ೩, ಸಾ ೧೩)

**ಸಪ್ತಸಿದ್ಧಿ** – ಯೋಗಿಗೆ ದೊರೆಯುವ ಬುದ್ಧಿ ಕ್ರಿಯಾ ತಪ ಬಲ ರಸ ಔಷಧಿ ಕ್ರಿಯಾಕ್ಷೀಣ ಎಂಬ ಏಳು ಬಗೆಯ ಸಿದ್ಧಿಗಳು (ಅಂತುಗ್ರೋಗ್ರತಪದೊಳ್ ನೆಗಟ್ದು ಬುದ್ಧಿಕ್ರಿಯಾತಪೋಬಲರಸೌಷಧಿ ಕ್ರಿಯಾಕ್ಷೀಣವಿಕಲ್ಪವುಪ್ಪ ಸಪ್ತಸಿದ್ಧಿಯೊಳಂ: **ಅಜಿತಪು,** ೭. ೮ ವ)

**ಸಪ್ತಾನೀಕ** – ಸೌಧರ್ಮೇಂದ್ರನ ಏಳು ಸೇನಾಂಗಗಳು: ವೃಷಭ, ರಥ, ತುರಗ, ಮದಗಜ, ಪದಾತಿ, ನರ್ತಕ[ಕಿ], ಗಂಧರ್ವ (ಗಜರಥಾಶ್ವ ವೃಷಭ ಗಾಂಧರ್ವ ನರ್ತಕೀ ಪದಾತಿ ಲಕ್ಷಣಮಪ್ಪ ಸಪ್ತಾನೀಕಂ ಬೆರಸು ಬರೆ: **ಚಾವುಂಪು,** ಪು. ೧೯೭, ಸಾ. ೬–೭)

**ಸಮಂಜಸತ್ವ** – ರಾಜನು ತನ್ನ ಪ್ರಜೆಗಳೆಲ್ಲರನ್ನೂ ಸಮಾನವಾಗಿ ಕಾಣುವುದು (ಸಮಂಜಸತ್ವಮೆಂಬುದು ಪ್ರಜಾಪಾಳದೊಳ್ ಸಮದರ್ಶನನಾಗಿ ನೆಗಟ್ದುದು: **ಚಾವುಂಡಜಯ,** ಪು. ೧೯೭)

**ಸಮಚತುರಸ್ರಸಂಸ್ಥಾನ** – ಪ್ರಮಾಣಬದ್ಧ ಶರೀರವುಳ್ಳವನು (ಅಹಮಿಂದ್ರನಾಗಿ ಪುಟ್ಟಿ ಸಮಚತುರಸ್ರಸಂಸ್ಥಾನನುಂ ...ಸುಖಾನುಭವನಿರತನುಂ ಆಗಿ: **ಅಜಿತಪು,** ೩. ೨ ವ)

**ಸಮದತ್ತಿ** – ದತ್ತಿ ಆರ್ಯಷಟ್ಕರ್ಮಗಳಲ್ಲಿ ಒಂದು; ಇದರಲ್ಲಿ ನಾಲ್ಕು ಬಗೆ: ದಯಾದತ್ತಿ, ಪಾತ್ರದತ್ತಿ, ಸಮದತ್ತಿ ಮತ್ತು ಸಕಳದತ್ತಿ. ಸಮದತ್ತಿ ಎಂದರೆ ಸಮಾನಸ್ಕಂಧನಿಗೆ ಕೊಡುವ ದಾನ (ಸಮದತ್ತಿಯೆಂಬುದು ತನ್ನೊಳ್ ಸಮಕ್ರಿಯಾಮಂತ್ರನಪ್ಪ ವಿಸ್ತಾರಕೋತ್ತಮಂಗೆ ಕನ್ಯಾಕನ್ಯಾಭೂಸುವರ್ಣಹಸ್ತ್ಯಶ್ವ ರಥರತ್ನಾದಿಗಳಂ ಕುಡುವುದು: **ಚಾವುಂಡಜಯ,** ಪು, ೧೭೯); (ತನ್ನ ಸಮಾನಮಪ್ಪ ಕುಲಶೀಲಂಗಳ

ವ್ರತಸಂಪನ್ನರ್ಗೆ ಕರಿತುರಗಮಣೀಭೂಷಣಹಿರಣ್ಯಭೂಮಿಕನ್ಯಾದಿವಸ್ತುಗಳಂ ಕುಡುವ ಸಮದತ್ತಿಯುಂ: **ಸುಕುಮಾಚ,** ೬.೨೫ ವ)

**ಸಮಭಿರೂಢ** – ಸಪ್ತನಯಗಳಲ್ಲಿ ಒಂದು: ನಾನಾರ್ಥಗಳಿದ್ದರೂ ಒಂದು ಅರ್ಥವನ್ನು ಮುಖ್ಯವಾಗಿ ಹೇಳುವುದು (ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದಸಮಭಿರೂಢೈವಮೆಂಭೂತಾದಿ ನಯವಿಭೇದದಿಂ: **ಸುಕುಮಾಚ,** ೩. ೩೯ ವ)

**ಸಮಯ** – ಒಂದು ಕಾಲಪ್ರಮಾಣ, ಒಂದು ಪರಮಾಣುವು ಮಂದಗತಿಯಿಂದ ಒಂದು ಪ್ರದೇಶಕ್ಕೆ ಸರಿಯುವಷ್ಟು ಕಾಲ (ಅದು ಸಮಯ ಆವಳಿಕ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾನುಕ್ರಮದಿಂ: **ಆದಿಪು,** ೬. ೪೮ ವ); ಮತಧರ್ಮ (ಸಮಯವಿಚಾರಮೆಂಬುದು ಮಹಾಗಹನಂ: ಶಾಂತಿಪು, ೮. ೧೩೨ ವ); ತತ್ವ, ಸಿದ್ಧಾಂತ (ಅಭಿಧಾನ ಲಿಂಗಾಂಗೀಕೃತಮಪ್ಪ ನಿಘಂಟುಸಮಯಮುಮಂ ... ಉಪದೇಶಂಗೆಯ್ಯುತ್ತುಂ: **ಶಾಂತಿಪು,** ೧೦. ೯೦ ವ)

**ಸಮಯಮೂಢ** – ನಿಜವಾದ ಧರ್ಮದ ಸ್ವರೂಪವನ್ನು ತಿಳಿಯದವನು (ಧರ್ಮೋಪದೇಶಮಿಲ್ಲದೆ ಕರ್ಮಮನುಪಶಮಿಪ ಚರಿತಮಿಲ್ಲದೆ ದುಃಖಕ್ಕಾರ್ಮಮೆನಿಸಿರ್ದ ಲೌಕಿಕಧರ್ಮದೊಳೆಸಗುವನೆ ... ವರಮೀವುದೆಂದು ದೈವಮನೆರೆವವನುಂ ದೈವಮೀಗಳೀವುದು ಪುಸಿಯೇ ಪರಮಾರ್ಥಮೆಂದು ನಂಬುವ ನರನುಂ ... ಜಗದೊಳ್ ಮಹೇಂದ್ರಜಾಲಾದಿಗಳಂ ತೋರ್ಪವರನಿವರೆ ದೇವದಿರ್ಣಂಡರ್ ಬಗೆವೊಡೆ ಕೇಳೆನ್ನುತೆ ನಂಬುಗೆಯಿಂದೆಱಗುವನೆ ಸಮಯಮೂಢಂ: **ಧರ್ಮಾಮೃತ,** ೫. ೧೫೪–೫೬)

**ಸಮವಸರಣ** – ಕೇವಲಜ್ಞಾನವನ್ನು ಪಡೆದ ಮೇಲೆ ತೀರ್ಥಂಕರನು ಉಪದೇಶ ಮಾಡಲೆಂದು ಇಂದ್ರನ ಆಣತಿಯಂತೆ ಕುಬೇರನು ರಚಿಸುವ ಮಂಟಪ (ಭೂನಾಥಂ ಪೊಕ್ಕಂ ಭವ್ಯಾನಂದನ ಸಮವಸರಣಭೂಮಂಡಳಮಂ: **ಶಾಂತಿಪು,** ೮. ೧೫೬)

**ಸಮವಸರಣಮಂಡಲ** – ಸಮವಸರಣ ಇರುವ ಜಾಗ (ಶಚಿಗಮರೇಂದ್ರಂ ಸಮವಸರಣಮಂಡಲಮಂ ಅನುಕ್ರಮದಿಂದೆ ತೋಱೆಯುಂ: **ಅನಂತಪು,** ೧೦. ೧೯)

**ಸಮವಸೃತಿ** – ಸಮವಸರಣ ಮಂಟಪ (ಕೈಳಾಸಗಿರೀಂದ್ರಸ್ಥಿತ ಸಮವಸೃತಿಯಂ ಸಂಸೃತಿಲತಾ ವಿಚ್ಛೇದಿಯಂ ಪೊಕ್ಕು: **ಆದಿಪು,** ೧೫. ೨೧ ವ)

**ಸಮಾಧಿ** – ಷೋಡಶಭಾವನೆಗಳಲ್ಲಿ ಒಂದು, ಆತ್ಮನಲ್ಲಿ ಲೀನವಾಗುವುದು, ಧ್ಯಾನ (ಸಮಾಧಿಯೆಂಬುದು ಭಾಂಡಾಗಾರಸಮುತ್ಥಿತಾಗ್ನಿಯುಮೆಂತು ತುರಿಪದಿಂ ನಂದಿಪುವಂತೆ ಬಹೋಪಕಾರ್ಯಂ ಶೀಲವ್ರತಧಾರಿಯುಮಪ್ಪ ಮುನಿಗಣದ

ತಪಕ್ಕೇನಾನುಮಿಂದು ವಿಘ್ನಮಾದೊಡೆ ಬೇಗಮದಂ ಪ್ರಶಮಿಸುವುದು: **ಚಾವುಂಡಜಯ,** ಪು. ೨೦೭)

**ಸಮಾಧಿಮರಣ** – ಮನಶ್ಶಾಂತಿಯಿಂದ ಮರಣವನ್ನೈದುವುದು (ಈ ಭವದೊಳ್ ತಪಂಬಟ್ಟು ಮುಕ್ತಾವಳೀ ತಪಸ್ತಪನತಾಪದಿಂ ಸಮಾಧಿಮರಣದಿಂದ ಈಶಾನಕಲ್ಪದೊಳ್ ... ದೇವನಾಗಿ ಬಂದು: **ಶಾಂತಿಪು,** ೯. ೧೪ ವ)

**ಸಮಾಧಿವಡೆ** – ಸಮಾಧಿವಿಧಿಯಿಂದ ಪ್ರಾಣಬಿಡು (ಎಂದು ಧೈರ್ಯಮನೆ ಮನದೊಳವಲಂಬಿಸಿ ಸಮಾಧಿವಡೆದು ಈಶಾನಕಲ್ಪದೊಳ್ ದಿವಾಕರಪ್ರಭಮೆಂಬ ವಿಮಾನದೊಳ್: **ಆದಿಪು,** ೫. ೧೩ ವ)

**ಸಮಾಧಿವಿಧಿ** – ಸಮಾಧಿಮರಣ (ಪಂಚಪದಂಗಳನೋದುತಿರ್ಪ ನಾಲಗೆ ಗಡಮೇಂ ಸಮಾಧಿವಿಧಿಯಂ ನೆಱೆ ತಾಳ್ದಿದನೋ ಮಹಾಬಳಂ: **ಆದಿಪು,** ೨. ೬೦)

**ಸಮಾನ** – ಕರ್ಮಮಲನಾಶಕ ಧರ್ಮಗಳಲ್ಲಿ ಒಂದು, ಸಕಲವನ್ನೂ ಸಮಾನತೆಯಿಂದ ಕಾಣುವ ಮನೋಭಾವ (ಸಮಾನವೆಂಬುದು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಪಶು ಮೃಗ ಪಕ್ಷಿ ಸರೀಸೃಪಂಗಳುಮಂ ಸಮಂಗಾಣ್ಬ ಧರ್ಮಂ: **ಚಾವುಂಡಜಯ,** ಪು. ೮)

**ಸಮಿತಿ** – ಮುನಿಗಳು ಆಚರಿಸಬೇಕಾದ ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ, ಉತ್ಸರ್ಗ ಎಂಬ ಐದು ವ್ರತರೂಪದ ಪ್ರತಿಜ್ಞೆ (ನಡೆವ ನುಡಿವ ಉಣ್ಬ ಕೊಳ್ವ ಇಡುವ ಎಡೆಯೊಳ್ ತಾಂ ಕಾಯಮಲಮನುಗುಳ್ವೆಡೆಯೊಳ್ ಎಡಂಬಡಂ ಎನಿಸದೆ ಓವಿ ಜೀವಮನಡಕಂಬೆರಸು ಅಯ್ದುಸಮಿತಿಯೊಳ್ ಮುನಿ ನೆಗಟ್ದಿಂ: **ಆದಿಪು,** ೬. ೨೮)

**ಸಮುಚ್ಛಿನ್ನಕ್ರಿಯಾನಿವೃತ್ತಿ** – ಇದು ಸರ್ವೋತ್ಕೃಷ್ಟವಾದ ನಾಲ್ಕನೆಯ ಶುಕ್ಲಧ್ಯಾನ; ಔದಾರಿಕಶರೀರ ತೈಜಸಶರೀರ ಕಾರ್ಮಣಶರೀರ – ಈ ಮೂರು ಶರೀರಗಳ ಬಂಧನವನ್ನು ನಾಶಪಡಿಸಲು ಅಯೋಗಿ ಕೇವಲಿಯು ಮಾಡುವ ಶುಕ್ಲಧ್ಯಾನ (ಸರ್ವಬಧಾಸ್ರವನಿರೋಧದಿನಯೋಗಿಸ್ಥಾನಮಂ ಪೊರ್ದಿ ಸಮುಚ್ಛಿನ್ನ ಕ್ರಿಯಾನಿವೃತ್ತಿ ಧ್ಯಾನಪರಿಣತೆಯಿನಘಾತಿ ಚತುಷ್ಕಶುಷ್ಕೇಂಧನಪಾವಕನಾಗಲೊಡಂ: **ಸುಕುಮಾಚ,** ೯. ೧ ವ)

**ಸಮುಚ್ಛಿನ್ನಕ್ರಿಯಾಪ್ರತಿಪತ್ತಿ** – ಸಮುಚ್ಛಿನ್ನಕ್ರಿಯಾನಿವೃತ್ತಿ (ಸಮುಚ್ಛಿನ್ನಕ್ರಿಯಾಪ್ರತಿಪತ್ತಿ ಧ್ಯಾನಪರಿಪೂರ್ಣ ವಿಶೇಷಶೀಲಗುಣಗಣನಿಳಯಂ: **ಆದಿಪು,** ೧೬. ೪೯ ವ) [ನರಸಿಂಹಶಾಸ್ತ್ರಿಗಳು ಸ್ವೀಕರಿಸಿರುವ ಪಾಠ]

**ಸಮುದ್ಘಾತ** – ಮೂಲಶರೀರವನ್ನು ಬಿಡದೆ ಆತ್ಮಪ್ರದೇಶವು ಶರೀರದಿಂದ ಹೊರಬರುವುದು, ವೇದನೆ ಕಷಾಯ ವೈಕ್ರಿಯಕ ಮಾರಣಾಂತಿಕ ತೈಜಸ ಆಹಾರಕ ಮತ್ತು ಕೇವಲಿ ಎಂದು ಏಳು ಬಗೆಯ ಸಮುದ್ಘಾತಗಳು (ಇಂತು ದಂಡ ಕವಾಟ ಪ್ರವರ ಲೋಕಪೂರಣಮೆಂಬ ನಾಲ್ಕು ಸಮುದ್ಘಾತಂಗಳನನು ಕ್ರಮದಿಂ ನಿರ್ವರ್ತಿಸಿ: **ಧರ್ಮಬಾಹು,** ೧೬. ೩೨೧ ವ)

**ಸಮ್ಮೂರ್ಛ್ಛನೆ** – ಶರೀರಕ್ಕೆ ತಕ್ಕ ಪುದ್ಗಲಗಳನ್ನು ತೆಗೆದುಕೊಳ್ಳುವುದು (ಶೀತೋಷ್ಣವಿವೃತ ಸಂವೃತ ಚೇತಾಚೇತ ಪ್ರಮಿಶ್ರಭೇದದೆ ನವಸಂಖ್ಯಾತಂ ತದ್ಯೋನಿಸಮುದ್ಭೂತಂ ಗರ್ಭೋಪಪಾದಸಮ್ಮೂರ್ಛ್ಛನೆಗಳ್: **ಸುಕುಮಾಚ,** ೮. ೮)

**ಸಮ್ಮೇದತಪ** – ಸಮ್ಮೇದ ಪರ್ವತದಲ್ಲಿ ಮಾಡುವ ತಪಸ್ಸು (ಅಂತುತ್ತರಮುಂ ಉತ್ತರೋತ್ತರಮುಂ ಆಗೆ ಸಮ್ಮೇತಪಃಪ್ರಾಸಾದಕ್ಕೆ ಕಳಶಮಿಡುವಂತೆ ಆ ಮುನೀಂದ್ರಂ: **ಶಾಂತಿಪು,** ೯. ೧೧೪ ವ)

**ಸಮ್ಯಕ್ಚರಿತ್ರ** – ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ನಡತೆ (ಅದುವೆ ಸಮ್ಯಗ್ಜ್ಞಾನಕ್ಕವಕಾಶಮಕ್ಕಂ ಅಂತದು ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ: **ಆದಿಪು,** ೫. ೫೯)

**ಸಮ್ಯಕ್ಚಾರಿತ್ರ** – ಭವ್ಯಜೀವಿಗೆ ಬಾಹ್ಯಾಭ್ಯಂತರ ನಿವೃತ್ತಿ, ಅದರಲ್ಲಿ ಐದು ವಿಧ (ಸಂಸಾರಪರಿತ್ಯಾಗೋದ್ಯುಕ್ತ ಜ್ಞಾನೋಪೇತ ಭವ್ಯಜೀವನ ಬಾಹ್ಯಾಭ್ಯಂತರ ಕ್ರಿಯಾನಿವೃತ್ತಿ ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಸಮ್ಯಕ್‌ಜ್ಞಾನ** – ಜೀವಾದಿ ಪದಾರ್ಥಗಳ ಯಥಾತ್ಮತೆಯನ್ನರಿಯುವುದು (ಸಂಶಯ ವಿಪರ್ಯಯ ಸಾವದ್ಯ ಅನವದ್ಯ ಅವಸಾಯ ಸ್ವಭಾವರಹಿತಮಾಗಿ ಜೀವಾದಿ ಪದಾರ್ಥ ಯಥಾತ್ಮ್ಯಾವಗಮಂ ಸಮ್ಯಕ್‌ಜ್ಞಾನಂ: **ಆದಿಪು,** ೧೦. ೬೩ ವ)

**ಸಮ್ಯಕ್ತ್ವ** – ಧರ್ಮದ ಬಗೆಗಿನ ಅಚಲ ನಂಬಿಕೆ, ಆರು ದ್ರವ್ಯ, ಪಂಚಾಸ್ತಿಕಾಯ ಮತ್ತು ನವಪದಾರ್ಥಗಳ ಬಗ್ಗೆ ಜಿನೇಂದ್ರನ ಉಪದೇಶದಂತೆ ತಿಳಿಯುವುದು (ನಿನಗೆ ಜಯವರ್ಮನಾದಂದಿನ ಭವದಿಂದಿತ್ತ ಭೋಗಕಾಂಕ್ಷೆಯೆ ತಿಣ್ಣಂ ಸಮ್ಯಕ್ತ್ವದ ದೆಸೆಯಿನಿತಿಲ್ಲ: **ಆದಿಪು,** ೫. ೫೧); ಇದರಲ್ಲಿ ಹತ್ತು ವಿಧಗಳು (ಸಮ್ಯಕ್ತ್ವಮುಂ ಆಜ್ಞಾರುಚಿಯುಂ ಮಾರ್ಗರುಚಿಯುಂ ಉಪದೇಶರುಚಿಯುಂ ಸೂತ್ರರುಚಿಯುಂ ಬೀಜರುಚಿಯುಂ ಸಂಕ್ಷೇಪರುಚಿಯುಂ ವಿಸ್ತಾರರುಚಿಯುಂ ಅರ್ಥರುಚಿಯುಂ ಅವಗಾಢರುಚಿಯುಂ ಪರಮಾವಗಾಢರುಚಿಯುಮೆಂದು ದಶವಿಧಮಕ್ಕುಂ: **ಚಾವುಂಡಜಯ,** ಪು. ೩೩೯)

**ಸಮ್ಯಕ್ತ್ವಪ್ರಕೃತಿ** – ದರ್ಶನ ಮೋಹನೀಯ ಕರ್ಮದ ಮೂರು ಪ್ರಭೇದಗಳಲ್ಲಿ ಒಂದು (ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ: **ಆದಿಪು,** ೧೦. ೧೪ ವ)

**ಸಮ್ಯಕ್ತ್ವಶುದ್ಧಿ** – ಸಮ್ಯಕ್ತ್ವಸಾಧನೆಗೆ ಆವಶ್ಯಕವಾದ ತ್ರಿಕರಣಶುದ್ಧಿ (ಸಮ್ಯಕ್ತ್ವಶುದ್ಧಿ ವಿನಯುತೆ ಸಮ್ಯಕ್ಶೀಲತೆ ನಿರಂತರಾಧ್ಯಾಯುವುನಃಸಮ್ಮಧಿಗವ್ಯುತೆ ಪತಿಗತಗಮ್ಯವಜೇಯತ್ವಂ ಅಮಲ ಜಿನಪತಿಮತದೊಳ್: **ಶಾಂತಿಪು,** ೯. ೧೧೩)

**ಸಮ್ಯಕ್ಶೀಲತೆ** – ಸಮ್ಯಕ್ಚರಿತ್ರ (ಸಮ್ಯಕ್ತ್ವಶುದ್ಧಿವಿನಯತೆ ಸಮ್ಯಕ್ಶೀಲತೆ: **ಶಾಂತಿಪು,** ೯. ೧೧೫)

**ಸಮ್ಯಗ್ಜ್ಞಾನ** – ಸಮ್ಯಕ್‌ದರ್ಶನ ಸಮ್ಯಕ್‌ಚಾರಿತ್ರ ಸಮ್ಯಕ್‌ಜ್ಞಾನ ಎಂಬ ರತ್ನತ್ರಯಗಳಲ್ಲಿ ಒಂದು, ಸಮ್ಯಗ್ದರ್ಶನದಿಂದ ಕಂಡು ಗ್ರಹಿಸಿದ್ದನ್ನು ಸ್ವಲ್ಪವೂ ಸಂಶಯ ಉಳಿಯದಂತೆ ಬುದ್ಧಿಯಿಂದ ಚೆನ್ನಾಗಿ ತಿಳಿದು ಜೀವಾದಿ ಪದಾರ್ಥಗಳ ಸ್ವರೂಪವನ್ನು ಯಥಾವತ್ತಾಗಿ ಅರಿತುಕೊಳ್ಳುವುದು (ಇವಱಿಂ ಸಮ್ಯಗ್ದರ್ಶನಮವಶ್ಯ ಮುಜ್ಜ್ವಳಿಕುಮದುವೆ ಸಮ್ಯಗ್ಜ್ಞಾನಕ್ಕವಕಾಶಮಕ್ಕುಮಂ: **ಆದಿಪು,** ೫. ೫೯)

**ಸಮ್ಯಗ್ದರ್ಶನ** – ರತ್ನತ್ರಯಗಳಲ್ಲಿ ಒಂದು, ಧರ್ಮದಲ್ಲಿನ ನಂಬಿಕೆ–ಶ್ರದ್ಧೆಗಳು, ಮೋಕ್ಷ ಪಡೆಯಲು ಸಾಧನವಾದ ದೃಢನಂಬಿಕೆ (ಜೀವಾದಿ ಪದಾರ್ಥತತ್ವಂಗಳಂ ನಿಸರ್ಗಾಧಿಗಮದ್ವಿಪ್ರಕಾರದಿನಾವುದೊಂದು ಪ್ರಕಾರದಿನಕ್ಕೆ ಪಿರಿದುಮಟ್ಟಿಱೊಳ್ ನಿಶ್ಚಯಂಗೆಯದು ನಂಬುವುದು ಸಮ್ಯಗ್ದರ್ಶನಮೆಂಬುದಕ್ಕುಂ: **ಸುಕುಮಾಚ,** ೬. ೮ ವ)

**ಸಮ್ಯಗ್ದರ್ಶನಾವಯವ** – [ಸಮ್ಯಗ್ದರ್ಶನ+ಅವಯವ] ಸಮ್ಯಗ್ದರ್ಶನದ ನಿಶ್ಶಂಕೆ ನಿಷ್ಕಾಂಕ್ಷೆ ನಿರ್ವಿಚಿಕಿತ್ಸೆ ಅಮೂಢದೃಷ್ಟಿತ್ವ ಉಪಗೂಹನ ಸ್ಥಿತಿಕರಣ ವಾತ್ಸಲ್ಯ ಧರ್ಮಪ್ರಭಾವನೆ ಎಂಬ ಅಂಗಗಳು (ಎಂದು ಪೇೞ್ದ ಈ ಎಂಟು ಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್: **ಆದಿಪು,** ೫. ೫೮ ವ)

**ಸಮ್ಯಗ್ದೃಷ್ಟಿ** – ಸಮ್ಯಗ್ದರ್ಶನ (ಮಂತ್ರಿಮುಖ್ಯಂ ಆ ಶ್ರೀಪಾಲಂ ವರಸಮ್ಯಗ್ದೃಷ್ಟಿ ಜಿನೇಶ್ವರಮತಹಿತಂ: **ಧರ್ಮಪ,** ೧೦. ೬೪)

**ಸಮ್ಯಙ್ಮಿಥ್ಯಾತ್ವ** – ದರ್ಶನಮೋಹನೀಯಗಳಲ್ಲಿ ಒಂದು, ರತ್ನತ್ರಯಗಳ ಸಾಧನೆಗೆ ಒದಗುವ ಅಡ್ಡಿ (ಮಿಥ್ಯಾತ್ವ ಸಮ್ಯಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀಯಮಂ ನಿರ್ಮೂಲಿಸಿ: **ಶಾಂತಿಪು,** ೧೧. ೧೧೧ ವ)

**ಸಮ್ಯಜ್ಞಾನ** – ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ತಿಳಿವಳಿಕೆ (ಪ್ರಿಯದಿಂ ತತ್ತ್ವಂಗಳ ನಿರ್ಣಯಮಱಿವುದು ಭಾವಿಸಲ್ಕೆ ಸಮ್ಯಜ್ಞಾನಂ: **ಧರ್ಮಪ,** ೧೦. ೪೦)

**ಸರಸ್ವತಿಲಿಂಗ** – ಮುನಿಗಳ ಯೋಗಸಾಧನೆಯ ಒಂದು ವಿಧ, ಅಧ್ಯಯನಕಾರಣ (ಸ್ತ್ರೀಲಿಂಗಂ ಸರಸ್ವತಿಲಿಂಗಮೆಂಬುದುಂ ಪ್ರತಿವ್ರತಾಲಿಂಗಮೆಂಬುದುಂ ಕೇಶವ್ರತಿ ಲಿಂಗಮೆಂಬುದುಂ ಅರಿಂಜಯಲಿಂಗಮೆಂಬುದುಂ ಚತುರ್ವಿಧಮಕ್ಕುಂ. ಅದಱೊಳ್ ಸರಸ್ವತಿಲಿಂಗಮಧ್ಯಯನಕಾರಣಂ ಪತಿವ್ರತಾಲಿಂಗಂ ವಿಕಲ್ಪಯೋಗ ಸಾಧನಂ ಕೇಶವ್ರತಿಲಿಂಗಂ ಸನ್ಮಾರ್ಗಸಾಧನಂ ಅರಿಂಜಯಲಿಂಗಂ ತೃಪ್ತಿ ಲಕ್ಷಣಂ. ಇವು ನಿರ್ವಾಣಸಾಧನಲಿಂಗಂ; **ಚಾವುಂಡಜಯ,** ಪು ೧೮೯)

**ಸರೋವರನಿವಾಸಿನಿ** – ಸರೋವರದಲ್ಲಿ ವಾಸಿಸುವ ಆರು ಮಂದಿ ದೇವತೆಗಳನ್ನು ಸೌಧರ್ಮೇಂದ್ರನು ಜಿನಜನನಿಯನ್ನಲಂಕರಿಸಲು ನಿಯೋಜಿಸುತ್ತಾನೆ (ಪದ್ಮಾದಿಸರೋವರನಿವಾಸಿನಿಯರಪ್ಪ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ: **ಆದಿಪು,** ೭. ೩ ವ)

**ಸರ್ವತೋಭದ್ರ** – ದಶವಿಧ ಪೂಜೆಗಳಲ್ಲಿ ಒಂದು, ಮಕುಟಬದ್ಧರಾದ ರಾಜರು ಜಿನನಿಗೆ ಮಾಡುವ ಮಹಾಪೂಜೆ; ಚತುರ್ಮುಖಪೂಜೆ, ಚತುರ್ನಿಕಾಯ ಅಮರರು ಮಾಡುವ ಪೂಜೆ (ಪರಿತ್ಯಕ್ತಸಾಮ್ರಾಜ್ಯಪರಿಚ್ಛೇದನಾಗಿ ಸಮಸ್ತಧಾರ್ಮಿಕಜನಂಗಳಂ ಬರಿಸಿ ಸರ್ವತೋಭದ್ರಮೆಂಬ ಮಹಾಮಹಿಮೆಯಂ ಮಹೋತ್ಸಾಹದಿಂದೆಂಟುದಿವಸಂಬರಂ ಮಾಡಿ: **ಆದಿಪು,** ೧೬. ೩೫ ವ); ಒಂದು ಬಗೆಯ ಉಪವಾಸವ್ರತ (ಜಿನೇಶ್ವರರೂಪಮಂ ತಾಳ್ದಿ ಸರ್ವತೋಭದ್ರಸಿಂಹ ವಿಕ್ರೀಡಿತಂಗಳೆಂಬ ತಪದೊಳ್ ನೆಗಟ್ದು: **ಆದಿಪು,** ೩. ೫೭ ವ); ಅರ್ಧಮಾಂಡಳಿಕರು ಮಾಡುವ ಮಹಾಪೂಜೆ (ಅರ್ಧಮಂಡಳಿಕರ್ ಮಾಟ್ಪಿ ಸರ್ವತೋಭದ್ರಮೆಂಬ ಪೆಸರಿನೊಡೆಯ ಮಹಾಮಹಮುಂ: **ಆದಿಪು,** ೧೫. ೧೩ ವ); ಚತುರ್ನಿಕಾಯಾಮರರು ಮಾಡುವ ಪೂಜೆ (ಚತುರ್ನಿಕಾಯಾಮರರ್ಮಾಟ್ಪಿ ಸರ್ವತೋಭದ್ರಮೆಂಬ ಪೂಜೆಯುಂ: **ಸುಕುಮಾಚ,** ೬. ೨೫ ವ); ರುಚಕಪರ್ವಥದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ಸರ್ವಭಾಷಾಸಾಮಾನ್ಯ** – ಅರ್ಧಮಾಗಧಿಯಲ್ಲಿ ಜಿನನು ಮಾತನಾಡಿದರೂ ಜನರಿಗೆ ಅವರವರದೇ ಭಾಷೆಯಲ್ಲಿ ತಿಳಿಯುವುದು (ಶ್ರೀಮತ್ತೀರ್ಥಾಧಿಪನ ವದನಾಂಭೋಜದಿಂ ಸರ್ವಭಾಷಾಸಾಮಾನ್ಯ ಶ್ರೀವಚನಮೊಗೆದತ್ತು: **ಯಶೋಧಚ,** ೧. ೭೧)

**ಸರ್ವರತ್ನ** – ನವನಿಧಿಗಳಲ್ಲಿ ಒಂದು (ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ: **ಆದಿಪು,** ೧೫. ೬ ವ)

**ಸರ್ವವಿದ್ಯಾಚ್ಛೇದಿನಿ** – ಒಂದು ವಿದ್ಯೆ (ಸರ್ವವಿದ್ಯಾಚ್ಛೇದಿನಿ ಉಷ್ಣವೇತಾಳಿ ಮಹಾಜಾಳಿ ಯುದ್ಧವೀರ್ಯ ಬಂಧಮೋಚಿನಿ ಪ್ರಹರಣಾವರಣಿ ಭ್ರಾಮರಿ ಆಭೋಗಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್: **ಚಾವುಂಡಜಯ,** ಪು. ೧೬೪)

**ಸರ್ವಾರ್ಥಸಿದ್ಧಿ** – ಪಂಚಾಣೂತ್ತರ ವಿಮಾನಗಳಲ್ಲಿ ತುತ್ತತುದಿಯದು (ಮೊದಲ ಶುಕ್ಲಧ್ಯಾನದೊಳ್ ಸಮಾಹಿತಂ ಉಪಶಾಂತ ಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳ್ ಅಹಮಿಂದ್ರನಾದಂ: **ಆದಿಪು,** ೬. ೩೪ ವ)

**ಸರ್ವಾವಧಿ** – ಪರಮಾವಧಿ ದೇಶಾವಧಿ ಮತ್ತು ಸರ್ವಾವಧಿ ಎಂಬ ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು, ಕೇವಲಜ್ಞಾನ (ಕೇವಲಬೋಧೋದಯಮೆಂಬೀ ವಿಭವಂಬೆತ್ತು ಸಕಲರೂಪ ವ್ಯಾಪಾರಾವಗಮ ಸಂಪದಂ ಸರ್ವಾವಧಿ ಪುಟ್ಟಿತ್ತು ರಾಘವ ವ್ರತಿಪತಿಯೊಳ್: **ಪಂಪರಾ,** ೧೬. ೬೨)

**ಸರ್ವಾವಧಿಜ್ಞಾನ** – ಕೇವಲಜ್ಞಾನ (ದೇಶವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥಂ ಅತಿವಿಶುದ್ಧ ಪರಿಣಾಮದಿಂ ಸರ್ವಾವಧಿಜ್ಞಾನಲೋಚನನಾಗಿ: **ಸುಕುಮಾಚ,** ೪.೫೪ ವ)

**ಸರ್ವಾವಧಿಬೋಧ** – ಸರ್ವಾವಧಿಜ್ಞಾನವನ್ನು ಹೊಂದಿದವನು (ಧರಿತ್ರೀಸ್ತುತ್ಯನತ್ಯುಜ್ವಲ ನಿರುಪಮದೇಹಪ್ರಭಾ ದಿವ್ಯ ಸರ್ವಾವಧಿಬೋಧಂ ತುಷ್ಟನಾದಂ ಪರಮಜಿನಮತಾಂಭೋಜಿನೀರಾಜಹಂಸಂ: **ಸುಕುಮಾಚ,** ೩. ೪೮)

**ಸರ್ವೋಷಧಿ** – ಒಂದು ಔಷಧರ್ಧಿ, ಸಾಧುವಿನ ಸ್ಪರ್ಶ, ಉಸಿರು, ಮಲಮೂತ್ರಗಳೆಲ್ಲ ರೋಗನಿವಾರಕವಾಗುವುದು (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಸಲ್ಲೇಖನ** – ಕಾಯ ಮತ್ತು ಕಷಾಯಗಳನ್ನು ಚೆನ್ನಾಗಿ ಕೃಶಗೊಳಿಸುವುದು, ಕಾಯಕ್ಕೆ ಸಂಬಂಧಿಸಿದ್ದು ಬಾಹ್ಯ ಮತ್ತು ಕಷಾಯಕ್ಕೆ ಸಂಬಂಧಿಸಿದ್ದು ಅಭ್ಯಂತರ ಉಪವಾಸವ್ರತ (ಪಾಂಡುರಾಜನ ಸಲ್ಲೇಖನಕಾಲದೊಳುಂ ಆಹಾರಮಂ ಪ್ರಯೋಗಿಸಿಂ ಎಂದು ನಾಲ್ವರಂ ಸಮರ್ಪಿಸಿದರ್: **ಹರಿವಂಶ,** ೧೦. ೩೦ ವ)

**ಸವಣ** – [ಶ್ರಮಣ] ಜೈನ ಮುನಿ (ಮಱೆದು ಕೈಕೊಂಡುದು ಅದುವೇಂ ದೋಸಂ ಅದೇಂ ಬನ್ನಂ ಬಿಸುಡು ಸವಣನ ಪೇೞ್ದ ಜೈನಮತಮಂ ಬ್ರತಮಂ: **ಸುಕುಮಾಚ,** ೬. ೪೯)

**ಸವಣ್ಮನೆ** – ಬಸದಿ (ವಸ್ತುಕೃತಿಯಂ ಸಲೆ ಪೇೞ್ವುದು ಕಲ್ತು ಪೇೞದಂದದ ಮನೆಗಲ್ತು ಸವಣ್ಮನೆಗಲ್ತು ಕೂಡೆ ಬಲ್ಲರ ಬಗೆಗಲ್ತು ಆವೆಡೆಯುಮಲ್ತು ಅದು ಕಲ್ಪಿ ವಲಂ ಕವೀಂದ್ರರಾ: **ಕಾವ್ಯಾವಲೋ,** ೨೦೫)

**ಸವನಸ್ಥಾನ** – ತೀರ್ಥಂಕರ ಜನ್ಮಕಲ್ಯಾಣದ ಜಾಗ (ಭಾರತಾಪರವಿದೇಹರಾವತಪ್ರಗ್ವಿದೇಹ ಲಸದ್ಭೂತ ಜಿನವ್ರಜಕ್ಕೆ ಅಱಸವನದಸ್ಥಾನಂಗಳೀ ಶೈಳದೊಳ್: **ಪುಷ್ಪದಂಪು,** ೧೦. ೫೮)

**ಸವನೋದಕ** – ಜಿನನ ಅಭಿಷೇಕದ ನೀರು (ಭುವನಂ ಪವಿತ್ರಮಾದುದು ಸವನೋದಕದಿಂ ದ್ವಿತೀಯತೀರ್ಥೇಶ್ವರನಾ: **ಅಜಿತಪು,** ೪. ೭೫)

**ಸವನೋತ್ಸವ** – ತೀರ್ಥಂಕರ ಶಿಶುವಿನ ಜನ್ಮಕಲ್ಯಾಣ ಮಹೋತ್ಸವ (ಪಾಲ್ಗಡಲ ನೀರ ಪರಿವ ಪೊನಲ್ಗಳ್ ... ಎಱಗಿದುವಾ ಜಿನೇಂದ್ರಸವನೋತ್ಸವದೊಳ್: **ಶಾಂತಿಪು,** ೧೦. ೫೧); ಶುಭಕಾಲದ ಮಂಗಳಸ್ನಾನ (ಮೃಗನೇತ್ರೆ ಮನಂಗೊಂಡಳ್ ಮಲಯಜ ಹಿಮಕರ್ದಮಕಲಿತ ಸಲಿಲಸವನೋತ್ಸವದೊಳ್: **ಪಂಪರಾ,** ೫. ೪೦)

**ಸವಿಪಾಕ** – ಅವಿಪಾಕ ಮತ್ತು ಸವಿಪಾಕ ಎಂಬ ಎರಡು ಬಗೆಯ ನಿರ್ಜರೆಗಳಲ್ಲಿ ಒಂದು, ಕರ್ಮದ ಫಲವು ಕಡಿಮೆಯಾಗುವ ಕಾಲ (ಯಥಾಕಾಲಾನುಭವನ ಸವಿಪಾಕವಿಪಾಕರೂಪದಿಂ ಪೂರ್ವಾರ್ಜಿತನಿರ್ಜರಣಂ ನಿರ್ಜರೆಯೆಂಬುದು: **ಆದಿಪು,** ೧೦. ೬೩ ವ)

**ಸವಿಪಾಕನಿರ್ಜರೆ** – ಸವಿಪಾಕರೂಪದಿಂದ ಕರ್ಮವು ಸೋರಿಹೋಗುವುದು (ಅಂತೆತ್ತಾನುಂ ಸವಿಪಾಕನಿರ್ಜರೆಯಿಂ ದುಷ್ಕರ್ಮಫಲಂ ತವಿಸಿ ನಿಜದಿನುಪಶಮ ಭಾವಮಂ ಪಡೆದದಱ ಫಲದಿಂ: **ಪಂಪರಾ,** ೬. ೫೬ ವ)

**ಸಹಸ್ರಾರ** – ಷೋಡಶಕಲ್ಪಗಳಲ್ಲಿ ಹನ್ನೆರಡನೆಯದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಸಹಸ್ರಾರಕಲ್ಪ** – ಸಹಸ್ರಾರ (ಓರಂತೆ ತೊಳಗಿ ಪೊಳೆವ ಶತಾರ ಸಹಸ್ರಾರಕಲ್ಪಯುಗಂಗಳ್ ಶೋಭಾರಮಣೀಯಂಗಳ್: **ಸುಕುಮಾಚ,** ೧೧. ೬೬)

**ಸಾಂತಕರ** – ಅಚ್ಯುತಕಲ್ಪದ ವಿಮಾನದ ಹೆಸರು (ಇಪತ್ತೆರಡು ಸಾಗರೋಪಮಾಯುಷ್ಯಮಂ ಪಡೆದು ಚ್ಯುತ ಕಲ್ಪದ ಸಾಂತಕರ ವಿಮಾನದೊಳ್ ಅಚ್ಯುತೇಂದ್ರನಾಗಿ: **ನೇಮಿನಾಪು,** ೪. ೧೬ ವ)

**ಸಾಂಪರಾಯಿಕ** – ಸಂಸಾರಕ್ಕೆ ಕಾರಣಭೂತವಾದ ಕರ್ಮಾಸ್ರವ (ಅದಲ್ಲದೆಯುಂ ಸಕಷಾಯಾಕಷಾಯರಪ್ಪ ಪ್ರಾಣಿಗಳ್ಗೆ ಸಾಮಾನ್ಯದಿಂ ಸಾಂಪರಾಯಿಕ ಈರ್ಯಾಪಥ ಕರ್ಮಾಸ್ರವಂಗಳಕ್ಕುಮೆಂದು ನಿಶ್ಚಯಿಸುವುದು: **ವರ್ಧಮಾಪು,** ೧೪. ೪೩ ವ)

**ಸಾಗರ** – ಒಂದು ಅತ್ಯಂತ ದೀರ್ಘ ಕಾಲಾವಧಿ; ಹತ್ತು ಕೋಟಾಕೋಟಿಪಲ್ಯೋಪಮ ಪರಿಮಿತಕಾಲ (ನರಕದೊಳ್ ಮೂಱು ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದು ಇಲ್ಲಿ ಕೊಂಕನಾಗಿ ಪುಟ್ಟಿ: **ವಡ್ಡಾರಾ,** ಪು ೧೭೮, ಸಾ ೨೭)

**ಸಾಗರಾಂತ** – ಸಾಗರ ಅವಧಿಯ ಕೊನೆ (ಸವಿ ನೋಟ್ಟಿಂ ಸಾಗರಾಂತಕ್ಕಸುರರ ನೆರಗೊಳ್ವಂ ತ್ರಿಪಲ್ಯಕ್ಕೆ ... ಇದೇಂ ನಿರ್ದಯನೋ ಸಾರ್ಧೈಕಪಲ್ಯಕ್ಕುಟಿದಱ ವರುಮಂ ನಂದೆವೊಯ್ವಂ ಕೃತಾಂತಂ: **ಮಲ್ಲಿನಾಪು,** ೧೩. ೭೮)

**ಸಾಗರೋಪಮ** – ಸಾಗರ ಅವಧಿಯುನ್ನುಳ್ಳ (ನರಕದೊಳ್ ಪದಿನೇೞು ಸಾಗರೋಪಮಂಬರಂ ... ದುಃಖಮನುಂಡು: **ಕರ್ಣನೇಮಿ,** ೧೪. ೧೨೫ ವ)

**ಸಾಗಾರ** – ಶ್ರಾವಕನ ಧರ್ಮ: ಗೃಹಸ್ಥಧರ್ಮ (ಸಾಗಾರಮನಾಗಾರಮೆಂದು ಧರ್ಮಮೆರಡು ತೆಱನಕ್ಕುಂ ಅಲ್ಲಿ ಸಾಗಾರಮೆಂಬುದು ದರ್ಶನ ವ್ರತ ಸಾಮಾಯಿಕ ಪ್ರೋಷಧೋಪವಾಸಿ ಭೇದದಿನೇಕಾದಶ ವಿಧಮಕ್ಕುಂ: **ಚಾವುಂಡಜಯ,** ಪು. ೩೭೩)

**ಸಾಗಾರಧರ್ಮ** – ಗೃಹಸ್ಥನ ಕರ್ತವ್ಯಗಳು (ನುತಕೌಶಾಂಬೀಶನಪ್ಪಾ ರಘು ಸುಮುಖಸುಖಂ ಸಾರ ಸಾಗಾರವ್ರತದಿಂದಂ ಪೆತ್ತು ದೇವತ್ವಮಂ: **ಕರ್ಣನೇಮಿ,** ೨. ೮೮); ಇದರಲ್ಲಿ ಮೂರು ಬಗೆ; ಗುಣವ್ರತ ಅಣುವ್ರತ ಮತ್ತು ಶಿಕ್ಷಾವ್ರತ (ಸಾಗಾರಧರ್ಮಮಣುಬ್ರತ ಗುಣಬ್ರತ ಶಿಕ್ಷಾಬ್ರತವಿಕಲ್ಪದಿಂ ಮೂಱು ಪ್ರಕಾರಂ: **ವರ್ಧಮಾಪು,** ೭. ೩ ವ)

**ಸಾಗಾರವ್ರತ** – ಸಾಗಾರಧರ್ಮ (ದಾನಕ್ಕುತ್ತಮ ಪಾತ್ರಸಂತತಿ ಮಹಾಪೂಜಾವಿಧಾನಕ್ಕೆ ಚೈತ್ಯಾನೀಕಂ ನಿಜಶೀಲವರ್ತನೆಗೆ ಸಾಗಾರವ್ರತವ್ರಾತಂ ... ತಾನಿದೆತ್ತಣಮಿಲ್ಲದೇಂ ನಿರತರೋ ಭೂಕಾಂತನುಂ ಕಾಂತೆಯುಂ: **ಚಂದ್ರಪ್ರಪು,** ೩. ೮೨)

**ಸಾತಾವೇದನೀಯ** – ಸಾತಾವೇದನೀಯ ಮತ್ತು ಅಸಾತಾವೇದನೀಯ ಎಂಬ ಎರಡು ಬಗೆಯ ವೇದನೀಯಕರ್ಮಗಳಲ್ಲಿ ಒಂದು, ಇಂದ್ರಿಯಜನ್ಯವಾದ ಸುಖವನ್ನುಂಟು ಮಾಡುವ ಕರ್ಮ (ವೇದನೀಯುಮುಂ ಸಾತಾವೇದನೀಯುಮುಂ ಅಸಾತಾವೇದನೀಯಮುಂ ಎಂದಿರ್ತೆಱನಕ್ಕುಂ: **ಶಾಂತಿಪು,** ೧೨. ೧೧ ವ)

**ಸಾಧಾರಣ** – ಹದಿನಾರು ಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು (ಪೂರ್ವೋಕ್ತವಿಧಾನದಿಂ ಅನಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾ ... ಸ್ಥವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಮ ಕರ್ಮಪ್ರಕೃತಿಗಳಂ ನಿಶ್ಶೇಷಂ ಕಿಡಿಸಿ): **ಆದಿಪು,** ೧೦. ೧೪ ವ)

**ಸಾಧುಜನ** – ಶ್ರವಣಸಮೂಹ (ವಿದ್ಯೋಪಶಮ ಗಂಭೀರ ಸ್ಥಿರವದಾನ್ಯತ್ವ ಸಾಧುಜನ ಸಹಾಯತಾದಿ ಗುಣನಿಧಾನನಂ ನಿನ್ನನ್ನನಂ ಮತ್ತೊರ್ವನನೆಲ್ಲಿಯುಂ ಕಂಡುಂ ಕೇಳ್ದುಮಱಿಯೆವು: **ಶಾಂತಿಪು,** ೩. ೭೫ ವ)

**ಸಾಧುಸಮಾಧಿ** – ಷೋಡಶಭಾವನೆಗಳಲ್ಲಿ ಒಂದು ಅನೇಕ ವ್ರತಶೀಲಸಮೃದ್ಧನಾದ ಮುನಿಯ ತಪಕ್ಕೆ ಏನಾದರೂ ತೊಡಕುಂಟಾದರೆ ಅದನ್ನು ನಿವಾರಿಸುವುದು (ತೀರ್ಥಕರ ಪುಣ್ಯಬಂಧ ಕಾರಣಂಗಳಪ್ಪ ದರ್ಶನವಿಶುದ್ಧಿ, ವಿನಯಸಂಪನ್ನತಾ, ಶೀಲವ್ರತೇಶ್ವರ, ಅನತಿಚಾರೋ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗೋ, ಶಕ್ತಿತಸ್ತ್ಯಾಗ, ತಪಃ, ಸಾಧುಸಮಾಧಿ, ವೈಯಾಪೃತ್ಯಕರಣಂ, ಅರ್ಹತ್, ಆಚಾರ್ಯ, ಬಹುಶ್ರುತಂ, ಪ್ರವಚನಭಕ್ತಿಃ, ಆವಶ್ಯಕಪರಿಹಾರಿಣಿ, ಮಾರ್ಗಪ್ರಭಾವನಾ, ಪ್ರವಚನವತ್ಸಳತ್ವಂ – ಎಂಬ ಷೋಡಶಭಾವನೆಗೊಳ್; **ಚಾವುಂಡಜಯ,** ಪು ೨೦೬)

**ಸಾಮಯಿಕ** – ಸಂಸಾರಕಾರಣಗಳನ್ನು ದೂರೀಕರಿಸಿ ಸಮ್ಯಕ್‌ಜ್ಞಾನವನ್ನು ಪಡೆಯಲು ಸಾಧಕವಾದ ಐದು ಬಗೆಯ ನಡವಳಿಕೆಗಳಲ್ಲಿ ಒಂದು (ನಿಯತಂ ತ್ರಿಸಂಧ್ಯೆಯೊಳ್ ಸಮತೆಯಿನರುಹತ್ಪೂಜೆಯಿಂದಮಿರ್ಪ್ಪಾತಂ ನಿಶ್ಚಯದಿಂ ಮೂಱನೆಯಂ ಸಾಮಯಿಕವ್ರತಧಾರಿ ಪೆಸರೊಳಂ ಸಾಮಯಿಕಂ: **ಸುಕುಮಾಚ,** ೬. ೨೮); (ಮೂವತ್ತೆರಡು ದೋಷಂಗಳಂ ಪತ್ತುವಿಟ್ಟು ... ಕಾಯೋತ್ಸರ್ಗಂ ಮಾಡುವ ಶುದ್ಧಬುದ್ಧಿಯಿಂ ಮೂಱು ಪೊತ್ತಿನೊಳಂ ದೇವತಾಸ್ತವವಿಧಿಯೋಳೆಸಗುವಾತಂ ಮೂಱನೆಯ ಶ್ರಾವಕಂ ಸಾಮಯಿಕಂ: **ಧರ್ಮಾಮೃತ,** ೫, ೧೧ ವ); ಹನ್ನೊಂದು

ಬಗೆಯ ನೆಲೆಗಳಲ್ಲಿ ಒಂದು, ಮುಂಜಾನೆ ಮಧ್ಯಾಹ್ನ ಮತ್ತು ಸಂಜೆಯಲ್ಲಿ ವಿಧಿಪೂರ್ವಕವಾಗಿ ಅರ್ಹತ್ಪೂಜೆಯನ್ನು ಮಾಡುವ ನೆಲೆ (ನಿಯತಂ ತ್ರಿಸಂಧ್ಯೆಯೊಳ್ ಸಮತೆಯಿನರುಹತ್ಪೂಜೆಯಿಂದಮಿರ್ಪಾತಂ ನಿಶ್ಚಯದಿಂ ಮೂಜಿನೆಯಂ ಸಾಮಯಿಕವ್ರತಧಾರಿ: **ಸುಕುಮಾಚ,** ೬. ೨೮); ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಮೂರನೆಯ ವರ್ಗಕ್ಕೆ ಸೇರಿದವನು (ಪೆಸರೊಳಂ ಸಾಮಯಿಕಂ; **ಸುಕುಮಾಚ,** ೬. ೨೮)

**ಸಾಮಾನಿಕ** – ದೇವತೆಗಳ ಹತ್ತು ಭೇದಗಳಲ್ಲಿ ಒಂದು; ಆಜ್ಞೆ ಐಶ್ವರ್ಯ ಇವುಗಳನ್ನು ಬಿಟ್ಟು ಸ್ಥಾನ ಆಯುಸ್ಸು ವೀರ್ಯ ಪರಿವಾರ ಭೋಗೋಪಭೋಗಾದಿಗಳಿಂದ ಇಂದ್ರನಿಗೆ ಸಮಾನರಾದವರು; ಮಂತ್ರಿ ಮಹತ್ತರ ಪಿತೃ ಗುರು ಪುರೋಹಿತಾದಿ ಬಂಧುವರ್ಗವನ್ನು ಕಳತ್ರವನ್ನು ಹೋಲುವವರು (ಅಂತಪರಿಮಿತಭಕ್ತಿಯಿನ ನೇಕಾರ್ಚನೆಗಳಿನರ್ಚಿಸಿ ದೇವಲೋಕಕ್ಕೆ ವಂದು ಚತುಸ್ಸಹಸ್ರಸಾಮಾನಿಕಕ ಸಮೇತನುಂ ... ಆಗಿ: **ಸುಕುಮಾಚ,** ೯. ೩೧ ವ)

**ಸಾಮಾನಿಕದೇವ** – ಸಾಮಾನಿಕ (ಎಂದು ಧೈರ್ಯಮಂ ಪತ್ತುವಿಟ್ಟು ಅತಿಪ್ರಲಾಪಂಗೆಯ್ವ ಲಲಿತಾಂಗದೇವನಂ ಸಾಮಾನಿಕದೇವರ್ಕೈದೆವಂದು: **ಆದಿಪು,** ೩. ೫ ವ)

**ಸಾಮಾಯಿಕ** – ಸಮ್ಯಕ್‌ಜ್ಞಾನ ಸಾಧನೆಗೆ ಪೂರಕವಾದ ನಡವಳಿಕೆ (ಅಂತು ಸರ್ವಸಾವದ್ಯವಿರತಿಯೊಳ್ ಸಾಮಾಯಿಕವ್ರತಸಮಿತಿ ಗುಪ್ತಿಸಮನ್ವಿತಮನವಲಂಬಿಸಿ ನಿಲ್ವುದುಂ: **ಅಜಿತಪು,** ೬. ೧೨೬ ವ), ನೋಡಿ, **'ಪಂಚವಿಧಚಾರಿತ್ರ'**

**ಸಾಮಾಯಿಕಚ್ಛೇದ** – ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಸಂಸಾರವನ್ನು ದೂರೀಕರಿಸಿ ಆತ್ಮಧ್ಯಾನದಲ್ಲಿರುವುದು (ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಾಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಸಾಮಾಯಿಕವ್ರತ** – ನಾಲ್ಕು ಬಗೆಗಳಲ್ಲಿನ ಒಂದು ಶಿಕ್ಷಾವ್ರತ (ಪರಿಕಿಪೊಡಸ್ಮರಣಮ ನಾದರಂ ಮನೋವಾಕ್ಯಶರೀರ ದುಷ್ಪ್ರಣಿಧಾನಂ ನಿರುಪಮಶಿಕ್ಷಾವ್ರತದೊಳ್ ನಿರುದ್ಧ ಸಾಮಾಯಿಕಕೃತಿಚಾರಂ: **ಸುಕುಮಾಚ,** ೬. ೨೧)

**ಸಾಮ್ರಾಜ್ಯ** – ಒಂದು ಗರ್ಭಾನ್ವಯಕ್ರಿಯೆ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ... ಚಕ್ರಾಭಿಷೇಕ ಸಾಮ್ರಾಜ್ಯ ಪರಿನಿಷ್ಕ್ರಮಣ ... ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ಸಾಮ್ರಾಜ್ಯಕ್ರಿಯೆ** – ಸಾಮ್ರಾಜ್ಯ (ಪುರಪ್ರಭೃತಿಗಳು ಪಾದಾಭಿಷೇಕಂಗೆಯ್ದು ಪಾದಾರ್ಚನೆಯಂ ತಲೆಯೊಳ್ ತಾಳ್ದಿ ಶ್ರೀದೇವಿಯರುಂ ವಿಶ್ವೇಶ್ವರಾದೇವಿಯರುಂ ತಂತಮ್ಮ ನಿಯೋಗದೊಳೋಲಗಿಸೆ ಸುಖಮಿರ್ಪುದು ಸಾಮ್ರಾಜ್ಯಕ್ರಿಯೆ: **ಚಾವುಂಡಜಯ,** ಪು ೧೮೬)

**ಸಾರಸ್ವತ** – ಎಂಟು ಬಗೆಯ ಲೋಕಾಂತಿಕ ದೇವರಲ್ಲಿ ಒಂದು ವರ್ಗ (ಬ್ರಹ್ಮಕಲ್ಪಾಂತವಾಸಿಗಳುಮಪ್ಪ ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ದತೋಯ ತುಷಿತ ಅವ್ಯಾಬಾಧಿತ ಅರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು: **ಆದಿಪು,** ೯. ೬೦ ವ)

**ಸಿಂಹನಿಷ್ಕ್ರೀಡಿತ** – ಎಂಬತ್ತು ದಿನಗಳಲ್ಲಿ ಅರುವತ್ತು ಉಪವಾಸ ಮತ್ತು ಇಪ್ಪತ್ತು ಪಾರಣೆಗಳನ್ನು ಮಾಡುವ ವ್ರತ (ತಕ್ಕ ಪ್ರಾಯಶ್ಚಿತ್ತಮಂ ಕೊಂಡು ಸಿಂಹನಿಷ್ಕ್ರೀಡಿತಮೆಂಬ ನೋಂಪಿಯಂ ನೋಂತು ವಿಹಾರಿಸುತ್ತುಂ: **ವಡ್ಡಾರಾ,** ಪು ೧೭೨, ಸಾ ೧೨)

**ಸಿಂಹವಾಹಿನಿ** – ಭರತ ಚಕ್ರವರ್ತಿಯ ಹಾಸಿಗೆಯ ಹೆಸರು (ಸಿಂಹವಿಧೃತಮಪ್ಪ ನಿಂಹವಾಹಿನಿಯೆಂಬ ಮೃದುಶಯ್ಯೆಯುಂ ಅನುತ್ತರೆಯೆಂಬ ಸಿಂಹಾಸನಮುಂ: **ಆದಿಪು,** ೧೫. ೩ ವ); ಒಂದು ಬಗೆಯ ವಿದ್ಯೆ (ಗರುಡಾಧಿಪನಪ್ಪ ಮಹಾಲೋಚನನಱಿದು ಬಹುವಿದ್ಯಾ ಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬೆರಡು ವಿದ್ಯೆಗಳುಮಂ ದಿವ್ಯಾಸ್ತ್ರಂಗಳನುಯ್ದು: **ಪಂಪರಾ,** ೧೫೬. ವ)

**ಸಿಂಹವಿಕ್ರೀಡಿತ** – ಸಿಂಹನಿಷ್ಕ್ರೀಡಿತ (ಜಿನೇಶ್ವರರೂಪಮಂ ತಾಳ್ದಿ ಸರ್ವತೋಭದ್ರ ಸಿಂಹವಿಕ್ರೀಡಿತಂಗಳೆಂಬ ತಪದೊಳ್ ನೆಗಟ್ದು: **ಆದಿಪು,** ೩. ೫೭)

**ಸಿದ್ಧ** – ಪಂಚಪರಮೇಷ್ಠಿಗಳಲ್ಲಿ ಒಬ್ಬ, ಸಿದ್ಧಶಿಲೆಯಲ್ಲಿ ಶಾಶ್ವತವಾಗಿ ನೆಲೆಸಿದವನು (ಉದ್ಧೂತಲೇಪರ್ ಪ್ರಣುತರ್ ನಿತ್ಯರ್ ಜಗನ್ಮಂಗಳನಿಳಯರ್ ಅನಂತರ್ ತ್ರಿಲೋಕ ಚೂಡಾಮಣಿಗಳ್ ಸಿದ್ಧರ್: **ಆದಿಪು,** ೧. ೨)

**ಸಿದ್ಧಕೂಟ** – ಸಿದ್ಧಕ್ಷೇತ್ರ, ಸಿದ್ಧರು ನೆಲೆಸಿರುವ ಸ್ಥಳ (ಕೈಳಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮೀ ದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ:**ಆದಿಪು,** ೧೬. ४೦ ವ)

**ಸಿದ್ಧಕ್ಷೇತ್ರ** – ಸಿದ್ಧಕೂಟ, ಸಿದ್ಧರಿರುವ ಸ್ಥಳ (ಕೌಶಂಬಿಗೆ ವಂದು ಉದಯಾವತ ಪರ್ವತದೊಳ್ ಸಿದ್ಧಕ್ಷೇತ್ರಂಗಳೆಲ್ಲಮಂ ಬಂದಿಸಿ ತೀರ್ಥೋಪವಾಸಂಗೆಯ್ದು: **ವಡ್ಡಾರಾ,** ಪು ೭. ಸಾ ೪)

**ಸಿದ್ಧಗುಣ** – ಮುಕ್ತ ಜೀವರಿಗಿರುವ ಎಂಟು ಗುಣಗಳು: ಸಮ್ಯಕ್ತ್ವ, ಅನಂತದರ್ಶನ, ಅನಂತಜ್ಞಾನ, ಅನಂತವೀರ್ಯ, ಸೂಕ್ಷ್ಮತ್ವ, ಅವಗಾಹಿತ್ವ, ಅವ್ಯಾಬಾಧತ್ವ ಮತ್ತು ಅಗುರುಲಘುತ್ವ (ಅರ್ಹದ್ಭಟ್ಟಾರಕರ ಸಿದ್ಧಸ್ವರೂಪಮಂ ಗುಣಂಗಳುಮಂ ಅಱಿದು: **ವಡ್ಡಾರಾ,** ಪು. ೬. ಸಾ. ೨೧)

**ಸಿದ್ಧನಿಲಯ** – ಸಿದ್ಧಕ್ಷೇತ್ರ (ಮೂಱುಲೋಕದಿಂ ಮೇಲೆ ಬೆಳ್ಗೊಡೆಯಿರ್ಪಂತೆವೊಲಿರ್ದ ಸಿದ್ಧನಿಲಯಕ್ಕಾನಂದದಿಂ ಪೋಗಿ: **ಪಂಪರಾ,** ೧೬. ೮೨)

**ಸಿದ್ಧಪದ** – ಮೋಕ್ಷ (ಸಿದ್ಧಪದಮಂ ಕೈಕೊಳ್ಳುವದಕಡ್ಡಂ ಒಡ್ಡಣಮೊಡ್ಡಿರ್ದಘಸೈನ್ಯಮಂ ತುಟಿಯಿಸಲ್; **ಶಾಂತಿಪು,** ೧. ೭)

**ಸಿದ್ಧಪರಮೇಷ್ಠಿ** – ಪಂಚಪರಮೇಷ್ಠಿಗಳಲ್ಲಿ ಒಬ್ಬ (ವಿದ್ಯೆಗಳಂ ಸಾಧಿಸಿ ಸಿದ್ಧಪರಮೇಷ್ಠಿಗಳಷ್ಟ ಗುಣಂಗಳಂ ನೆನೆಯುತ್ತಂ: **ಆದಿಪು,** ೧೦. ೧೪ ವ)

**ಸಿದ್ಧಶಿಲೆ** – ಸಿದ್ಧರು ನೆಲಸುವ ಬೆಟ್ಟ (ಸಾವಂ ರಾವಣನೆಂದರ್ ಕೇವಲಿಗಳ್ ಸಿದ್ಧಶಿಲೆಯನುದ್ಧರಿಸಿದ ಶೌರ್ಯಾವಷ್ಟಂಭದಿನದು ಪುಸಿಸಾವಾದುದು ನಿನಗೆ ವೈರಿಶಸ್ತ್ರಾಹತಿಯಿಂ: **ಪಂಪರಾ,** ೧೪. ೪೫)

**ಸಿದ್ಧಶೇಷೆ** – ನಿರ್ಮಾಲ್ಯ ಮುಂತಾದ ಪೂಜಿಸಿದ ವಸ್ತುಗಳು (ಮಾರಮಥನನಂ ಸ್ತುತಿಯಿಸಿ ತತ್ಪ್ರಕಟಫಲಪ್ರಾಪ್ತಿಗೆ ಸಂಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ಕೊಂಡು: **ಆದಿಪು,** ೪. ೨)

**ಸಿದ್ಧಶೈಲ** – ಸಿದ್ಧಶಿಲೆ (ನಿನಗೆ ಸಿದ್ಧಶೈಲಮನೆತ್ತಿದನ ಕೈಯೊಳ್ ಮರಣಮಕ್ಕುಂ: **ಪಂಪರಾ,** ೧೧. ೭ ವ)

**ಸಿದ್ಧಸೇಸೆ** – ಸಿದ್ಧಶೇಷೆ (ಶ್ರೀಜಿನಪತಿಪದಕಮಳವಿರಾಜಿತಮಂ ಸಿದ್ಧಸೇಸೆಯಂ ತಳೆದನಿಳಾಪೂಜಿತಚರಿತಂ ಸಕಳಕಳಾ ಜನ್ಮಾವಾಸನೆನಿಸಿದನಭಿನವಪಂಪಂ: **ಮಲ್ಲಿನಾಪು,** ೧೧. ೧)

**ಸಿದ್ಧಸ್ವರೂಪ** – ಆತ್ಮವು ಎಂಟು ಕರ್ಮಗಳನ್ನು ನಾಶಪಡಿಸಿ ಎಂಟು ಗುಣಗಳನ್ನು ಪ್ರಕಟಪಡಿಸುವುದು (ಅರ್ಹದ್ಭಟ್ಟಾರಕರ ಸಿದ್ಧಸ್ವರೂಪಮಂ ಗುಣಂಗಳುಮಂ ಅಱಿದು: **ವಡ್ಡಾರಾ,** ಪು. ೬. ಸಾ. ೨೧)

**ಸಿದ್ಧಾಂತಮಾರ್ಗ** – ಶಾಸ್ತ್ರಗ್ರಂಥ (ತತ್ ಆನನ ಪ್ರೋದ್ಭೂತಂ ಸಿದ್ಧಾಂತಮಾರ್ಗಂ: **ಸುಕುಮಾಚ,** ೫. ೩೯)

**ಸಿದ್ಧಾಧಿಷ್ಠಾನಪೀಠ** – [ಸಿದ್ಧ+ಅಧಿಷ್ಠಾನಪೀಠ] ಸಿದ್ಧರು ಮಾತ್ರ ಏರಲು ಸಾಧ್ಯವಾಗುವ ಪೀಠ (ಅಭಿಷೇಕವಿಧಿಯಂ ನಿರ್ವರ್ತಿಸಿ ವಿಶದಯಶಸ್ಸಿದ್ಧಾಧಿಷ್ಠಾನಪೀಠಮೆನಿಪ ಮಜ್ಜನಪೀಠಮಂ ಅಧಿಷ್ಠಿಸಿದಾಗಳ್: **ಆದಿಪು,** ೮. ೬೯ ವ

**ಸಿದ್ಧಾಯತನ** – ಸಿದ್ಧಕ್ಷೇತ್ರ, ಜಿನಗೃಹ (ಪಣಮಂ ... ಕುಡುವುದು ಸಿದ್ಧಾಯತನಕ್ಕೆ ಭವ್ಯಸಮಿತಿಗೆ ಚದುರಂ: **ಸಮಯಪ,** ೭. ೬೭)

**ಸಿದ್ಧಾರ್ಥವೃಕ್ಷ** – ಕಲ್ಪವೃಕ್ಷ (ಸಿದ್ಧಾರ್ಥವೃಕ್ಷ ಪರಿಭ್ರಾಜಿತಮಪ್ಪ ಮಧ್ಯಪ್ರದೇಶಮಂ ಏಕಯೋಜನವಿಷ್ಕಂಭಮುಮಾಗಿ: **ಆದಿಪು,** ೧೦. ೩೩ ವ)

**ಸೀಮಂಕರ** – ಒಬ್ಬ ಮನು, ಆರ್ಯಕುಲದವರ ಸೀಮಾ ವಿವಾದವನ್ನು ಬಗೆಹರಿಸಿದವನು. ಸೀಮೆಯನ್ನು ಗುರುತಿಸಿದವನು (ಸೀಮಾವಿವಾದದಿಂ ತದ್ಭೂಮಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ: **ಆದಿಪು,** ೬. ೫೭

**ಸುಖೋದಯ** – ಒಂದು ಗರ್ಭಾನ್ವಯಕ್ರಿಯೆ, ದೇವತೆಗಳಿಂದ ಸುತ್ತುವರಿಯಲ್ಪಟ್ಟು ದಿವ್ಯಸುಖವನ್ನು ಅನುಭವಿಸುವುದು (ಸುಖೋದಯ ... ಅಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ); ಆನಂದದ ಪ್ರಾರಂಭ (ಮನದಜೀವಂ ಕಳಲ್ಚುವರತಾಂತಸುಖೋದಯದಿಂದೆ ನಿದ್ರೆಯಂ ನೆನೆಯದೆ: **ಚಂದ್ರಪ್ರಪು,** ೬. ೮೫)

**ಸುಖೋದಯಕ್ರಿಯೆ** – ಹಲವು ಕಾಲ ಸುರಲೋಕಸುಖವನ್ನು ಅನುಭವಿಸುವುದು (ಪಲಕಾಲಂ ಸುರಲೋಕ ಸುಖಮನನುಭವಿಸುವುದು ಸುಖೋದಯಕ್ರಿಯೆ: **ಚಾವುಂಡಜಯ,** ಪು. ೧೮೫)

**ಸುಗತಮತ** – ಬೌದ್ಧಮತ (ಸುಗತಮತಕ್ಕೆಣೆಯೆನೆ ಶೌಚಗುಣಂ ಕ್ಷಣಿಕಂ ಸಗರ್ವಚಾರ್ವಾಕಮತಕ್ಕೆ ಗಡೆಣೆಯೆಂದನೆ ಪೆಂಡಿರ ನೆಗಟ್ತೆ ಪರಲೋಕ ಸೌಖ್ಯಘಾತುಕಮಲ್ತೇ: **ಪಾರ್ಶ್ವನಾಪು,** ೩. ೧೦೮)

**ಸುಗತಿ** – ಮೋಕ್ಷ (ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನ ಪದಪ್ರತಿಕೂಳವೃತ್ತಿ: **ಮಲ್ಲಿನಾಪು,** ೧೨. ೧೨೫)

**ಸುಚಿತ್ತವಿರತ** – ಶ್ರಾವಕರ ಹನ್ನೊಂದು ವರ್ಗಗಳಲ್ಲಿ ಐದನೆಯ ವರ್ಗಕ್ಕೆ ಸೇರಿದವನು (ಕುಸುಮ ಫಳ ಕಂದ ಮೂಲಪ್ರಸರಂಗಳನಗ್ನಿಪಕ್ವಮಲ್ಲದುವನಪೇಕ್ಷಿಸಿ ಕೊಳ್ಳದಯ್ದನೆಯಂ ಪೆಸರಿಂದಾತಂ ಸುಚಿತ್ತವಿರತನೆನಿಕ್ಕುಂ: **ಸುಕುಮಾಚ,** ೬. ೩೦)

**ಸುದರ್ಶನ** – ಭರತನ ಹದಿನಾಲ್ಕು ಅಜೀವರತ್ನಗಳಲ್ಲಿ ಒಂದಾದ ಚಕ್ರರತ್ನದ ಹೆಸರು (ಆ ಸುದರ್ಶನಮೆಂಬ ಚಕ್ರರತ್ನಮಂ ಪೂಜಿಸಿಂ ಬೞಿಯಂ: **ಆದಿಪು,** ೧೧. ೩ ವ)

**ಸುದೇಶಿಕ** – ಶ್ರೇಷ್ಠ ಆಚಾರ್ಯ (ಸಕಲಲೋಕತತ್ತ್ವ ಸುದೇಶಿಕನುಂ ಲೋಕಾಗ್ರಗತ ಅಷ್ಟಕರ್ಮ ನಿರ್ಮುಕ್ತಶುದ್ಧನುಂ ತಾನಾಪ್ತಂ: **ಸಮಯಪ,** ೧. ೬೮)

**ಸುಪಾತ್ರದಾನ** – ಯೋಗ್ಯನಿಗೆ ನೀಡುವ ದಾನ (ಫಳಮುಂ ಸುಪಾತ್ರದಾನದ ಫಳಮೆ ದಲ್ ಉತ್ಕೃಷ್ಟಂ ಭೋಗಭೂಮಿಯೊಳಂ: **ಆದಿಪು,** ೧೦. ೧೦)

**ಸುಪ್ರಣೆಧಿ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಸುಪ್ರತಿಕ್ರಿಯೆ** – ಗರ್ಭಿಣಿಗೆ ಐದನೆಯ ತಿಂಗಳು ಮಾಡಬೇಕಾದ ಮಂಗಳಕ್ರಿಯೆ (ಬೞಿಯುಮ್ಮೈದನೆಯ ತಿಂಗಳ್ ಉಪಾಸಕರಿಂ ಮಂತ್ರವೇಧಿಗಳನಗ್ನಿ ಸಾಕ್ಷಿಯೊಳ್ಮುನ್ನಿನಂತೆ ವಿಧಿಪೂರ್ವಕದಿಂ ವಿಧಿಯಿಸುವುದು ಸುಪ್ರತಿಕ್ರಿಯೆ: **ಚಾವುಂಡಜಯ,** ಪು. ೧೮೧)

**ಸುಪ್ರತಿಷ್ಠ** – ಅರವತ್ತುಮೂರು ಇಂದ್ರಕ[ವಿಮಾನ]ಗಳಲ್ಲಿ ಒಂದು (ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ ... ಎಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಮಂ ಪಿಡಿಯಲುಂ: **ಆದಿಪು,** ೭. ೩ ವ)

**ಸುಪ್ರತಿಷ್ಠಕ** – ಮಂಗಳದ್ರವ್ಯಗಳ ಪಾತ್ರೆ (ಅದು ಅನಾದ್ಯನಿಧನಗುಣಯುತಂ ಅದು ಅಕೃತ್ರಿಮಮಂ ಅದು ಮರುತ್ತ್ರಿಕಾವೇಷ್ಟಿತಂ ಅಂತದು ಸುಪ್ರತಿಷ್ಠಕೋಪಮಮಂ ಅದು ಜಿನಮತದೊಳ್ ದ್ವಿಸಪ್ತರಜ್ಜೂತ್ಸೇಧಂ: **ಆದಿಪು,** ೧. ೪೪)

**ಸುಪ್ರತಿಷ್ಠೆ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಸುಪ್ರತೀಕಪತಿ** – ಈಶಾನಕಲ್ಪದ ಒಡೆಯ (ಸಮೆಯಿಸಿದ ವಿಶಾಲಕ್ರೀಡಶಾಲೆಗಳೆನಿಸಿದ ಚೆಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ ಪೊಗಟ್ಟು: **ಶಾಂತಿಪು,** ೩. ೧೯ ವ)

**ಸುಪ್ರಬುದ್ಧ** – ಅರವತ್ತುಮೂರು ಇಂದ್ರಕ[ವಿಮಾನ]ಗಳಲ್ಲಿ ಒಂದು (ಸುಪ್ರಬುದ್ಧ ರುಂದ್ರವಿಮಳ ರುಚಿ ರುಚಿಕೋತ್ತರ ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ ... ಎಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಮಂ ಪಿಡಿಯಲುಂ: **ಆದಿಪು,** ೭. ೩ ವ)

**ಸುಪ್ರಬುದ್ಧೆ** – ರುಚಿಕಾಚಳದಲ್ಲಿ ವಿಹರಿಸುವ ಎಂಟು ಮಂದಿ ದಿಗಂಗನೆಯರಲ್ಲಿ ಒಬ್ಬಳು (ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಸುಪ್ರಭ** – ಒಂದು ವಿಮಾನದ ಹೆಸರು (ಕಮಳಪ್ರಭೆಯುಂ ಸುಪ್ರಭವಿಮಾನದೊಳ್ ವಿಮಲಪ್ರಭನೆಂಬ ದೇವನಾದಳ್: **ನೇಮಿನಾಪು,** ೪. ೮ ವ)

**ಸುಪ್ರಾಸುಕ** – ಜೀವಜಂತುಗಳಿಲ್ಲದೆ ಶುದ್ಧವಾಗಿರುವ ಪ್ರದೇಶ (ಮಹಾಕಾಳದೊಳ್ ಸುಪ್ರಾಸುಕ ಪ್ರದೇಶಮಂ ಕಂಡು ಯೋಗಯೋಗ್ಯಪ್ರದೇಶಮಪ್ಪುದದೆಂದು ಏಕಾಗ್ರಚಿತ್ತದೊಳ್ ಏಕ ಪಾರ್ಶ್ವದೊಳ್ ಮೆಯ್ಯನಿಕ್ಕಿ: **ಸುಕುಮಾಚ,** ೧೨. ೧೮ ವ)

**ಸುಪ್ರೀತಿ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಗರ್ಭಿಣಿಗೆ ಐದನೆಯ ತಿಂಗಳಲ್ಲಿ ಮಾಡುವ ಒಂದು ಸಂಸ್ಕಾರ (ಪ್ರೀತಿ ಸುಪ್ರೀತಿ ಧೃತಿ ... ಲಿಪಿಸಂಖ್ಯಾನಸಂಗ್ರಹ ಉಪನಯನಬ್ರತಚರ್ಯ ... ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಸುಮೇರುಮೇಖಳೆ** – ಮೇರುಪರ್ವತದ ತಪ್ಪಲು (ನಮೇರುಭೂಜಮಂ ತಳೆದ ಸುಮೇರುಮೇಖಳೆ ಸುಧಾರಸಮಂ ತಳೆದೋಷಧೀಶನಿರ್ಮಳಕಳೆ ... ಎಂಬ ಲೀಲೆಯಿಂ ತಳೆದಳಿಳಾಧಿರಾಣ್ಮಹಿಳೆಯಂದು ಜಿನಾರ್ಭಕನಂ ಸ್ವಗರ್ಭದೊಳ್: **ಚಂದ್ರಪ್ರಪು,** ೧೨. ೨೮)

**ಸುರದುಂದುಭಿ** – ಅಷ್ಟಮಹಾಪ್ರತಿಹಾರ್ಯಗಳಲ್ಲಿ ಒಂದು, ದೇವದುಂದುಭಿರವ (ಪ್ರಕಟಯಶೋದುಂದುಭಿ ಸಿಂಹಾಸನ ಸುರದುಂದುಭಿಪತಿಚರಣ ಕಮಲಭೃಂಗಂ ಪಂಪಂ: **ಆದಿಪು,** ೧. ३३)

**ಸುರಭೂಧರ** – ಮೇರುಪರ್ವತ (ಸುರಭೂಧರಮಂ ಬೆಳ್ಳಿಯ ಗಿರಿಗಳ್ ಬಳಸಿರ್ದುವೆನಿಸಿ ಚೆಂಬೊನ್ನ ರಥೋತ್ಕರಮಂ ಸುತ್ತಿರ್ದುವು ಕರಮೊಪ್ಪಿರೆ ಖಚರರಾಜರೆಸೆವ ವಿಮಾನಂ: **ಧರ್ಮಾಮೃ,** ೮. ೧೩೮)

**ಸುರಭೂರುಹ** – ಕಲ್ಪವೃಕ್ಷ (ಸುರಭೂರುಹದ ಅಗೆಯನಿಡಲ್ ಪರಿಜನದಭಿಜನದ ಗೇಹದೊಳ್ ಬಯಸಿದಳ್ ಆ ಸರಸಿಜವಾಣಿ ಗರ್ಭಸ್ಥನ ಪರಮೌದಾರ್ಯ ಪ್ರಭಾವಮಂ ಪ್ರಕಟಿಪವೊಳ್: **ಮಲ್ಲಿನಾಪು,** ೪. ೬೯)

**ಸುರಲೋಕಾವತರೋತ್ಸವ** – ತೀರ್ಥಂಕರರ ಗರ್ಭಾವತರಣಕಲ್ಯಾಣ (ಸುರಲೋಕಾವತರೋತ್ಸವಂ ಜನ್ಮಾಭಿಷೇಕೋತ್ಸವಂ ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯಬೋಧೋತ್ಸವಂ ಪರಿನಿರ್ವಾಣಮಹೋತ್ಸವಂ ಜಿನಮಹಾಕಲ್ಯಾಣಮೈದುಂ ಸವಿಸ್ತರದಿಂದಿರ್ಪುವು ವರ್ಣಗಂಗಳಿವಜೆಂ ಭವ್ಯಾಂಗಮೇನೊಪ್ಪದೇ: **ಅಜಿತಪು,** ೧. ೯೫)

**ಸುರಾಂಗ** – ದಶಕಲ್ಪಕುಜಗಳಲ್ಲಿ ಒಂದು, ಮಾದಕ ಪಾನೀಯಗಳನ್ನು ನೀಡುವಂಥದು (ವಸನಾಂಗ ಆತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗ ಅನ್ನಾಂಗ ಸುರಾಂಗ ಭಾಜನಾಂಗ ಅವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ ಸೊಗಯಿಸುವುವು: **ಚಂದ್ರಪ್ರಪು,** ३. ३೪)

**ಸುರಾಚಲ** – ಮೇರುಪರ್ವತ (ನಾಕಪತಿ ಪೇಟಿ ಸುರಾಚಲದಿಂ ಸುರಾರ್ಣವಂಬರಮ ಮರಾದ್ರಿ ನೀಳ್ದು ಗೆಲೆವಂದುದು ಜಂಗಮಸೇತುಬಂಧಮಂ: **ಅಜಿತಪು,** ೪. ೪೫)

**ಸುರೇಂದ್ರಕಾಂತೆ** – ಸೌಧರ್ಮೇಂದ್ರನ ಮಡದಿ, ಶಚೀದೇವಿ (ಇರ್ಬರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃಪ್ರೀತಿಯಿಂ: **ಆದಿಪು,** ೭. ೪೪)

**ಸುರೇಂದ್ರತ್ವ** – ಸಪ್ತ ಪರಮಸ್ಥಾನಗಳಲ್ಲಿ ಒಂದು, ಇಂದ್ರಪದವಿ (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ)

**ಸುರೇಶ್ವರ** – ದೇವೇಂದ್ರ (ಸುರೇಶ್ವರಂ ವಿಲೋಕನದಿಂ ... ಬೆರೆದರದೇಂ ಸಲೆ ಮೇಘರಥಂ ಸಪುಣ್ಯನೋ: **ಶಾಂತಿಪು,** ೯. ೪३)

**ಸುವ್ರತ** – ಇಪ್ಪತ್ತನೆಯ ತೀರ್ಥಂಕರರ ಹೆಸರು (ದೇವರ ದೇವಂ ಕುಡುಗೆ ಸುವ್ರತಂ ಸುವ್ರತಮಂ: **ಯಶೋಧಚ**, ೧. ೧)

**ಸುಷಮ** – ಅವಸರ್ಪಿಣಿಯ ಒಂದು ಹಂತ, ಸಮೃದ್ಧಿಯ ಕಾಲ (ಮಧ್ಯಮಭೋಗ ಭೂಮಿಸ್ಥಿತಿಯೊಳ್ ಮೂಱು ಕೋಟಾಕೋಟಿ ಸಾಗರೋಪಮ ಪ್ರಮಾಣಂ ಸುಷಮಮೆಂಬ ಕಾಲಮುಂ: **ಆದಿಪು**, ೬. ೪೮ ವ)

**ಸುಷಮದುಷ್ಷಮ** – ಅವಸರ್ಪಿಣಿಯ ಒಂದು ಹಂತ, ಕಡಿಮೆ ದುಃಖದ ಕಾಲ (ಜಘನಭೋಗಭೂಮಿಸ್ಥಿತಿಯೊಳು ಎರಡು ಕೋಟಾಕೋಟಿ ಸಾಗರೋಪಮ ಪ್ರಮಾಣಂ ಸುಷಮದುಷ್ಷಮಮೆಂಬ ಕಾಲಮುಂ: **ಆದಿಪು**, ೬. ೪೮ ವ)

**ಸುಷಮಸುಷಮ** – ಅವಸರ್ಪಿಣಿಯ ಒಂದು ಹಂತ, ತುಂಬ ಸುಖದ ಕಾಲ (ಉತ್ತಮಭೋಗಭೂಮಿಯೊಳ್ ನಾಲ್ಕುಕೋಟಿಕೋಟಿ ಸಾಗರೋಪಮಪ್ರಮಾಣಂ ಸುಷಮಸುಷಮಮೆಂಬ ಕಾಲಮುಂ: **ಆದಿಪು**, ೬. ೪೮ ವ)

**ಸೂಕ್ಷ್ಮಕಾಯಯೋಗ** – ಪಾಪವಿಹರಣಾತ್ಮಕ ಕ್ರಿಯೆಯಿಲ್ಲದೆ ಪದ್ಮಾಸನದಿಂದಲೇ ಗಮನಕ್ರಿಯೆಯ ಸಾಗುವಿಕೆ (ಯತಿ ವೃಷಭಸಹಿತಂ ಪ್ರತಿಮಾಯೋಗದೊಳ್ ನಿಂದು ಸೂಕ್ಷ್ಮಕಾಯಯೋಗದಿಂ ... ಲೋಕಪೂರಣಕ್ರಿಯೆಗಳೊಳನಂತರ ಪ್ರತಿಸಮಯಂಗಳಂ ಮಾಡಿ: **ವರ್ಧಮಾಪು**, ೧೬. ೧೬ ವ)

**ಸೂಕ್ಷ್ಮಕ್ರಿಯಾಪ್ರತಿಪತ್** – ಹದಿನಾಲ್ಕನೆಯ ಗುಣಸ್ಥಾನದ ಮೂರನೆಯ ಶುಕ್ಲಧ್ಯಾನ (ಯೋಗಸೂಕ್ಷ್ಮಕಾಯ ಯೋಗ ಪರಿಣತಂ ಉಪಯೋಗಪರಿಕಲ್ಪಿತ ಸೂಕ್ಷ್ಮಕ್ರಿಯಾ ಪ್ರತಿಪಾತ್ಯಭಿಧಾನ ತೃತೀಯ ಶುಕ್ಲಧ್ಯಾನ ಪರಾಯಣಂ: **ಆದಿಪು**, ೧೬. ೪೯ ವ)

**ಸೂಕ್ಷ್ಮತ್ವ** – ಸಿದ್ಧಪರಮೇಷ್ಠಿಗಳ ಅಷ್ಟಗುಣಗಳಲ್ಲಿ ಒಂದು, ಬುದ್ಧಿಯ ಚುರುಕುತನ (ಸಮ್ಯಕ್ ಜ್ಞಾನ ದರ್ಶನ ಅನಂತವೀರ್ಯ ಸೂಕ್ಷ್ಮತ್ವ ಅಗುರುಲಘುತ್ವ ಅವಗಾಹ ಅವ್ಯಾಬಾಧಗಳೆಂಬ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ನೆನೆಯುತ್ತುಂ: **ಆದಿಪು**, ೧೦. ೧೪ ವ)

**ಸೂಕ್ಷ್ಮಲೋಭ** – ಹತ್ತನೆಯ ಗುಣಸ್ಥಾನದಲ್ಲಿರುವ ಅತ್ಯಂತ ಮಂದಕರವಾದ ಲೋಭಕಷಾಯ (ಸೂಕ್ಷ್ಮಸಾಂಪರಾಯಸ್ಥಾನ ಪ್ರವಿಷ್ಟಕ್ಷಪಕಂ ಯಥೋಕ್ತ ಪರಿಣಾಮದಿಂ ಸೂಕ್ಷ್ಮಲೋಭಕ್ಕೆ ವಿಳಯಂ ಮಾಡಿ: **ವರ್ಧಮಾಪು**, ೧೩. ೩೨ ವ)

**ಸೂಕ್ಷ್ಮಸಾಂಪರಾಯ** – ಹತ್ತು ಗುಣಸ್ಥಾನಗಳಲ್ಲಿ ಕೊನೆಯದು, ಐದು ಬಗೆಯ ನಡವಳಿಕೆಗಳಲ್ಲಿ ಒಂದು, ಸೂಕ್ಷ್ಮ ಕಷಾಯನಾಶ (ಸಮ್ಯಕ್ಚಾರಿತ್ರಮೆಂಬುದು ಅದು ಸಾಮಾಯಿಕಚ್ಛೇದ ಉಪಸ್ಥಾಪನಾ ಪರಿಹಾರಶುದ್ಧಿ ಸೂಕ್ಷ್ಮಸಂಪರಾಯ ಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಂ: **ಆದಿಪು**, ೧೦. ೬೩ ವ)

**ಸೂಕ್ಷ್ಮಸಾಂಪರಾಯಕೃಷ್ಟಿ** – ಹತ್ತನೆಯ ಗುಣಸ್ಥಾನಕ್ಕೇರಿದ ನಂತರ ಉಳಿಯುವ ಸೂಕ್ಷ್ಮಸಂಜ್ವಲನಲೋಭವೆಂಬ ಕಷಾಯವನ್ನು ನಾಶಮಾಡುವುದು (ಯಥೋಕ್ತ

ಪರಿಣಾಮದಿಂ ಸೂಕ್ಷ್ಮಸಾಂಪರಾಯಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತ ಕಾಲದಿಂ ಬಾದರಲೋಭಸಂಜ್ವಲನಮಂ ಕಿಡಿಸಿ: **ಆದಿಪು,** ೧೦. ೧೪ ವ)

**ಸೂಕ್ಷ್ಮಸಾಂಪರಾಯಕ್ಷಪಕ** – ಕ್ಷಪಕಶ್ರೇಣಿಯನ್ನು ಏರಿ ಹತ್ತನೆಯ ಗುಣಸ್ಥಾನದಲ್ಲಿರುವ ಆತ್ಮ (ಶುದ್ಧಿಸಂಯಮಾನುಗತಾನುವೃತ್ತಿ ಗುಣಸ್ಥಾನನಾಗಿ ತದನಂತರಸಮಯ ದೊಳ್ ಸೂಕ್ಷ್ಮಸಾಂಪರಾಯಸಂಯಮಸಮನ್ವಿತಂ ಸೂಕ್ಷ್ಮಸಾಂಪರಾಯಕ್ಷಪಕನಾಗಿ: **ಆದಿಪು,** ೧೦. ೧೪ ವ)

**ಸೂಕ್ಷ್ಮಸಾಂಪರಾಯಲೋಭ** – ಸೂಕ್ಷ್ಮಲೋಭ (ಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮಕಾಲದಿಂ ಸೂಕ್ಷ್ಮಸಾಂಪರಾಯಲೋಭಕ್ಕೆ ನಿರ್ಮೂಲ ವಿಲಯಮಂ ಮಾಡಿ: **ಆದಿಪು,** ೧೦ ೧೪ ವ)

**ಸೂಕ್ಷ್ಮಸಾಂಪರಾಯಸ್ಥಿತ** – ಸೂಕ್ಷ್ಮಸಾಂಪರಾಯಕ್ಷಪಕ (ಯತಿ ಸೂಕ್ಷ್ಮಸಾಂಪರಾಯಸ್ಥಿತಂ ಯಥೋಕ್ತ ಪ್ರಶಸ್ತಪರಿಣಾಮಗದಾಹತಿಯಿಂದೆ ಸೂಕ್ಷ್ಮಲೋಭ ಪ್ರತಿಪಕ್ಷಕ್ಕ ಯಮನಿತ್ತನೇನುದ್ಧತನೋ: **ಮಲ್ಲಿನಾಪು,** ೧೪. ೬೩)

**ಸೂತ್ರರುಚಿ** – ಆಜ್ಞಾರುಚಿ ಮಾರ್ಗರುಚಿ ಉಪದೇಶರುಚಿ ಸೂತ್ರರುಚಿ ಬೀಜರುಚಿ ಸಂಕ್ಷೇಪರುಚಿ ವಿಸ್ತಾರರುಚಿ ಅರ್ಥರುಚಿ ಅವಗಾಢರುಚಿ ಪರಮಾವಗಾಢರುಚಿ ಎಂಬ ಸಮ್ಯಕ್ತ್ವದ ಹತ್ತು ಭೇದಗಳಲ್ಲಿ ಒಂದು (ಸೂತ್ರರುಚಯೆಂಬುದು ತಪೋವಿಕಲ್ಪಕ್ರಮಪ್ರರೂಪಣಮಪ್ಪಾಚಾರ ಶಾಸ್ತ್ರಮಾತ್ರ ಶ್ರವಣ ಸಂಜನಿತ ಶ್ರದ್ಧಾನಂ: **ಚಾವುಂಡಜಯ,** ಪು. ೩೩೬)

**ಸೂರ್ಯಪ್ರತಿಮಾಯೋಗ** – ಆತಪಯೋಗ, ಗ್ರೀಷ್ಮ ಋತುವಿನಲ್ಲಿ ಬಿಸಿಲಿನಲ್ಲಿ ನಿಂತು ತಪಸ್ಸು ಮಾಡುವುದು (ಸೂರ್ಯಪ್ರತಿಮಾಯೋಗದೊಳೆ ಪೂಣ್ದು ವಿಶ್ರುತಜೈನವ್ರತಿ ನಿಲ್ವಂ: **ಸಮಯಪ,** ೭. ೬)

**ಸೂರ್ಯಪ್ರಭ** – ಭರತನ ಹದಿನಾಲ್ಕು ಅಜೀವರತ್ನಗಳಲ್ಲೊಂದಾದ ಛತ್ರರತ್ನದ ಹೆಸರು (ಚಕ್ರವರ್ತಿಯ ಕಟಕಮಂ ತನ್ನ ನೆಟಿಲೊಳೆ ಕಾವ ಸೂರ್ಯಪ್ರಭಮೆಂಬ ವಿಚಿತ್ರ ಮಣಿಮಯೂಖ ಚಿತ್ರಿತಚ್ಛತ್ರರತ್ನಮುಂ: **ಆದಿಪು,** ೧೧. ೩ ವ)

**ಸೂರ್ಯವಿಮಾನ** – ಒಂದು ಸ್ವರ್ಗ (ಅಲ್ಲಿಂ ಮೇಲೆ ದಶಯೋಜನಾಂತರದೊಳ್ ಕಿಂಚಿನ್ನ್ಯೂನಯೋಜನವಳಯದಿಂ ಸೂರ್ಯಕಾಂತಮಣಿಮಯಮಾಗಿ ಸೂರ್ಯ ವಿಮಾನಮುಂ ... ಇರ್ಕುಂ: **ಸುಕುಮಾಚ,** ೧೧. ೫೯ ವ)

**ಸೇನಾನಾಯಕ** – ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲೊಂದು, ಸಾಕೇತನಗರದಲ್ಲಿ ಹುಟ್ಟಿದ್ದು (ಸಾಕೇತನಗರದೊಳ್ ಪುಟ್ಟಿದ ಸೇನಾನಾಯಕ ಪುರೋಹಿತ ಗೃಹಪತಿ ತಕ್ಷಕರತ್ನಂಗಳುಂ: **ಆದಿಪು,** ೧೫. ೩ ವ)

**ಸೇನಾನಿರತ್ನ** – ಜೀವರತ್ನಗಳಲ್ಲಿ ಒಂದು, ಚಕ್ರವರ್ತಿಯ ಸೇನಾಧಿಪತಿ (ಷಡ್ವಿಧ ಸೇನಾನಾಯಕಪರಾಯಣನುಮಪ್ಪ ಅಯೋಧ್ಯನೆಂಬ ಸೇನಆನಿರತ್ನಮುಂ: **ಆದಿಪು,** ೧೧. ೩ ವ), ನೋಡಿ, **'ಜೀವರತ್ನ'**

**ಸೈದ್ಧಾಂತಿಕಚಕ್ರವರ್ತಿ** – ಷಟ್ಖಂಡಾಗಮವನ್ನು ಅಭ್ಯಸಿಸಿ ಜೈನಸಿದ್ಧಾಂತವನ್ನು ಕರಗತಮಾಡಿಕೊಂಡವನು (ಸೈದ್ಧಾಂತಿಕಚಕ್ರವರ್ತಿ ಮುನಿಚಂದ್ರಮುನೀಂದ್ರನ್ ವಂದ್ಯನುರ್ವಿಯೊಳ್: **ಚಂದ್ರಪ್ರಪು,** ೧. ೨೭)

**ಸೌಧರ್ಮ** – ಹದಿನಾರು ಸ್ವರ್ಗಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬); ಹದಿನಾರು ಸ್ವರ್ಗಗಳಲ್ಲಿ ಮೊದಲನೆಯದು (ಸೌಧರ್ಮದೊಳಮರತ್ವಶ್ರೀ ಧಾರಿಣಿಯಾಗಿ ಮತ್ತೆ ಬಂದೀಗಳ್ ದುರ್ಯೋಧನಸುತೆಯುಂ ಭವದವರೋಧ ಜನಾಗ್ರಣಿಯುಮಾದಳ್: **ಚಂದ್ರಪ್ರಪು,** ೩. ೭೮)

**ಸೌಧರ್ಮಕಲ್ಪ** – ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತ ಎಂಬ ಹದಿನಾರು ಸ್ವರ್ಗಗಳಲ್ಲಿ ಒಂದು (ದಿವ್ಯಕಾಂತಾ ಕಟಾಕ್ಷ ಧವಲದೀಧಿತಿ ಸುಧಾಸೌಧಮಪ್ಪ ಸೌಧರ್ಮಕಲ್ಪದ ಶ್ರೀನಿಳಯವಿಮಾನದೊಳ್: **ನೇಮಿನಾಪು,** ೪. ೮)

**ಸೌಧರ್ಮೇಂದ್ರ** – ಹದಿನಾರು ಮಂದಿ ಇಂದ್ರರಲ್ಲಿ ಒಬ್ಬ, ಸೌಧರ್ಮಕಲ್ಪದ ಒಡೆಯ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರಾಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೮೯;

**ಸೌನಂದಕ** – ಭರತ ಚಕ್ರವರ್ತಿಯ ಏಳು ಅಜೀವರತ್ನಗಳಲ್ಲಿ ಒಂದಾದ ಖಡ್ಗರತ್ನದ ಹೆಸರು (ಸುದರ್ಶನಮೆಂಬ ಚಕ್ರರತ್ನಮಂ ಪೂಜಿಸಿಂಬಟೆಯುಂ ... ಸೌನಂದಕನೆಂಬ ಖಡ್ಗರತ್ನಮುಂ ವಿಜಯಾರ್ಧಾಚಳ ಮಹಾಗುಹಾಗಹ್ವರಮುಖ ವಜ್ರಕವಾಟಪುಟ ವಿಘಟನಪಟುವಪ್ಪ ಚಂಡವೇಗಮೆಂಬ ದಂಡರತ್ನಮುಂ: **ಆದಿಪು,** ೧೧. ೩. ವ)

**ಸೌಮನಸ** – ಸುಮೇರುಪರ್ವತದ ಮೇಲಿನ ನಾಲ್ಕು ವನಗಳಲ್ಲಿ ಮೂರನೆಯದು (ಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ ಭದ್ರಶಾಲಾನಂದನ ಸೌಮನಸ ಪಾಂಡುಕವನ ವಿರಾಜಿತಮುಂ ಪಾಂಡುಕ ಪಾಂಡುಕಂಬಳರಕ್ತಕಂಬಳಾತಿರಕ್ತಕಂಬಳ ವಿಶಾಲ ರತ್ನಶಿಲಾಪ್ರತಿಷ್ಠಿತ: **ಆದಿಪು,** ೧. ೪೮ ವ); ರುಚಕಪರ್ವತದ ಪೂರ್ವದಿಕ್ಕಿನ ಎಂಟು ಶಿಖರಗಳಲ್ಲಿ ಒಂದು (ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಶ್ವ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣ ಚತುಃಕೂಟಂಗಳೊಳಂ: **ಆದಿಪು,** ೭. ೩ ವ)

**ಸೌಮನಸವನ** – ಸುಮೇರುಪರ್ವತದ ಮೇಲಿನ ನಾಲ್ಕು ವನಗಳಲ್ಲಿ ಮೂರನೆಯದು (ಜಿನಮಜ್ಜನಾಂಬು ಪಾಂಡುಕವನದಿಂ ಸೌಮನಸವನಕೆ ತದ್ವನದಿಂ ನಂದನವನಕೆ ಪರಿದುದಾ ನಂದನವನದಿಂ ಭದ್ರಶಾಲವನಕೆ ವಿಶಾಲಂ: **ಅಜಿತಪು,** ೪. ೬೨)

**ಸೌಮಿತ್ರಿ** – ಸುಮಿತ್ರೆಯ ಮಗ, ತ್ರಿಷಷ್ಟಿಶಲಾಕಾಪುರುಷರಲ್ಲಿ ಒಬ್ಬ ವಾಸುದೇವನಾದ ಲಕ್ಷ್ಮಣ (ಸೌಮಿತ್ರಿಯ ನಿರತಿಶಯ ಪ್ರೇಮಮನದನಂತುಟೆಂಬಂತುಟೆ ನಿದ್ರಾಮುದ್ರಿತಲೋಚನನಿರೆ ರಾಮಂ ರಕ್ಷಾನಿಮಿತ್ತಮೆಚ್ಚತ್ತಿರ್ದಂ: **ಪಂಪರಾ,** ೮. ೪)

**ಸ್ತೇನಪ್ರಯೋಗ** – ಅಸ್ತೇಯವ್ರತದ ಅತಿಚಾರ, ಕಳವಿಗೆ ಪ್ರೇರಿಸುವುದು (ಹೀನಾಧಿಕ ವಿನಿಮಾನ ಸ್ತೇನಾಹೃತ ದಾನಸದೃಶ ಮಿಶ್ರವಿಲೋಪ ಸ್ತೇನಪ್ರಯೋಗಮೆಂದಿವು ತಾನಸ್ತೇಯ ವ್ರತಕ್ಕತಿಕೃತ್ರಿಮಮಕ್ಕುಂ: **ಸುಕುಮಾಚ,** ೬. ೧೫)

**ಸ್ತೇಯ** – ಕಳ್ಳತನ (ವಿಕಲಮತಿಯಾದ ಮೃದುಮತಿ ಸ್ತೇಯಮೆ ತನಗೆ ಜೀವನೋಪಾಯಮಾಗೆ ನೆಗಳೂತ್ತುಮೊಂದು ದಿವಸಂ: **ಪಂಪರಾ,** ೧೫. ೪೭ವ)

**ಸ್ತೇಯಾನಂದ** – ಹಿಂಸಾನಂದ ಮೃಷಾನಂದ ಸ್ತೇಯಾನಂದ ಮತ್ತು ಅಂರಕ್ಷಣಾನಂದವೆಂಬ ನಾಲ್ಕು ಬಗೆಯ ರೌದ್ರಧ್ಯಾನಗಳಲ್ಲಿ ಒಂದು, ಕಳ್ಳತನ ಮಾಡುವ ಆಲೋಚನೆಯಲ್ಲಿ ಪಡೆಯುವ ಆನಂದ (ದ್ವಿತೀಯ ರೌದ್ರಧ್ಯಾನಂ ಬಲ್ಲಾಳ್ತನದೊಳಕ್ಕೆ ಮೇಣ್ ತೆಱಪಂ ಪಾರ್ದಕ್ಕೆ ಅಪಹರಣದೊಳಪ್ಪ ಸಂಕಲ್ಪಾಧ್ಯವಸಾನಂ ಸ್ತೇಯಾನಂದಮೆಂಬುದಕ್ಕುಂ: **ಅಜಿತಪು,** ೮. ೨೮ ವ): (ಬಳಾತ್ಕಾರದಿಂದಕ್ಕೆ ಪ್ರಮಾದಮಂ ಪಾರ್ದದರ್ಕೆ ಪರಿಸ್ವಾಪಹರಣದೊಳಪ್ಪ ಸಂಕಲ್ಪಾಧ್ಯವಸಾನಂ ಸ್ತೇಯಾನಂದಮೆಂಬ ತೃತೀಯ ರೌದ್ರಂ: **ಚಾವುಂಡಪು,** ಪು, ೩೮೫), ನೋಡಿ **'ರೌದ್ರ[ಧ್ಯಾನ]'**

**ಸ್ತೋಕ** – ಕಾಲ ಅಳೆಯುವ ಪರಿಮಾಣ, ಏಳು ಉಚ್ಛ್ವಾಸಗಳ ಅವಧಿ (ಅದು ಸಮಯ ಅವಲಿ ಕೋಚ್ಛ್ವಾಸ ಸ್ತೋಕ ನಿಮೇಷ ನಾಡಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬. ೬೮ ವ)

**ಸ್ತ್ಯಾನಗೃದ್ಧಿ** – ಚಕ್ಷು ಅಚಕ್ಷು ಅವಧಿ ಕೇವಲ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು, ಎಬ್ಬಿಸಿದರೂ ಮತ್ತೆ ಮಲಗುವಂತೆ ಮಾಡುವುದು, ಕನವರಿಸುವಮತೆ ಮಾಡುವುದು (ಚಕ್ಷುದರ್ಶನಾವರಣೀಯಂ ಅಚಕ್ಷುದರ್ಶನಾವರಣೀಯಂ ಅವಧಿದರ್ಶನಾವರಣೀಯಂ ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ)

**ಸ್ತ್ರೀರತ್ನ** – ವಿಜಯಾರ್ಧಪರ್ವತದಲ್ಲಿ ಹುಟ್ಟಿದ ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲೊಂದು (ವಿಜಯಾರ್ಧಪರ್ವತದೊಳ್ ಪುಟ್ಟಿದ ಗಜಾಶ್ವಸ್ತ್ರೀರತ್ನಂಗಳುಂ: **ಆದಿಪು,** ೧೫. ೩ ವ)

**ಸ್ತ್ರೀವೇದ** – ಹೆಣ್ಣಿಗೆ ಗಂಡಿನ ಬಗ್ಗೆ ಮೋಹವುಂಟುಮಾಡುವ ಕರ್ಮ, ಚಾರಿತ್ರ ಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯಷಟ್ಕಮುಮಂ ಘಾತಿಸಿಳ **ಆದಿಪು,** ೧೦. ೧೪ ವ)

**ಸ್ಥಪತಿರತ್ನ** – ಚಕ್ರವರ್ತಿಗೆ ದೊರೆಯುವ ಜೀವರತ್ನಗಳಲ್ಲಿ ಒಂದು, ಉತ್ತಮ ವಾಸ್ತುಶಿಲ್ಪಿ (ಅನೇಕ ಚೈತ್ಯಾಲಯಂಗಳಂ ಸ್ಥಪತಿರತ್ನಂಗಳಿಂ ಮಾಡಿಸಿ: **ಅಜಿತಪು,** ೯. ೩೫ ವ)

**ಸ್ಥವಿರಕಲ್ಪ** – ಒಂದೇ ಕಡೆ ನಿಲ್ಲುವ ಶ್ರಮಣ, ಏಕಾಂಗವಿಹಾರಿಯಾಗಿರಲಾರದೆ ಋಷಿಸಂಘದಲ್ಲಿದ್ದು ಉಪದೇಶ ನೀಡುವ ಸಾಧು ಪರಂಪರೆ (ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗಟ್ಟಿದರ್: **ವಡ್ಡಾರಾ,** ಪು ೯೨, ಸಾ ೧)

**ಸ್ಥಾನಲಾಭ** – ನಲವತ್ತೆಂಟು ದೀಕ್ಷಾನ್ವಯಗಳಲ್ಲಿ ಒಂದು (ಅವತಾರ ವೃತ್ತಿಲಾಭ ಸ್ಥಾನಲಾಭ ... ಉಪಯೋಗತ್ವಮೆಂಬ ಎಂಟುಂ ಬೆರಸು ಪೂರ್ವೋಕ್ತೋಪನಯ ನಾದಿ ಚತ್ವಾರಿಂಶತ್ ಕ್ರಿಯೆಗಳೊಡನೆ ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ: **ಆದಿಪು,** ೧೫. ೧೬ ವ)

**ಸ್ಥಾವರ** – ಇದ್ದ ಸ್ಥಳವನ್ನು ಬಿಟ್ಟು ಕದಲಲಾರದ ಏಕೇಂದ್ರಿಯ ಜೀವ, ಸ್ಪರ್ಶನೇಂದ್ರಿಯ ಮಾತ್ರವಿರುವ ಪೃಥ್ವೀಕಾಯ, ಅಪ್‌ಕಾಯ, ತೇಜೋಕಾಯ, ವಾಯುಕಾಯ ಮತ್ತು ವನಸ್ಪತಿಕಾಯ ಎಂಬ ಐದು ವಿಧವಾದ ಜೀವಗಳು (ಸ್ಪರ್ಶನೇಂದ್ರಿಯ ಮಾತ್ರಂಗಳ್ ಸ್ಥಾವರಂಗಳೆಂಬುವು ಅವು ಪೃಥಿವಿ, ಅಪ್, ತೇಜೋ, ವಾಯು, ವನಸ್ಪತಿಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ) ಏಕೇಂದ್ರಿಯಜನ್ಮಕ್ಕೆ ಕಾರಣವಾದ ನಾಮಪ್ರಕೃತಿ (ತತ್ಪ್ರಾಯೋಗ್ಯಾನುಪೂರ್ವೇಕೇಂದ್ರಿಯ ವಿಕಳೇಂದ್ರಿಯ ಜಾತ್ಯಾತಪೋದ್ಯೋತ ಸ್ಥಾವರಸಾಧಾರಣಸೂಕ್ಷ್ಮಂಗಳೆಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ)

**ಸ್ಥಾವರನಾಮಕರ್ಮ** – ಏಕೇಂದ್ರಿಯಜನ್ಮಕ್ಕೆ ಕಾರಣವಾದ ನಾಮಪ್ರಕೃತಿ (ತ್ರಸನಾಮಕರ್ಮೋದಯವಶಂಗಳ್ ತ್ರಸಕಾಯಂಗಳ್, ಸ್ಥಾವರನಾಮಕರ್ಮಪಾಕಾ ಧೀನಂಗಳ್ ಸ್ಥಾವರಂಗಳ್: **ಆದಿಪು,** ೧೦ ೬೩ ವ)

**ಸ್ಥಿರ** – ನಾಮಕರ್ಮಪ್ರಕಾರಗಳಲ್ಲಿ ಒಂದು, ಇದರಿಂದ ರಸಾದಿ ಧಾತುಗಳು ಶರೀರದಲ್ಲಿ ನೆಲೆ ನಿಲ್ಲುತ್ತವೆ (ಸ್ಥಿರ ಅಸ್ಥಿರ ಶುಭ ಅಶುಭ ಸುಸ್ವರ ದುಸ್ವರ ... ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೪೯ ವ)

**ಸ್ಥಿರಬೋಧ** – ಕೇವಲಜ್ಞಾನಿ (ಸ್ಥಿರಬೋಧಂ ಚಂಪೆಯೊಳ್ ಪೆಂಪೆಸೆದಿರೆ ವಸುಪೂಜ್ಯಾತ್ಮಜಂ ... ನೆರ್ಮಿದರ್: **ಶಾಂತಿಪು,** ೧೨. ೩೦)

**ಸ್ಪರ್ಶನಾಮಾಷ್ಟಕ** – ಎಂಟು ಬಗೆಯ ಸ್ಪರ್ಶನಾಮಕರ್ಮಪ್ರಕೃತಿಗಳು (ಸ್ಪರ್ಶಾಷ್ಟಕಂ ಅಗುರುಲಘುತ್ವ ಚತುಷ್ಕವಿಹಾಯೋಗತಿದ್ವಿಕಸ್ಥಿರಾಸ್ಥಿರಶುಭಾಶುಭ ಸುಸ್ವರದುಸ್ವರ ಸುಭಗದುರ್ಭಗ ಪ್ರತ್ಯೇಕಶರೀರಾಯಶಸ್ಕೀರ್ತಿರನಾದೇಯನಿರ್ಮಾಣ ಪರ್ಯಾಪ್ತ ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೨೩ ವ)

**ಸ್ಪರ್ಶಪ್ರವೀಚಾರ** – ಸ್ಪರ್ಶದ ಮೂಲಕ ರತಿಸುಖವನ್ನು ಪಡೆಯುವುದು (ಸಪ್ತಸಾಗರ ಆಯುಷ್ಯರುಂ ಸ್ಪರ್ಶಪ್ರವೀಚಾರರುಂ ... ಅಪ್ಪ ಸಾಮಾನಿಕದೇವರಾಗಿ: **ಕರ್ಣನೇಮಿ,** ೧. ೧೨೬ ವ)

**ಸ್ಯಾದ್ವಾದ** – [ಸ್ಯಾತ್+ವಾದ] ಪದಾರ್ಥಧ ಪೂರ್ಣಜ್ಞಾನವನ್ನು ಪಡೆಯಲೋಸುಗ ಅದರ ಒಂದೊಂದು ಗುಣವನ್ನೂ ಪ್ರಧಾನವಾಗಿಟ್ಟುಕೊಂಡು ಪರೀಕ್ಷಿಸುವುದು, ಆನಂತರ ಇನ್ನೊಂದು ಮತ್ತೊಂದು – ಹೀಗೆ ಸ್ವಲ್ಪಸ್ವಲ್ಪವಾಗಿ ತಿಳಿಯುವ ಕ್ರಮ (ಸ್ಯಾದ್ವಾದ ಪೂರ್ವಾಚಲಸಮುದಿತಂ ... ಹೇಮಾಂಗಂ ವರ್ಧಮಾನಾಹಿಕರಂ ... ಅತಿನಿರ್ದೋಷಮಂ ಮಾಟ್ಕೆ ನಮ್ಮೊಳ್: **ಧರ್ಮಪ,** ೧. ೧)

**ಸ್ವಗುರುಸ್ಥಾನಸಂಕ್ರಾಂತಿ** – ಒಂದು ಗರ್ಭಾನ್ವಯಕ್ರಿಯೆ, ತನ್ನ ಗುರುವಿನ ಸ್ಥಾನವನ್ನು ಹೊಂದುವುದು (ವಿವಾಹ ವರ್ಣಲಾಭ ಕುಲಚರ್ಯಾ ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ ... ಸ್ವಗುರುಸ್ಥಾನಸಂಕ್ರಾಂತಿ ... ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಸ್ವಗೃಹತ್ಯಾಗ** – ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ತನ್ನ ಸಂಪತ್ತನ್ನು ದಾನಮಾಡಿ ಆತ್ಮಕಲ್ಯಾಣಸಾಧನೆಗಾಗಿ ಮನೆಬಿಟ್ಟು ಹೋಗುವುದು (ಆದಾನಮುಂ ... ಸ್ವಗೃಹತ್ಯಾಗಮುಂ ... ಚಕ್ರಾಭಿಷೇಕಮುಂ ... ನಿರ್ವಾಣಪರ್ಯಂತಮಪ್ಪ ಅಯ್ವತ್ತಮೂಱು ಗರ್ಭಾನ್ವಯಕ್ರಿಯೆಯೊಳ್: **ಚಾವುಂಡಜಯ,** ಪು. ೧೮೦)

**ಸ್ವಪ್ನ** – ಅಷ್ಟಾಂಗಮಹಾನಿಮಿತ್ತಗಳಲ್ಲಿ ಒಂದು (ಸ್ವಪ್ನಮೆಂಬುದುಂ ವಾತ ಪಿತ್ತ ಶ್ಲೇಷ್ಮಾದಿರಹಿತಮಪ್ಪ ಪಶ್ಚಿಮರಾತ್ರಿಭಾಗದೊಳ್ ಚಂದ್ರ ಸೂರ್ಯಧರಾದ್ರಿ ಸಮುದ್ರ ಮುಖಪ್ರವೇಶನಮಂ, ಮಹೀಮಂಡಲ ಆಲಿಂಗನಾದಿಗಳಪ್ಪ ಶುಭಮುಮಂ, ಘೃತತೈಲ ಅಭ್ಯಂಗೆಯ್ದು ಮೆಯ್ವರಸು ಸೂಕರ ಖರಭಾರೂಢ ಪ್ರಾಗ್ವಿಗ್ಗಮನಾದಿ ಗಳಪ್ಪ ಶುಭಮುಮಂ ಪೇೞ್ವುದು: **ಚಾವುಂಡಜಯ,** ಪು. ೧೫೪)

**ಸ್ವಭಾವಾತಿಶಯ** – ಅರ್ಹಂತನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳು ಅಥವಾ ವಿಶೇಷಗಳಲ್ಲಿನ ನಿಸ್ವೇದತೆ, ನಿರ್ಮಲಶರೀರ, ಹಾಲಿನಂತೆ ಬಿಳಿರಕ್ತ, ವಜ್ರವೃಷಭ ನಾರಾಚನಸಂಹನನ, ಸಮಚತುರಸ್ರ ಶರೀರಸಂಸ್ಥಾನ, ಅನುಪಮರೂಪ, ಸುಗಂಧದ ಉಸಿರು, ಸಾವಿರದೆಂಟು ಉತ್ತಮ ಲಕ್ಷಣಗಳು, ಅನಂತಬಲ ಹಾಗೂ ಹಿತಮಿತಭಾಷಣ ಎಂಬ ಹುಟ್ಟಿನ ಹತ್ತು ವಿಶೇಷಗಳು (ನಿಸ್ವೇದತ್ವಮುಂ ನಿರ್ಮಲತ್ವಮುಂ ಕ್ಷೀರಗೌರತ್ವಮುಂ ವಜ್ರವೃಷಭನಾರಾಚಸಂಹನನಮುಂ ಸಮಚತುರಸ್ರ ಸಂಸ್ಥಾನಮುಂ ಸುರೂಪತೆಯುಂ ಸುರಭಿಗಂಧತ್ವಮುಂ ಸ್ವಸ್ತಿಕಾಂಕುಶ ಧ್ವಜತೋರಣಾದ್ಯಷ್ಟೋತ್ತರಲಕ್ಷಣಸಹಸ್ರಮುಮಪ್ರಮವೀರತ್ವಮುಂ ಪ್ರಿಯಹಿತವಾದಿತ್ವ ಮುಮೆಂಬ ದಶವಿಧ ಸ್ವಭಾವಾತಿಶಯಸಂಪನ್ನನುಂ: **ಅಜಿತಪು,** ೫. ೯೩ ವ)

**ಸ್ವಯಂಪ್ರಭವಿಮಾನ** – ಸ್ವರ್ಗಲೋಕದಲ್ಲಿರು ಒಂದು ಸ್ಥಳದ ಹೆಸರು ಶ್ರೀಮತ್ಯಾರ್ಯೆಯು ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ತತ್ಸ್ವಯಂಪ್ರಭಾ ವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ: **ಆದಿಪು,** ೫. ೭೦ ವ)

**ಸ್ವಯಂಭೂರಮಣ**– ಮಧ್ಯಲೋಕದ ಒಂದು ಸಾಗರ (ಮುಕ್ತಿಸ್ಥಿರ ಸೌಖ್ಯಾಂಭಸ್ವಯಂ ಭೂರಮಣಜಲಧಿ ರಕ್ಷಿಕ್ಕೆ ಶಾಂತೀಶನೆಮ್ಮಂ: **ಶಾಂತಿಪು,** ೧. ೧)

**ಸ್ವರಾಜ್ಯ** – ಒಂದು ಗರ್ಭಾನ್ವಯಕ್ರಿಯೆ, ಜಿನನಾಗುವವನಿಗೆ ಮಾಡುವ ಪಟ್ಟಾಭಿಷೇಕ (ಯೌವರಾಜ್ಯ ಸ್ವರಾಜ್ಯ ಚಕ್ರಲಾಬ ದಿಗ್ವಿಜಯ ಚಕ್ರಾಭಿಷೇಕ ... ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಸ್ವರಾಜ್ಯಕ್ರಿಯೆ** – ಅಭಿಷಿಕ್ತನಾಗಿ ಜಗತ್ತಿನ ಎಲ್ಲ ರಾಜರಿಂದ ಪೂಜೆಗೊಳ್ಳುವುದು (ಮೂರ್ಧಾಭಿಷಿಕ್ತರಪ್ಪ ಪಾರ್ಥಿವರಿಂದಭಿಷಿಕ್ತನಾಗಿ ನೆಲನೆಲ್ಲನಾಳ್ವುದು ಸ್ವರಾಜ್ಯಕ್ರಿಯೆ: **ಚಾವುಂಡಜಯ,** ಪು. ೧೮೫)

**ಸ್ವರ್ಗ** – ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಅನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು, (ಸ್ವರ್ಗಲೋಕದ ವ್ಯಾವರ್ಣನೆಯಂ ಮಾಡುವಲ್ಲಿ ಪನ್ನೆರಡನೆಯ ಸಹಸ್ರಾರಕಲ್ಪಮಂ ನೋಡುತ್ತುಮಿರ್ಪುದುಂ: **ಧರ್ಮಾಮೃ,** ೮. ೨೦ ವ), ನೋಡಿ **'ಷೋಡಶಕಲ್ಪ'**

**ಸ್ವರ್ಗಾವತರಣಕಲ್ಯಾಣ** – ತೀರ್ಥಂಕರರ ಜೀವವು ಇಳಿದು ತಾಯಗರ್ಭ ಸೇರುವುದು, ಗರ್ಭಾವತರಣಕಲ್ಯಾಣ (ಸ್ವರ್ಗಾವತರಣಕಲ್ಯಾಣಪೂಜಾಪೂರ್ವಕಮಾ ಪ್ರಾಣತೇಂದ್ರನಾ ದೇವಿಯ ಗರ್ಭಕ್ಕವತರಿಸೆ: **ಚಾವುಂಡಜಯ,** ಪು. ೧೧೨)

**ಸ್ವಸಂವೇದನಜ್ಞಾನ** – ಆತ್ಮಜ್ಞಾನ (ತನ್ನ ಶರೀರದೊಳಾತ್ಮನುಂಟೆಂಬುದು ಸ್ವಸಂವೇದನಜ್ಞಾನಪರಿವೇದ್ಯಂ: **ಧರ್ಮಬಾಹು,** ೫. ೬೬ ವ)

**ಸ್ವಸ್ತಿಕಾವರ್ತ** – ಒಂದು ವಿಮಾನ (ಸ್ವಸ್ತಿಕಾವರ್ತಮೆಂಬ ವಿಮಾನದೊಳ್ ಸಾಮಾನಿಕ ದೇವರಾಗಿ ಪುಟ್ಟಿದರ್: **ಧರ್ಮಾಮೃತ,** ೧೪. ೪೧ ವ)

**ಸ್ವಸ್ಥಾನ** – ಜೀವಿಯ ಮೂರು ಅವಸ್ಥೆಗಳಲ್ಲಿ ಒಂದು (ನಿರವಶೇಷ ಮೋಹೋಪಶತ ಮೋದ್ಭೂತ ಯಥಾಖ್ಯಾತ ಚಾರಿತ್ರಸಂಪನ್ನಂ ಅಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ: **ಆದಿಪು,** ೬. ೩೩ ವ)

**ಸ್ವಾಧ್ಯಾಯ** – ಶ್ರಾವಕನ ಷಟ್ಕರ್ಮಗಳಲ್ಲಿ ಒಂದು, ಧರ್ಮಶಾಸ್ತ್ರಗಳ ಅಭ್ಯಾಸ, ಇದರಲ್ಲಿ ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂಬ ಐದು ಬಗೆಗಳು (ನಿಮ್ಮಡಿ ನೀಮೀ ಚಾತುರ್ಮಾಸಂ ಇಲ್ಲಿರ್ಪನ್ನೆಗಂ ಸ್ವಾಧ್ಯಾಯ ಅನುಷ್ಠಾನ ನಿಯಮದಿಂ ಮೋನಗೊಂಡಿರ್ಪುದು ಇದಂ ನಿಮ್ಮನಾಂ ಕಯ್ಯನೊಡ್ಡಿ ಬೇಡಿದೆನೆಂಬುದುಂ ಮುನೀಶ್ವರರ್ ವಿಗೊಂಬುದುಂ: **ಸುಕುಮಾಚ,** ೧೧. ೩೮ ವ); ವಾಚನ ಪೃಚ್ಛನಾ ಅನುಪ್ರೇಕ್ಷೆ ಪರಿವರ್ತನೆ ಮತ್ತು ಧರ್ಮಕಥೆ – ಇವು ಸ್ವಾಧ್ಯಾಯದ ಭಾಗಗಳು (ವಾಚನಾಪೃಚ್ಛನಾನುಪ್ರೇಕ್ಷಾಮ್ನಾಯ ಧರ್ಮೋಪವೇಶಮಪ್ಪ ಸ್ವಾಧ್ಯಾಯಮುಮಂ: **ಶಾಂತೀಶ್ವಪು,** ೧೩. ೭೮ ವ) ನೋಡಿ **'ಷಟ್ಕರ್ಮ'**

**ಸ್ವಾಭಾವಿಕ** – ತೀರ್ಥಂಕರನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳಲ್ಲಿ ಒಂದು ಬಗೆ (ಸ್ವಾಭಾವಿಕ ಕರ್ಮಕ್ಷಯಂ ದೇವಕೃತಂಗಳೆಂಬ ಮೂವತ್ತುನಾಲ್ಕುಂ ಅತಿಶಯಂಗಳೊಳ್ ಒಂದುಗುಂದದಿರೆಯುಂ: **ಶಾಂತಿಪು,** ೧೨. ೧೪ ವ)

## ಹ

**ಹರಿ** – ಇಂದ್ರ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರಾಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯; ವಾಸುದೇವ (ಹರಿಗಿರಿದೆಯ್ದಿದ ವಿಸ್ಮೃತಿ ಮರಣಮನಾಹರಿವಿಯೋಗದಿಂ ಹರಿಗಾಗಳ್ ಪಿರಿದಾಗಿ ಪುದಿದ ಭೇದದ ಪರಿಯಂ ಕೇಳ್ದರ್ಕಕೀರ್ತಿ ನೆಜೆ ಬೆಜಗಾದಂ; **ಶಾಂತೀಶ್ವಪು,** ೫. ೩೮);

**ಹರಿವರ್ಷ** – ಜಂಬೂದ್ವೀಪದ ಭರತವರ್ಷ ಹೈಮವತವರ್ಷ ಹರಿವರ್ಷ ವಿದೇಹವರ್ಷ ರಮ್ಯಕವರ್ಷ ಹೈರಣ್ಯವರ್ಷ ಮತ್ತು ಐರಾವತವರ್ಷವೆಂಬ ಏಳು ಭಾಗಗಳಲ್ಲಿ ಒಂದು, ಮಧ್ಯಮ ಭೋಗಭೂಮಿ (ಹರಿವರ್ಷಮೆಂಬ ವಿಷಯದೊಳ್ ಉರುಶೋಭಾಧಾನಮಾಗಿ ಸೊಗಯಿಪುದು ... ಭೋಗಪುರಮೆಂಬುದು: **ಕರ್ಣನೇಮಿ,** ೨. ೮೧), ನೋಡಿ **'ಜಂಬೂದ್ವೀಪ'**

**ಹಲಧರ** – ವಾಸುದೇವಸಹೋದರ, ಬಲರಾಮ (ಪದೆದೆಜಗಿ ಹಲಧರಂ ತ್ರಿಃಪ್ರದಕ್ಷಿಣಂಗೆಯ್ದು ಸೇಸೆಗೊಂಡು: **ಶಾಂತಿಪು,** ೧. ೮೨)

**ಹಾಮಾದಂಡ** – ವಾಗ್ದಂಡ: ಹಾ, ಮಾ ಎಂಬ ಶಬ್ದಗಳನ್ನು ಹೇಳುವುದರ ಮೂಲಕ ಕೊಡುತ್ತಿದ್ದ ಶಿಕ್ಷೆ (ಕ್ರಮದಯ್ವರಿಂದೆ ಹಾದಂಡಮಯ್ವರುಂ ಮನುಗಳಿಂದೆ ಹಾಮಾದಂಡಂ ಸಮನಿಸೆ: **ಪಂಪರಾ,** ೧. ೮೯)

**ಹಾಮಾಧಿಕ್ಕಾರದಂಡ** – ಹಾಮಾದಂಡ (ಮತ್ತಮಯ್ವರ್ ಹಾಮಾಧಿಕ್ಕಾರದಂಡಮಂ ಮಾಡಿದರ್: **ಚಾವುಂಪು,** ಪು. ೧೬೭. ಸಾ. ೩–೪)

**ಹಾಸ್ಯ** – ಚಾರಿತ್ರಮೋಹನೀಯಕರ್ಮದ ಉತ್ತರೋತ್ತರ ಪ್ರಕೃತಿಗಳಲ್ಲಿ ಒಂದಾದ ಒಂಬತ್ತು ನೋಕಷಾಯಗಳಲ್ಲಿ ಒಂದು (ಕ್ರಮಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ ಪುರಾತನ ಸತ್‌ಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನ ನೋಕಷಾಯಷಟ್ಕಮುಮಂ ಘಾತಿಸಿ: **ಆದಿಪು,** ೧೦. ೧೪ ವ)

**ಹಿಂಸಾನಂದ** – ನಾಲ್ಕು ಬಗೆಯ ರೌದ್ರಧ್ಯಾನದಲ್ಲಿನ ಮೊದಲನೆಯ ಬಗೆ, ಇತರರಿಗೆ ಪೀಡೆಯನ್ನುಂಟುಮಾಡುವುದರಲ್ಲಿಯೇ ಸಂತೋಷಪಟ್ಟು ಸದಾ ಪರೋಪದ್ರವದ ಧ್ಯಾನದಲ್ಲಿರುವುದು (ಸಂರಂಭ ಸಮಾರಂಭಾರಂಭ ಲಕ್ಷಣವಾಗಿ ಪರಪೀಡಾಸ್ವರೂಪಮುಮಪ್ಪ ಹಿಂಸೆಯೊಳತ್ಯರ್ಥ ಸಂಕಲ್ಪಾಧ್ಯಸಾನಂ ಹಿಂಸಾನಂದಮೆಂಬ ಪ್ರಥಮರೌದ್ರಂ: **ಚಾವುಂಡಜಯ,** ಪು ೩೮೫)

**ಹಿಮಾಂಶು** – ನಯನಾಗ್ನಿ ಕಷಾಯ ಹೃಷಿಕ ಷಣ್ಮುನಿ ಕ್ರಮನರಕಂಗಳ್ – ಅಸಜ್ಞಿಜೀವ, ಸರೀಸೃಪ, ಪಕ್ಷಿ, ಹಾವು, ಸಿಂಹ, ಲಲನಾಜನ ಹಾಗೂ ಮನುಷ್ಯರು ಕ್ರಮವಾಗಿ ಜೀವಿಸುವ ಒಂದರಿಂದ ಏಳರವರೆಗಿನ ನರಕಗಳ ಕ್ರಮ [ಚಂದ್ರ–೧ ನಯನ–೨ ಅಗ್ನಿ–೩ ಕಷಾಯ–೪ ಇಂದ್ರಿಯ–೫ ಷಟ್–೬ ಮತ್ತು ಮುನಿ–೭] (ಹಿಮಾಂಶು ನಯನಾಗ್ನಿ ಕಷಾಯ ಹೃಷೀಕ ಷಣ್ಮುನಿ ಕ್ರಮನರಕಂಗಳೊಳ್ ನೆಲಸುಗುಂ: **ಆದಿಪು,** ೫. ೯೪)

**ಹಿರಣ್ಯಗರ್ಭ** – ಆದಿ ತೀರ್ಥಂಕರ (ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ ಪಿರಿದಚ್ಚರಿಯೆನೆ ಹಿರಣ್ಯಗರ್ಭನ ನಿರುಪಮ ಗರ್ಭಾವತರಣ ಮಂಗಳವಿಧಿಯೊಳ್: **ಆದಿಪು,** ೭. ೨೬)

**ಹಿರಣ್ಯೋತ್ಕೃಷ್ಟಜನ್ಮತಾ** – ಒಂದು ಗರ್ಭಾನ್ವಯಕ್ರಿಯೆ, ಜಿನಜನನಿಯ ಗರ್ಭದಲ್ಲಿ ಅವತರಿಸುವುದು (ದಾನಸುಖೋದಯ ಇಂದ್ರತ್ಯಾಗ ಅವತಾರ ಹಿರಣ್ಯ ಗರ್ಭೋತ್ಕೃಷ್ಟಜನ್ಮತಾ ... ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಹುಂಡಸಂಸ್ಥಾನ** – ಶರೀರದ ಅವಯವಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ (ಅಜಿಯದ ಬಾಲಂ ಬೀದಿಯ ಹಜಿಮಣ್ಣಿಂ ಮಾಡಿದೊಂದು ಹಾಹೆಯು ತೆಱದಿಂ ತಱಬಱಿಕಂ ವಿಕಟಾಕೃತಿ ನೆಱೆ ನಿಷ್ಠುರನಿವೃತ ಹುಂಡಸಂಸ್ಥಾನಂಗಳ್: **ಶಾಂತೀಶ್ವಪು,** ೯. ೧೦೭)

**ಹುಂಡಾವಸರ್ಪಿಣಿ** – ಅನೇಕ ಅವಸರ್ಪಿಣಿಗಳ ನಂತರ ಬರುವ ಕಾಲಾವಧಿ, ಶರೀರದ ಅಂಗೋಪಾಂಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ (ಅತಿಭಂಗಂ ದೊರೆಕೊಂಡುದಿಂದು ಭರತೇಶ್ವರಂಗೆ ಹುಂಡಾವಸರ್ಪಿಣೀ ವಿಳಸನದಿಂ: **ಆದಿಪು,** ೧೪. ೧೧೪)

**ಹೇತಿವಿದಾರಣಿ** – ಒಂದು ವಿದ್ಯೆ (ಸೌಜನ್ಯ ಕಂದಾಂಕುರಂ ಶ್ರೀವಿಜಯಂಗೆ ಹೇತಿ ವಿದಾರಣಿಯುಂ ಬಂಧವಿಮೋಚಿನಿಯುಮೆಂಬಿದೆರಡು ವಿದ್ಯೆಗಳಂ ಕೊಟ್ಟು; **ಶಾಂತಿಪು,** ೬. ೩೭ ವ)

**ಹೇಯ** – ತತ್ತ್ವದ ಎರಡು ಬಗೆಗಳಲ್ಲಿ ಒಂದು, ಸಂಸಾರಕಾರಣವಾದುದು (ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ ಸಂಸಾರ ಕಾರಣಂಗಳ್ ಹೇಯಂಗಳ್: **ಆದಿಪು,** ೧೦. ೬೩ ವ); ಕ್ಷುಲ್ಲಕ (ಹೇಯಮನಱಿದುಂ ರಾಜ್ಯಮನೀಯಲ್ ಅಪೇಕ್ಷಿಸುವಿರೆನೆ ನೀವೊಲ್ಲದುದಂ ಶ್ರೇಯಸ್ಕರಮಲ್ಲದುದಂ ಹೇಯಂ ಉಪಾದೇಯಂ ಎನಗದೆಂತಾದಪುದೋ: **ಪಂಪರಾ,** ೬. ೧೨೭)

**ಹೈಮವತಕ್ಷೇತ್ರ** – ಜಂಬೂದ್ವೀಪದ ಏಳು ಜನಪದಗಳಲ್ಲಿ, ಈ ಕ್ಷೇತ್ರದ ದಕ್ಷಿಣಕ್ಕೆ ಹಿಮವತ್ಪರ್ವತವೂ ಉತ್ತರಕ್ಕೆ ಮಹಾಹಿಮವತ್ಪರ್ವತವೂ ಪೂರ್ವಪಶ್ಚಿಮಸಮುದ್ರಗಳೂ ಇರುತ್ತವೆ; ಇದು ಜಘನ್ಯಭೋಗಭೂಮಿ ಒಂದು (ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ ಹರಿವರ್ಷ ವಿದೇಹ ರಮ್ಯಕ ಹೈರಣ್ಯವತೈರಾವತಗಳೆಂಬೇೞು ಜನಪದಂಗಳಿಂದಂ: **ಆದಿಪು,** ೧. ೪೮ ವ)

**ಹೈರಣ್ಯವತ** – ಏಳು ಜನಪದಗಳಲ್ಲಿ ಒಂದು, ಒಂದು ಜಘನ್ಯಭೋಗಭೂಮಿ, ರುಕ್ಮಿ ಮತ್ತು ಶಿಖರಿಪರ್ವತಗಳ ಮತ್ತು ಪೂರ್ವಪಶ್ಚಿಮ ಸಮುದ್ರಗಳ ನಡುವಿನ ಕ್ಷೇತ್ರ (ಹೈಮವತ ಹೈರಣ್ಯವತಂಗಳೆಲ್ಲಂ ಜಘನ್ಯಭೋಗಭೂಮಿಗಳಕ್ಕುಂ: **ಚಂದ್ರಪ್ರಪು,** ૩. ૩૨ ವ)

**ಹೋಸವ್ರತ** – ರಾತ್ರಿ ಊಟಮಾಡದೇ ಇರುವ ವ್ರತ (ಅಣುವ್ರತ ಗುಣವ್ರತ ಶಿಕ್ಷಾವ್ರತಗಳೆಂಬ ಪನ್ನೆರಡುಂ ವ್ರತಂಗಳಂ ಹೋಸವ್ರತಂಬೆರಸು ನಡೆಯಿಪುದು: **ಧರ್ಮಾಪ,** ೧೦. ೬೨ ವ)

**ಹ್ರೀ** – ಜಿನಜನನಿಯನ್ನು ಅಲಂಕರಿಸಲು ಸೌಧರ್ಮೇಂದ್ರನು ನಿಯೋಜಿಸಿದ ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ ... ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

*****



ಹಳಗನ್ನಡ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಕನ್ನಡದ ಚಂಪೂ ಕಾವ್ಯಗಳಲ್ಲಿ ಬಳಕೆಗೊಂಡ ಜೈನ ಪರಿಭಾಷೆಯ ಕೋಶವೊಂದನ್ನೇಕೆ ಸಿದ್ಧಪಡಿಸಬಾರದು ಎಂಬ ಆಲೋಚನೆ ಬಂದುದರ ಫಲವೇ ಪ್ರಸ್ತುತ 'ಕನ್ನಡ ಚಂಪೂ–ಜೈನ ಪರಿಭಾಷೆ' ಎಂಬ ಈ ಕೃತಿ. ಬಹುತೇಕ ಕನ್ನಡ ಚಂಪೂ ಜೈನ ಪುರಾಣಗಳ ಜೊತೆಗೆ, ಜೈನ ಪರಿಭಾಷೆಯ ಶ್ರೀಮಂತ ಆಕರಗಳಾದ 'ವಡ್ಡಾರಾಧನೆ' ಮತ್ತು 'ಚಾವುಂಡರಾಯ ಪುರಾಣ'ಗಳನ್ನೂ ಈ ಕೋಶದ ಸಿದ್ಧತೆಯಲ್ಲಿ ಬಳಸಿಕೊಳ್ಳಲಾಗಿದೆ. ಇದುವರೆಗೆ ಎಷ್ಟೋ ಜೈನ ಪರಿಭಾಷಾ ವಿವರಣೆಗಳು ಹೊರಬಂದಿವೆ. ಆದರೆ ಗಮನವಿದ್ದುದು ಪರಿಭಾಷೆಗಿಂತ ಹೆಚ್ಚಾಗಿ ಚಂಪೂ ಕಾವ್ಯಗಳ, ಅದರಲ್ಲಿಯೂ ಜೈನಪುರಾಣ ಕಾವ್ಯಗಳ ಅಧ್ಯಯನದಲ್ಲಿ ಪರಿಭಾಷೆ ನಡುವೆ ಒಂದು ಸಾಮಾನ್ಯ ಓದುಗರ ಕಾವ್ಯಾನುಸಂಧಾನಕ್ಕೆ ತೊಡಕುಂಟುಮಾಡುವ ಅಂಶ. ಆ ತೊಡಕನ್ನು ಈ ನನ್ನ ಪ್ರಯತ್ನದಿಂದ ಸಾಕಷ್ಟು ಮಟ್ಟಿಗೆ ನಿವಾರಿಸಬಹುದಲ್ಲ ಎಂಬುದರ ಕಡೆಗೆ ಇಲ್ಲಿನ ಗಮನ; ಅದು ನೆರವೇರಿದರೆ ಸಿದ್ಧಪಡಿಸಿದವನ ಶ್ರಮ ಸಾರ್ಥಕವಾದಂತೆ.

– ಡಾ| ಪಿ. ವಿ. ನಾರಾಯಣ



ಹೇಮಂತ ಸಾಹಿತ್ಯ
ರಾಜಾಜಿನಗರ, ಬೆಂಗಳೂರು-10